# ಒಲಿದು ಬಂದ ಹೆಣ್ಣು

( ಕಾದಂಬರಿ )

ತ್ರಿವಿಕ್ರಮ.







ಆನಂದ್ ಬ್ರದರ್ಸ್
ಬೆಂಗಳೂರು ೨
೧೯೫೧.

# ಮುನ್ನುಡಿ

ನಮ್ಮ ಸಮಾಜದ ಹಲವಾರು ಪ್ರಮುಖ ಸಮಸ್ಯೆಗಳಲ್ಲಿ ವಿವಾಹವೂ ಒಂದು. ವಿವಾಹವನ್ನು ಒಂದು ಸಮಸ್ಯೆಯೆನ್ನುವುದಕ್ಕಿಂತಲೂ ಒಂದು ಸಂಸ್ಥೆಯೆಂದರೂ ಸಲ್ಲುವುದು. ಈಗ ಕಾಲ ಬದಲಾಯಿಸಿದೆ. ಜನ ಹೆಚ್ಚು ವಿದ್ಯಾವಂತರಾಗುತ್ತಿದ್ದಾರೆ. ಹಿಂದಿನ ಕಾಲದ ಸಂಪ್ರದಾಯಶರಣತೆ, ಕಂದಾಚಾರಗಳು ಈಗ ಮಾಯವಾಗುತ್ತಿವೆ. ಸಮಾಜದ ದುರ್ದೆಶೆಗೆ ಕಾರಣವಾದ, ಅನೂಚಾನವಾಗಿ ನಡೆದುಬಂದಿರುವ ಪದ್ಧತಿಗಳು ನಿರ್ನಾಮ ವಾಗುತ್ತಿವೆಯೆಂದು ಹೇಳಬಹುದಾದರೂ, ನಮ್ಮ ಸಮಾಜ ಇನ್ನೂ ಬಹಳ ಮಟ್ಟಿಗೆ ಹಿಂದುಳಿದಿದೆಯೆಂಬುದಂತೂ ನಿರ್ವಿವಾದ.

ನಮ್ಮ ಸಮಾಜ ಪ್ರಗತಿ ಪಥದಲ್ಲಿ ಹೆಜ್ಜೆಯಿಟ್ಟಿದ್ದರೂ ಅದರ ಮುನ್ನಡೆ ಇನ್ನೂ ಮಂದವಾಗಿಯೇ ಇದೆ. ಸಮಾಜದಲ್ಲಿನ ಪ್ರಗತಿಗಾಮಿ ಶಕ್ತಿ ಗಳನ್ನು ಪ್ರತಿಭಟಿಸಿ ಅವುಗಳ ಚಲನೆಯನ್ನು ಕುಂಠಿತಗೊಳಿಸುತ್ತಿರುವ ಪ್ರಗತಿ ನಿರೋಧ ಶಕ್ತಿಗಳೂ, ಸಂಸ್ಥೆಗಳೂ, ನಮ್ಮ ಸಮಾಜದಲ್ಲಿ ದಿನ ದಿನಕ್ಕೂ ಹೆಚ್ಚುತ್ತಿವೆ. ವರದಕ್ಷಿಣೆಯ ಹಾವಳಿ ಇನ್ನೂ ಕಡಿಮೆಯಾಗಿಲ್ಲ. ಅಷ್ಟೇ ಅಲ್ಲ. ಹೆಣ್ಣು-ಗಂಡು ಇವರಿಬ್ಬರ ನಡುವೆ ನೈಸರ್ಗಿಕವಾದ ಅಂತರ ವನ್ನುಳಿದು ಇತರ ವಿಚಾರಗಳಲ್ಲಿ ಸ್ವಾತಂತ್ರ್ಯ ಸಮಾನತೆಗಳು ನಮ್ಮ ಸಮಾಜದಲ್ಲಿನ್ನೂ ಸ್ಥಾಪಿತವಾಗಿಲ್ಲ.

ವಿವಾಹದ ವಿಚಾರದಲ್ಲಂತೂ ಇದು ಸ್ವಯಂಸಿದ್ಧವಾದುದು. ನಮ್ಮ ಸಮಾಜದಲ್ಲಿ ವಿವಾಹ ಕೇವಲ ವೈಯುಕ್ತಿಕ ಹಕ್ಕಾಗಿರದೆ, ಬಹುಮಟ್ಟಿಗೆ ಹೆತ್ತವರ ಗುತ್ತಿಗೆಯಾಗಿದೆಯೆಂದು ಹೇಳಿದರೆ ಅದು ಅತಿಶಯೋಕ್ತಿಯೇನಲ್ಲ. ಗಂಡು-ಹೆಣ್ಣುಗಳ ಸಾಮಾಜಿಕ ಸ್ಥಾನಮಾನಗಳೇನೇ ಇರಲಿ, ಆರ್ಥಿಕ ಅಸಮಾನತೆಗಳೇನೇ ಇರಲಿ, ಒಲಿದ ಹೃದಯಗಳೆರಡು ಜೀವನದಲ್ಲಿ ಮಿಳನ ವಾಗಲು ನಮ್ಮ ಸಮಾಜದಲ್ಲಿ ರಹದಾರಿಯಿಲ್ಲ. ಒಂದಲ್ಲ ಒಂದು ಪ್ರಗತಿ ನಿರೋಧ ಶಕ್ತಿಯಾಗಲೀ, ಸಂಸ್ಥೆಯಾಗಲೀ ಅಥವಾ ವ್ಯಕ್ತಿಯಾಗಲೀ ಅಡ್ಡಿ ಬಂದು ಈ ನೈಸರ್ಗಿಕ ಕ್ರಿಯೆಯನ್ನು ಹತ್ತಿಕ್ಕತೊಡಗುವುದನ್ನು ನಾವು ಕಣ್ಣಾರೆ ನೋಡುತ್ತಿದ್ದೇವೆ.

ಸಮಾಜದಲ್ಲಿ ಸ್ತ್ರೀಯರನ್ನು ಗೌರವದಿಂದ ಕಾಣುವ ಪರಿಪಾಠ ನಮ್ಮಲ್ಲಿ ಸಾಕಷ್ಟು ಬೆಳೆದುಬಂದಿಲ್ಲ. ಅದರಲ್ಲೂ ಕಾಲೇಜು ಮುಂತಾದ ಪ್ರೌಢ ವಿದ್ಯಾಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಲ್ಲಿ ಈ ದೋಷ ಎದ್ದುಕಾಣುತ್ತಿದೆ. ಪ್ರೌಢ ವಿದ್ಯಾಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳ ನೈತಿಕ ಮಟ್ಟ ಬಹಳ ಅಧೋಗತಿಯಲ್ಲಿರುತ್ತದೆ. ವಿದ್ಯಾರ್ಥಿಗಳ ನೈತಿಕ ಮಟ್ಟ ಸುಧಾರಿಸಲ್ಪಡುವ ವರೆಗೂ ಸಮಾಜದಲ್ಲಿ ಯಾವ ಪ್ರಗತಿಯೂ ಸಾಧ್ಯವಿಲ್ಲ. ಈ ಹೇಳಿಕೆಯಲ್ಲಿ ಯಾವ ಉತ್ಪ್ರೇಕ್ಷೆಯೂ ಇಲ್ಲ. ಇದು ನಗ್ನಸತ್ಯ. ಸತ್ಯ ಯಾವಾಗಲೂ ಅಪ್ರಿಯವಾಗಿರುತ್ತದೆ. ನಿಜ. ಆದರೆ ಜನತೆಯಲ್ಲಿರುವ ಲೋಪದೋಷಗಳನ್ನು ನಿರ್ಭಯವಾಗಿ ನಿರ್ದಾಕ್ಷಿಣ್ಯವಾಗಿ ಉಲ್ಲೇಖಿಸದೇ ಹೋದಲ್ಲಿ ಸಾಹಿತಿಯಾದವನು ಸಮಾಜ ದ್ರೋಹ ಮಾಡಿದ ಪಾಪಕ್ಕೆ ಗುರಿಯಾಗುತ್ತಾನೆ.

ನಮ್ಮ ಜನತೆಯ ನೈತಿಕ ಅವನತಿಗೆ ಕಾರಣವಾದ ಹಲವಾರು ಲೋಪ ದೋಷಗಳಿಗೆ ಸಕಾಲದಲ್ಲಿ ಸರಿಯಾದ ಚಿಕಿತ್ಸೆ ನಡೆಯದೇ ಹೋದಲ್ಲಿ ಸರ್ವ ನಾಶವಾಗುವುದು ಖಂಡಿತ. ಜನತೆಗೆ ಸಕಾಲದಲ್ಲಿ ಈ ಎಚ್ಚರಿಕೆಯನ್ನು ಕೊಟ್ಟು ಅವರನ್ನು ವಿಚಾರಪರರನ್ನಾಗಿಸುವುದು ಸಾಹಿತಿಯಾದವನ ಅವಶ್ಯ ಕರ್ತವ್ಯವೆಂದು ತಿಳಿದಿದ್ದೇನೆ. ಈ ಅವಶ್ಯ ಕರ್ತವ್ಯವನ್ನು ನಿರ್ವಹಿಸದ ಸಾಹಿತಿ ಆತ್ಮವಂಚನೆ ಮಾಡಿಕೊಂಡಂತೆಯೇ ಸರಿ.

ಮೇಲೆ ಹೇಳಿದ ಹಲವಾರು ಸಾಮಾಜಿಕ ಸಮಸ್ಯೆಗಳ ಬಗ್ಗೆ ನನ್ನಲ್ಲುದ್ಭವಿಸಿದ ವಿಚಾರಮಂಥನದ ಫಲವಾಗಿ ಈ ಕಾದಂಬರಿ ಜನ್ಮತಾಳಿದೆ. ಸಾಹಿತ್ಯ ರಚನೆಯ ಮೂಲಕ ವಾಚಕ ವೃಂದಕ್ಕೆ ವಿಹಾರವನ್ನೊದಗಿಸುವುದರ ಜತೆಗೆ, ಅವರಲ್ಲಿ ವಿಚಾರ ಪ್ರಚೋದನೆಯನ್ನುಂಟುಮಾಡುವುದೂ ನನ್ನ ಮುಖ್ಯ ಗುರಿಯಾಗಿರುತ್ತದೆ. ಈ ಉದ್ದೇಶ ಕಾರ್ಯತಃ ಎಷ್ಟರ ಮಟ್ಟಿಗೆ ಪರಿಣಾಮಕಾರಿಯಾಗಿದೆಯೆಂಬುದನ್ನು ನಿರ್ಧರಿಸುವ ಹಕ್ಕು ಸಹೃದಯರಾದ ವಾಚಕರಿಗೂ ವಿಮರ್ಶಕರಿಗೂ ಸೇರಿದ್ದು. ಅದನ್ನು ಅವರ ಪಾಲಿಗೇ ಬಿಡುತ್ತೇನೆ.

ಈ ಕಾದಂಬರಿಯನ್ನು ಪ್ರಕಟಿಸಲು ಮುಂದೆ ಬಂದು ನೆರವಾದ ಮೆಸರ್ಸ್ ಆನಂದ್ ಬ್ರದರ್ಸ್‌ರವರಿಗೆ ನಾನು ಕೃತಜ್ಞನಾಗಿದ್ದೇನೆ.

**ತ್ರಿವಿಕ್ರಮ.**

# ಒಲಿದು ಬಂದ ಹೆಣ್ಣು

## ೧

ಸಂಜೆ ಆರು ಗಂಟೆಯಾಗಿತ್ತು. ಹಾಸನದ ಸಬ್ ಡಿವಿಜನ್ ಸಾಹೇಬರು ಶೇಷಗಿರಿರಾಯರು ಇನ್ನೂ ಆಫೀಸಿನಲ್ಲೇ ಇದ್ದರು. ಎಲ್ಲ ಗುಮಾಸ್ತರೂ ಮನೆಗಳಿಗೆ ಹೊರಟುಹೋಗಿದ್ದರು. ಮನೆಗಿನ್ನೂ ಹೋಗದಿದ್ದವರು ಸುಬ್ಬಣ್ಣನವರು ಮಾತ್ರ. ಸುಬ್ಬಣ್ಣನವರು ತಮ್ಮ ಟೇಬಲ್ಲಿನ ಮೇಲೆ ಹತ್ತಾರು ಫೈಲುಗಳನ್ನು ಹರಡಿಕೊಂಡು ಕುಳಿತುಬಿಟ್ಟಿದ್ದರು. ಅದರ ಮೇಲೆ ಅನೇಕ ಕಾಗದ ಪತ್ರಗಳು ಅಸ್ತವ್ಯಸ್ತವಾಗಿ ಬಿದ್ದಿದ್ದವು. ಅವರು ಸುಮಾರು ಒಂದು ಘಂಟೆಯಿಂದಲೂ ಸಾಹೇಬರಿಗೆ ಬಹಳ ತುರ್ತಾಗಿ ಬೇಕಾಗಿದ್ದ ಹಳೆಯ ರಿಕಾರ್ಡನ್ನು ಹುಡುಕುತ್ತಿದ್ದರು. ಆದರೆ ಅವರಿಗೆ ಬೇಕಾಗಿದ್ದ ರಿಕಾರ್ಡು ಮಾತ್ರ ಸಿಕ್ಕಲಿಲ್ಲ.

ಅಷ್ಟು ಹೊತ್ತಿಗೆ ಸಾಹೇಬರ ಕೊಠಡಿಯಿಂದ 'ಟ್ರಿಣ್' 'ಟ್ರಿಣ್' ಎಂದು ಕಾಲಿಂಗ್ ಬೆಲ್ಲಿನ ಶಬ್ದ ಕೇಳಿಬಂತು. ಕೂಡಲೇ ಸುಬ್ಬಣ್ಣನವರು ಹಠಾತ್ತನೆ ನಿದ್ದೆಯಿಂದೆಚ್ಚೆತ್ತವರಂತೆ ಬೆಚ್ಚಿಬಿದ್ದರು. 'ಇನ್ನೂ ಆ ಹಾಳು ರಿಕಾರ್ಡು ಸಿಗಲಿಲ್ಲೇನ್ರೀ. ಎಷ್ಟು ಹೊತ್ತಿನಿಂದ ಹುಡುಕುತ್ತಿದ್ದೀರ್ರೀ ಅದನ್ನ' ಎಂಬ ಸಾಹೇಬರ ಗರ್ಜನೆ ಕೇಳಿಸಿದಮೇಲಂತೂ ಸುಬ್ಬಣ್ಣನವರ ಮೈ ಬೆವರಿಟ್ಟಿತು.

'ಇನ್ನೂ ಸಿಗಲಿಲ್ಲ. ಹುಡುಕುತ್ತಿದ್ದೀನೀ ಸಾರ್' ಎಂದುತ್ತರಿಸಿದರು ಸುಬ್ಬಣ್ಣನವರು. 'ಏನು ಹುಡುಕುತ್ತಿದ್ದೀರಿ ನಿಮ್ಮ ತಲೆ. ಸ್ವಲ್ಪ ಇಲ್ಲಿ ಬನ್ನಿ ಹೇಳ್ತೀನೆ' ರಾಯರು ಮತ್ತೊಮ್ಮೆ ಗುಡುಗಿದರು. ಸುಬ್ಬಣ್ಣನವರು ಅಂಜುತ್ತಂಜುತ್ತಾ ಸಾಹೇಬರ ಕೊಠಡಿಗೆ ಹೋದರು: ಸಾಹೇಬರ ಕೊಠಡಿಯಲ್ಲಿ ಎಲೆಕ್ಟ್ರಿಕ್ ಫ್ಯಾನ್ ಒಳ್ಳೆಯ ಭರಾಟೆಯಿಂದ ಬೀಸುತ್ತಿತ್ತು. ಸಾಹೇಬರ ಸಣ್ಣ ಜುಟ್ಟನ್ನೂ ಅಲ್ಲಾಡಿಸುವ ಧೈರ್ಯ ಆ ಫ್ಯಾನಿಗೆ

ಬಂದಿತ್ತು. ಗಾಳಿಯಲ್ಲಿ ಅಲೆದಾಡುತ್ತಿರುವ ತಮ್ಮ ತಲೆಗೂದಲನ್ನು ನೇವರಿಸಿಕೊಳ್ಳುತ್ತಾ ಸಾಹೇಬರು ಮಂಡಿಸಿದ್ದರು. ಅವರ ಜರತಾರೀ ರುಮಾಲು ಅವರ ಉದ್ಯೋಗದ ಘನತೆ ಗೌರವಗಳನ್ನು ಸಾರಿಹೇಳು ವಂತಿದ್ದುವು. ಅವರ ಮುಖ ಮಾತ್ರ ಸ್ವಲ್ಪ ಗಂಟಿಕ್ಕಿತ್ತು. ಅವರ ಭ್ರೂವಿನ್ಯಾಸದಲ್ಲಿ ಅವರಿಗುಂಟಾಗಿದ್ದ ಕೋಪೋದ್ರೇಕ ಸ್ಪಷ್ಟವಾಗಿ ವ್ಯಕ್ತ ಪಟ್ಟಿತ್ತು. ಸಾಹೇಬರ ಮುಖಚರ್ಯೆಯನ್ನು ಸೂಕ್ಷ್ಮವಾಗಿ ಗಮನಿಸಿದ ಸುಬ್ಬಣ್ಣನವರು ತಮಗಿಂದು ಏನೋ ವಿಪತ್ತು ಕಾದಿದೆಯೆಂಬುದಾಗಿ ತೀರ್ಮಾನಿಸಿಕೊಂಡುಬಿಟ್ಟರು. ಎಲ್ಲಕ್ಕೂ ಸಿದ್ಧರಾಗಿ ಸಾಹೇಬರ ಮುಂದೆ ಕೈಕಟ್ಟಿಕೊಂಡು ನಿಂತುಬಿಟ್ಟರು.

ಸಾಹೇಬರು ತಮ್ಮ ಮುಂದಿದ್ದ ಕಾಲಿಂಗ್ ಬೆಲ್ಲಿನ ಮೇಲೆ ಕೈಯಾಡಿ ಸುತ್ತಾ ಕೇಳಿದರು. 'ಏನ್ರೀ ನಿಮ್ಮನ್ನು ಶಿವಮೊಗ್ಗೆಯ ಡೆಪ್ಯುಟಿ ಕಮಿಷನ್ನರ ಆಫೀಸಿಗೆ ವರ್ಗಮಾಡಿದ್ದಾರಲ್ಲಾ. ನಿಮಗದು ಗೊತ್ತೇನ್ರೀ' ಸಾಹೇಬರು ತಿಳಿಸಿದ ಅನಿರೀಕ್ಷಿತ ಸುದ್ದಿಯನ್ನು ಕೇಳಿ ಸುಬ್ಬಣ್ಣನವರು ಕಕ್ಕಾಬಿಕ್ಕಿಯಾಗಿಹೋದರು. ಸಾಹೇಬರು ಮುಂದುವರಿದರು. 'ಈವತ್ತಿನ ಟಪಾಲಿನಲ್ಲಿ ಬಂದಿದೆ ನಿಮ್ಮ ಟ್ರಾನ್ಸ್‌ಫರ್ ಆರ್ಡರು. ಇಲ್ಲಿ ನೋಡಿ'. ಸಾಹೇಬರು ತಮ್ಮ ಮುಂದಿದ್ದ ಲಕ್ಕೋಟೆಯೊಂದನ್ನು ತೆಗೆದು ಸುಬ್ಬಣ್ಣ ನವರ ಕೈಗಿತ್ತರು. ಸುಬ್ಬಣ್ಣನವರು ನಡುಗುತ್ತಿರುವ ಕೈಗಳಿಂದ ಲಕ್ಕೋಟೆ ಯಲ್ಲಿದ್ದ ಕಾಗದವನ್ನೋದಿಕೊಂಡರು. ಹೌದು. ಸಾಹೇಬರು ತಿಳಿಸಿದ್ದ ಸುದ್ದಿ ಅಕ್ಷರಶಃ ನಿಜವಾಗಿತ್ತು. ವರ್ಗದ ಆರ್ಡರು ಖುದ್ದು ರೆವಿನ್ಯೂ ಕಮಿಷನ್ನರ ಕಚೇರಿಯಿಂದಲೇ ಬಂದಿತ್ತು. ವರ್ಗದ ಆರ್ಡರನ್ನು ಓದಿದ ಕೂಡಲೇ ಸುಬ್ಬಣ್ಣನವರ ಮುಖವು ನಿಸ್ತೇಜವಾಗಿಹೋಯಿತು. ಆದರೂ ಧೃತಿಗೆಡದೆ ತಮ್ಮ ಕೈಗಳೆರಡನ್ನೂ ಜೋಡಿಸಿಕೊಂಡು ಭಯಭಕ್ತಿಗಳಿಂದ ಸಾಹೇಬರ ಮುಂದೆ ತಮ್ಮ ಅಹವಾಲನ್ನು ಹೇಳಿಕೊಳ್ಳಲನುವಾದರು.

'ಸಾರ್. ತಮ್ಮಲ್ಲಿ ನನ್ನದೊಂದು ಪ್ರಾರ್ಥನೆಯಿದೆ. ಅಪ್ಪಣೆ ಯಾದರೆ ಬಿನ್ನವಿಸಿಕೊಳ್ಳುತ್ತೇನೆ.'

ಸಾಹೇಬರು ಅಷ್ಟುಹೊತ್ತಿಗೆ ಸುಪ್ರಸನ್ನರಾಗಿದ್ದರು. ಸಮಾಧಾನ ಕರವಾಗಿಯೇ ಮಾತಾಡಿದರು. 'ಏನದು ಹೇಳಿ ಸುಬ್ಬಣ್ಣೋರೆ.'

'ಸಾರ್, ಮೊದಲಿಂದಲೂ ನನ್ನ ಫ್ಯಾಮಿಲೀ ಹಿಸ್ಟರೀ ತಮಗೆ ತಿಳಿದೇ ಇದೆ. ನನ್ನದು ದೊಡ್ಡ ಸಂಸಾರ. ಮನೇತುಂಬಾ ಮಕ್ಕಳೂ ಮರಿ. ಈ ಊರಲ್ಲೇ ನನಗೆ ಜೀವನಾ ಸಾಗಿಸೋದು ಬಹಳ ಕಷ್ಟವಾಗಿದೆ. ಈ ಊರಲ್ಲಿ ನಮ್ಮ ಹಿರಿಯರಿಟ್ಟಿರೋ ಒಂದು ಮನೇ ಅನ್ನೋದು ಇಲ್ಲದೇ ಹೋಗಿದ್ದರೆ ನನ್ನ ಪಾಡು ನಾಯಿಪಾಡಾಗಿ ಹೋಗುತ್ತಿತ್ತು. ಏನೋ ನಾನು ಮಾಡಿದ್ದ ಯತ್ಕಿಂಚಿತ್ ಪೂರ್ವಾರ್ಜಿತ ಪುಣ್ಯ ವಿಶೇಷದಿಂದ ಒಂದು ಮನೆ ನನ್ನಪಾಲಿಗೆ ಬಂತು. ಅದಿರೋಹೊತ್ತಿಗೆ ಕಾಲುಹೊಟ್ಟೆಯೋ ಅರೆಹೊಟ್ಟೆಯೋ ಇದುವರೆಗೂ ಸಂಸಾರರಥವನ್ನು ಮುಂದೂಡುತ್ತಾ ಬಂದಿದ್ದೇನೆ. ಇಷ್ಟರಮಧ್ಯೆ ಕಾಲೇಜಲ್ಲಿ ಓದುತ್ತಿರೋ ಹುಡುಗಾ ಬೇರೆ ಇದ್ದಾನೆ. ಅವನ ವಿದ್ಯಾಭ್ಯಾಸದ ಖರ್ಚುಬೇರೇ ನನ್ನಹೆಗಲಮೇಲೆ ಬಿದ್ದಿದೆ.

ನನ್ನ ಸಂಸಾರದ ಗೋಳಿನ ಕಥೆಯನ್ನು ತಮ್ಮ ಮುಂದೆ ಹೇಳಿಕೊಂಡು ತಮ್ಮ ಮನಸ್ಸಿಗೆ ಇಲ್ಲದ ಬೇಸರವುಂಟುಮಾಡಬೇಕೆಂಬುದು ನನ್ನಿಷ್ಟವಲ್ಲಾ ಸಾರ್. ತಮಗೆ ಸಾಧ್ಯವಾಗುವುದಾದರೆ ನನ್ನ ವರ್ಗದ ಆರ್ಡರನ್ನು ರದ್ದುಗೊಳಿಸಿಕೊಟ್ಟು ನನ್ನನ್ನು ಕಾಪಾಡಿಕೊಂಡು ಬರಬೇಕು ಸಾರ್. ತಾವು .... ....' ಸುಬ್ಬಣ್ಣನವರು ಇನ್ನೂ ಏನನ್ನೋ ಹೇಳುವುದರಲ್ಲಿದ್ದರು. ಆದರೆ ಅಷ್ಟಕ್ಕೇ ಮಾತು ನಿಲ್ಲಿಸಿದುದರ ಕಾರಣ ಸಾಹೇಬರ ಮುಖಚರ್ಯೆಯಲ್ಲುಂಟಾದ ಮಾರ್ಪಾಡು. ಸುಬ್ಬಣ್ಣನವರ ಮಾತುಗಳನ್ನಾಲಿಸುತ್ತಿದ್ದಂತೆಯೇ ಸಾಹೇಬರ ಹಣೆಯಲ್ಲಿ ನೂರುಪದರಗಳು ಮೂಡಿದುವು. ತಮ್ಮ ಮುಂದೆ ಅತಿ ದೈನ್ಯಾಸದಿಂದ ನಿಂತಿರುವ ವ್ಯಕ್ತಿಯನ್ನು ಆಪಾದಮಸ್ತಕವಾಗಿ ನೋಡಿದರು ಸಾಹೇಬರು. ಅವರು ನೋಡಿದ ನೋಟ ಆಳವಾಗಿತ್ತು. ಅರ್ಥಪೂರ್ಣವಾಗಿತ್ತು. ಯಾವುದೋ ಒಂದು ಅವ್ಯಕ್ತ ಹೆಮ್ಮೆಯ ಭಾವ ಅವರ ಮುಖದಮೇಲೆ ಮಿಂಚಿ ಮಾಯವಾಯಿತು. 'ತಮ್ಮ ರೊಟ್ಟಿ ಜಾರಿ ತುಪ್ಪದಲ್ಲಿ ಬಿತ್ತು' ಎನ್ನುವ ಸಂತೃಪ್ತಿಯ ಭಾವ ಅವರ ಮುಖದ ಮೇಲೆ ಸ್ಫುಟಗೊಂಡಿತು. ಸಾಹೇಬರು ತಾವಾಗಿಯೇ ಮಾತು ಬೆಳಸಿದರು. 'ಇಲ್ಲಿ ನೋಡಿ ಸುಬ್ಬಣ್ಣೋರೇ. ಟ್ರಾನ್ಸ್‌ಫರ್ ಆರ್ಡರನ್ನು ಕ್ಯಾನ್ಸಲ್ ಮಾಡಿಸುವುದಂತೂ ಕಷ್ಟಸಾಧ್ಯವೇ. ನನ್ನ ಮೇಲಿನಧಿಕಾರಿಗಳ ಆಜ್ಞೆಯನ್ನು ಅದು ಹೇಗೆತಾನೇ ಉಲ್ಲಂಘಿಸಲಿ

ನೀವೇ ಹೇಳಿ. ರೆವಿನ್ಯೂ ಕಮಿಷನ್ನರ ಆರ್ಡರಿಗೆ ವಿರೋಧವಾಗಿ ನಾನು ಹೇಗೆ ತಾನೇ ವರ್ತಿಸಲಿ. ಅಂತೂ ಇದೊಂದು ಒಳ್ಳೆಯ ಸಮಸ್ಯೆ ಹುಟ್ಟಿ ಕೊಂಡಿತಲ್ಲ ಸುಬ್ಬಣ್ಣೋರೇ.'

' ತಾವೇ ಹಾಗೆ ಹೇಳಿದರೆ ಹೇಗಾಗುತ್ತೇ ಸಾರ್. ನಾನು ಪದೇಪದೇ ನನ್ನ ಕುಟುಂಬದ ಪರಿಸ್ಥಿತಿಯನ್ನು ತಮ್ಮ ಮುಂದೆ ತೋಡಿಕೊಳ್ಳಬೇಕಾ ಗಿಲ್ಲ. ಎಲ್ಲವೂ ತಮಗೆ ಚೆನ್ನಾಗಿ ವೇದ್ಯವಾಗಿದೆ. ನನ್ನನ್ನು ತಮ್ಮ ಆಫೀಸಿನಲ್ಲಿಯೇ ಇಟ್ಟುಕೊಳ್ಳುತ್ತೇನೆಂದು ಶಿಫಾರಸು ಮಾಡಿ ಮೇಲಧಿ ಕಾರಿಗಳಿಗೆ ಪತ್ರ ಬರೆದರೆ ನನ್ನ ವರ್ಗದ ಆರ್ಡರು ವಜಾ ಆಗುವುದೇನೂ ಹೆಚ್ಚಿನ ಕೆಲಸವಲ್ಲ ಸಾರ್. ರೆವಿನ್ಯೂ ಕಮಿಷನರ್ ಸಾಹೇಬರು ತಮ್ಮ ಮಾತು ತೆಗೆದುಹಾಕುವುದಿಲ್ಲಾ ಸಾರ್. ಏನೋ ಬಡವನ ಮೇಲೆ ಕೃಪೆ ಮಾಡಬೇಕು. ನನ್ನ ಸಂಸಾರವನ್ನುದ್ಧರಿಸಬೇಕು.'

' ಅದಿರಲೀ ಸುಬ್ಬಣ್ಣೋರೇ. ನಿಮಗೆ ಉಪಕಾರ ಮಾಡೋದಕ್ಕೆ ಹೋಗಿ ನನಗೆಲ್ಲಿ ಅಪಕಾರವಾದೀತೋ ಎನ್ನುವ ಭಯ ನನ್ನನ್ನು ಬಾಧಿಸು ತ್ತಿದೆ. ದೊಡ್ಡ ಸಾಹೇಬರ ಇಷ್ಟಕ್ಕೆ ವಿರುದ್ಧವಾಗಿ ಹೋಗಿ ಅವರ ನಿಷ್ಠೂರ ವನ್ನು ಕಟ್ಟಿಕೊಳ್ಳುವುದಕ್ಕೆ ನನಗೆ ಸುತರಾಂ ಇಷ್ಟವಿಲ್ಲ. ಆದ್ದರಿಂದಲೇ ಸ್ವಲ್ಪ ತೂಗಾಡುತ್ತಿದ್ದೇನೆ. ನಾಳೆ ಏನು ಹೆಚ್ಚುಕಮ್ಮಿಯಾದರೂ ನಾನು ತಲೇ ಕೊಡಬೇಕಾಗುತ್ತೆ. ಹೌದೋ ಅಲ್ಲವೋ ನೀವೇ ಹೇಳಿ.'

' ನಾನು ಹೆಚ್ಚಿಗೆ ಹೇಳಿಕೊಳ್ಳುವುದೇನೂ ಉಳಿದಿಲ್ಲ ಸಾರ್. ತಾವು ನನಗೆ ಸಾಹೇಬರು ಮಾತ್ರವಲ್ಲ. ನನ್ನ ಹಿತೈಷಿಗಳೂ ಮಾರ್ಗದರ್ಶಿಗಳೂ ಆಗಿದ್ದೀರಿ. ತಾವು ಮನಸ್ಸು ಮಾಡಿದಲ್ಲಿ ನನ್ನೀ ಬೇಡಿಕೆಯನ್ನು ಈಡೇರಿಸಿ ಕೊಡುವುದು ತಮಗೇನೂ ಕಷ್ಟವಾಗಲಾರದು. ತಾವು ನನಗೀಗೊದ ಗಿರುವ ಗಂಡಾಂತರವನ್ನು ನಿವಾರಿಸಿ ನನ್ನ ಮನೆಯನ್ನುದ್ಧಾರಮಾಡಬೇಕು. ತಮ್ಮ ಹೆಸರು ಹೇಳಿಕೊಂಡು ಎರಡುಹೊತ್ತೂ ದೇವರ ಮುಂದೆ ದೀಪ ಹಚ್ಚುತ್ತೇವೆ.'

ಅಷ್ಟುಹೊತ್ತಿಗೆ ಸಾಹೇಬರ ಕಲ್ಲೆದೆಯೂ ಸ್ವಲ್ಪಮಟ್ಟಿಗೆ ಕರಗುವ ಸ್ಥಿತಿಗೆ ಬಂದಿತ್ತು. ಮಾನವತೆ ಅವರಲ್ಲಿ ಸ್ವಲ್ಪಮಟ್ಟಿಗೆ ಇನ್ನೂ ಉಳಿದಿದೆ ಎನ್ನುವುದಕ್ಕೆ ಅದೇ ಸಾಕ್ಷಿ. ಪರಿಪರಿಯಾಗಿ ಬೇಡಿಕೊಳ್ಳುತ್ತಿರುವ,

ಅಸಹಾಯಕತೆಯಿಂದ ಒದ್ದಾಡುತ್ತಿರುವ ಆ ಬಡ ಪ್ರಾಣಿ ಸುಬ್ಬಣ್ಣನವರ ಮೇಲೆ ಅವರಿಗೊಂದು ಬಗೆಯ ಮರುಕವುಂಟಾಗತೊಡಗಿತು. ಹೆಚ್ಚೇಕೆ ಸಾಹೇಬರು ಸುಬ್ಬಣ್ಣನವರ ಮುಂದೆ ತಮ್ಮ ಹೃದಯವನ್ನೇ ಬಿಚ್ಚಿಡಲು ತವಕಗೊಂಡರು. 'ಸುಬ್ಬಣ್ಣೋರೇ, ನಿಮ್ಮಲ್ಲಿ ಮುಚ್ಚುಮರೆಯೇನಿಲ್ಲ. ಬಹುದಿನಗಳಿಂದಲೂ ನನ್ನನ್ನು ದೀರ್ಘಚಿಂತೆಯೊಂದು ಬಲವಾಗಿ ಪೀಡಿಸುತ್ತಿದೆ. ನನ್ನ ಮಾತು ಕೇಳಿ ನಿಮಗಾಶ್ಚರ್ಯವಾಗುವುದರಲ್ಲಿ ಸಂದೇಹವಿಲ್ಲ. 'ಇದೇನು ಸಾಹೇಬರು ಹೀಗೆ ಹೇಳುತ್ತಾರೆ. ಸರ್ಕಾರದ ಉನ್ನತೋದ್ಯೋಗದಲ್ಲಿದ್ದಾರೆ. ತಿಂಗಳೊಂದಕ್ಕೆ ಆರುನೂರು ರೂಪಾಯಿಗಳು ಕೈತುಂಬ ಸಂಬಳ ತೆಗೆದುಕೊಳ್ಳುತ್ತಾರೆ. ಕಚೇರಿಯಲ್ಲಿರುವ ನೌಕರರೆಲ್ಲರೂ ಅವರನ್ನು ಕಂಡರೆ ಭಯದಿಂದ ತತ್ತರಿಸಿಹೋಗುತ್ತಾರೆ. ಅವರಧಿಕಾರಕ್ಕೆ ಎಳ್ಳಷ್ಟಾದರೂ ಚ್ಯುತಿಯುಂಟಾಗದಂತೆ ಕಚೇರಿಯ ಕೆಲಸಕಾರ್ಯಗಳು ಸುಸೂತ್ರವಾಗಿ ನಡೆದುಕೊಂಡುಹೋಗುತ್ತವೆ. ಮನೆಯಲ್ಲಿ ಆಳುಕಾಳುಗಳೂ, ಕಾರು ಇತ್ಯಾದಿ ವಾಹನ ಸೌಕರ್ಯಗಳೂ ಯಥೇಚ್ಛವಾಗಿವೆ. ಇಷ್ಟೆಲ್ಲಾ ಸುಖಜೀವನದ ಉಪಕರಣಗಳನ್ನು ಪಡೆದುಕೊಂಡು ಬಂದಿರುವ ಸಾಹೇಬರಿಗದೆಂತಹ ಚಿಂತೆಯೋ' ಎಂಬುದಾಗಿ ನಿಮಗಾಶ್ಚರ್ಯವೆನಿಸುವುದು ತೀರ ಸಹಜವೇ ಹೌದು. ಆದರೆ ಸುಬ್ಬಣ್ಣೋರೆ, ನಿಜಹೇಳುವುದಾದರೆ, ನನ್ನ ಹೊಟ್ಟೆಯೊಳಗಿನ ಸಂಕಟವನ್ನು ಆ ಜಗದೀಶ್ವರನೊಬ್ಬನೇಬಲ್ಲ. ನನ್ನ ಅಧಿಕಾರ, ದರ್ಪ, ನನಗೆ ಸರ್ಕಾರದ ಅಧಿಕಾರೀವರ್ಗದಲ್ಲಿರುವ ಪ್ರಭಾವ, ನನಗೆ ಸಮಾಜದಲ್ಲಿರುವ ಸ್ಥಾನಮಾನಗಳು — ಪ್ರತಿಷ್ಠೆ ಗೌರವಗಳು — ಇವೆಲ್ಲವೂ ನನಗೆ ತೃಣಪ್ರಾಯವಾಗಿದೆಯೆಂದು ಹೇಳಿದರೆ ಸ್ವಲ್ಪವೂ ಆಶ್ಚರ್ಯಪಡಬೇಡೀ ಸುಬ್ಬಣ್ಣೋರೇ. ಇವುಗಳಲ್ಲಿ ಯಾವುದೊಂದೂ ನನ್ನನ್ನು—ಅಲ್ಲ ನನ್ನ ಇಡೀ ಕುಟುಂಬಕ್ಕೇ ಬಂದಿರುವ ದೊಡ್ಡ ಕಳಂಕವನ್ನು ನಿವಾರಿಸಲು ಸಮರ್ಥವಾಗಿಲ್ಲ. ನನ್ನನ್ನು ಬಲವಾಗಿ ಹಿಡಿದು ಪೀಡಿಸುತ್ತಿರುವ 'ಕನ್ಯಾಸೆರೆ'ಯಿಂದ ವಿಮುಕ್ತನನ್ನಾಗಿ ಮಾಡಿಲ್ಲ.

ನಿಮಗೆ ತಿಳಿದಹಾಗೇನೇ ನಮ್ಮ ಅಹಲ್ಯೆಗೆ ಮನ್ನೇ ಜ್ಯೇಷ್ಠಕ್ಕೆ ಹದಿನಾರು ತುಂಬಿಹೋಯಿತು. ಕಾಲದಗತೀ ಬಲು ವಿಚಿತ್ರ ಸುಬ್ಬಣ್ಣೋರೆ. ಇನ್ನೂ ಮನ್ನೇತಾನೇ ನಮ್ಮ ಅಹಲ್ಯೆ ಹುಟ್ಟಿದ ಹಾಗೆ ನನಗೆ ಜ್ಞಾಪಕ.

ಇನ್ನೂ ಲಂಗಾ ಹಾಕಿಕೊಂಡು ನನ್ನ ಕಣ್ಣುಮುಂದೆ ಓಡಾಡುತ್ತಿದ್ದಹಾಗೆ ನೆನಪು. ಆದರೆ ಹೆಣ್ಣು ಬೆಳೆಯುವುದು ಅದೆಷ್ಟು ವಿದ್ಯುದ್ವೇಗದಿಂದ ಅನ್ನುತ್ತೀರಾ! ಕುಂಟೋಬಿಲ್ಲೇ ಕವಡೇ ಕಲ್ಲುಗಳಾಟವಾಡುತ್ತಿದ್ದಹಾಗೆಂಯೇ ಅವಳೀಗ ದೊಡ್ಡ ಹೆಂಗಸಾಗಿಬಿಟ್ಟಿದ್ದಾಳೆ. ಇದೇ ನನಗೆ ಆಶ್ಚರ್ಯ. ನಿಮ್ಮಲ್ಲಿ ನನಗೆ ಮುಚ್ಚುಮರೆಯೇಕೆ ಹೇಳಿ ಸುಬ್ಬಣ್ಣೋರೇ. ನಮ್ಮ ಹುಡುಗಿ ದೊಡ್ಡವಳಾಗಿ ನಾಲ್ಕುವರ್ಷಗಳಾಗಿಹೋದವು.

ಮೊದಲಿಂದಲೂ ನಮ್ಮದು ಬಹಳ ಪ್ರಾಚೀನ ಸಂಪ್ರದಾಯಾ ನೋಡಿ. ನಾನ್ಯೇನೋ ಅಡ್ಡಹಾದೀ ಹಿಡಿದು ಸ್ಕೂಲುಬಾಗಿಲು ಮೆಟ್ಟಿ ಹೇಗೋ ಬಿ. ಎ. ಎಂಬೋದನ್ನ ಮಾಡಿದೆ. ಹಾಗೆಯೇ ಈ ಲೌಕಿಕಕ್ಕೆ ಬಿದ್ದುಬಿಟ್ಟೆ. ಬೆಳೆದ ಮಗಳಿಗೆ ಮದುವೆ ಮಾಡದೆ ಮನೇಲಿಟ್ಟುಕೊಂಡವರು ಇಡೀ ನಮ್ಮ ಮನೆತನದಲ್ಲೆಲ್ಲಾ ಹುಡುಕಿನೋಡಿದರೂ ಒಬ್ಬರಾದರೂ ಇಲ್ಲವೆಂದು ನಾನು ಘಂಟಾಘೋಷವಾಗಿ ಸಾರಬಲ್ಲೆ. ಇಂತಹ ಸದ್ವಂಶದಲ್ಲಿ ಹುಟ್ಟಿದವನು ನಾನು. ಈಗ ನನ್ನಿಂದಲೇ ನಮ್ಮ ವಂಶದ ಸತ್ಕೀರ್ತಿಗೆ ದೊಡ್ಡ ಅಪೋಹ ಬಂದಂತಾಗಿದೆ. ನಾನು ತಾನೇ ಏನುಮಾಡಲಿ ಹೇಳಿ.

ನಿಮಗೆ ತಿಳಿದಹಾಗೇನೇ ನಾನದೆಷ್ಟು ಕಡೆಗಳಲ್ಲಿ ಹುಡುಗರನ್ನ ನೋಡಲಿಲ್ಲ. ಅದೆಷ್ಟು ಊರುಗಳನ್ನು ನಾಯಿಯಲೆದಂತೆ ಅಲೆದು ಬರಲಿಲ್ಲ. ನಾನೊಬ್ಬನೇ ಅಲ್ಲ. ನನ್ನ ಜತೇಲಿ ನಮ್ಮ ಹುಡುಗಿಯನ್ನೂ ಕರೆದು ಕೊಂಡು ಊರೂರೂ ಸುತ್ತಾಡಿದೆನಲ್ಲಾ ಸುಬ್ಬಣ್ಣೋರೇ. ಏನಾದರೂ ಫಲವಾಯಿತೇ. ಎಲ್ಲವೂ ಅರಣ್ಯರೋದನ. ವರದಕ್ಷಿಣೇ ಕೊಡಲೂ ಸಿದ್ಧವಾಗಿದ್ದೇನೆ. ಎರಡು ಖರ್ಚೂ ವಹಿಸಿ ಅದ್ದೂರಿಯಿಂದ ಮದುವೇ ಮಾಡಿಕೊಡಲು ತಯಾರಾಗಿದ್ದೇನೆ. ಹುಡುಗಿಯ ಮೈಮೇಲೆ ಯಥಾಶಕ್ತಿ ಯಾಗಿ ಒಡವೇ ವಸ್ತ್ರವನ್ನ ಹಾಕುತ್ತೇನೆ. ಓದುವ ಹುಡುಗಾ ಸಿಕ್ಕರೆ ಅವನ ಮುಂದಿನ ವಿದ್ಯಾಭ್ಯಾಸದ ಖರ್ಚನ್ನೂ ನಿರ್ವಹಿಸಿಕೊಳ್ಳುತ್ತೇನೆ. ಇಷ್ಟೆಲ್ಲಾ ಮಾಡೋದಕ್ಕೆ ನಾನು ತುದಿಗಾಲುತುದಿಯಲ್ಲಿ ನಿಂತಿದ್ದರೂ ಒಂದುಕಡೆಯಾದರೂ ಜಾತಕಗಳು ಹೊಂದಾಣಿಕೆಯಾಗಬೇಡವೇ ಹೇಳಿ. ನಾನೆಂತಹ ನತದೃಷ್ಟನಿರಬೇಕು ನೀವೇ ಹೇಳಿ ಸುಬ್ಬಣ್ಣೋರೆ. ನಾನು ಇದುವರೆಗೂ ನೋಡಿದ ವರಗಳು ಒಬ್ಬರಲ್ಲ—ಇಬ್ಬರಲ್ಲ—ಸಾವಿರ ಎಂದು

ಧಾರಾಳವಾಗಿ ಹೇಳ್ತೀನೆ. ಇಷ್ಟು ಜನರ ಪೈಕಿ ಒಬ್ಬರಾದರೂ ನಮ್ಮ ಹುಡುಗಿಯನ್ನು ಒಪ್ಪದೇ ಹೋದರು. ಒಬ್ಬರಿಗೆ ಹುಡುಗೀ ಬಿ. ಎ. ಪ್ಯಾಸು ಮಾಡಿರಬೇಕು. ಮತ್ತೊಬ್ಬರಿಗೆ ಸೀನಿಯರ್ ಸಂಗೀತದ ಪರೀಕ್ಷೆ ಯಲ್ಲಿ ಫಸ್ಟ್ ಕ್ಲಾಸಿನಲ್ಲೇ ತೇರ್ಗಡೆಯಾಗಿರಬೇಕು. ಒಬ್ಬರಿಗೆ ನಮ್ಮ ಹುಡುಗಿ ತೀರಾ ಕಪ್ಪು. ಮತ್ತೊಬ್ಬರಿಗೆ ತೀರಾ ಕುಳ್ಳ. ಮಗದೊಬ್ಬರಿಗೆ ಅವಳು ತೀರಾ ಪೀಚು. ಹೀಗೆ ಜನ ತಮತಮಗೆ ತೋಚಿದ ಹಾಗೆ ಅವಳ ರೂಪವನ್ನು ವರ್ಣಿಸಿ ನನ್ನನ್ನು ಹಿಂದಕ್ಕೆ ಕಳಿಸಿದವರೇ. ಒಂದಲ್ಲಾ ಒಂದು ಆಕ್ಷೇಪಣೆಯನ್ನೆತ್ತಿ ನನ್ನ ಮುಖಕ್ಕೆ ಮಂಗಳಾರತಿಯೆತ್ತಿ ಕಳಿಸಿ ದವರೇ. ಇದನ್ನೆಲ್ಲಾ ನಾನೆಷ್ಟುತಾನೇ ನುಂಗಿಕೊಂಡಿರಬೇಕು ನೀವೇ ಯೋಚಿಸಿನೋಡಿ ಸುಬ್ಬಣ್ಣೋರೆ.'

ಬಡಗುಮಾಸ್ತೆ ಸುಬ್ಬಣ್ಣನವರು ತಮ್ಮ ಮುಂದೆ ನಿಂತಿರೋದು; ತಾವು ದೊಡ್ಡ ಸಾಹೇಬರು ಎಂಬ ಪರಿಸ್ಥಿತಿಯ ಪ್ರಜ್ಞೆಯೇ ಇಲ್ಲದೆ ಇಷ್ಟೆಲ್ಲ ವನ್ನೂ ಒಂದೇ ಉಸಿರಿನಲ್ಲಿ ಹೇಳಿದರು ಶೇಷಗಿರಿರಾಯರು. ತಮಗುಂಟಾ ಗಿದ್ದ ದುಃಖಾತಿರೇಕದಿಂದ ವಿದೀರ್ಣರಾಗಿ ಅತಿ ದೀರ್ಘವಾದ ನಿಶ್ವಾಸ ವೊಂದನ್ನು ಹೊರದೂಡಿ ಕುರ್ಚಿಯ ಒಂದು ಕಡೆಗೆ ಗೋಣುಚೆಲ್ಲಿದರು ಸಾಹೇಬರು.

ಸಾಹೇಬರ ಪರಿಶೋಚನೀಯ ಪರಿಸ್ಥಿತಿಯನ್ನು ಮೆಲುಕುಹಾಕುತ್ತಿದ್ದ ಹಾಗೇ ಸುಬ್ಬಣ್ಣನವರ ಮೃದು ಹೃದಯವು ಬೆಣ್ಣೆಯಂತೆ ಕರಗಿಹೋಯಿತು. ತಮ್ಮ ಮಾನಸಿಕ ಉದ್ವೇಗವನ್ನು ನಿವಾರಿಸಿಕೊಂಡು ಹೇಳಿದರು ಸುಬ್ಬಣ್ಣ ನವರು 'ಸಾರ್ ತಮ್ಮ ಮನಸ್ಸಿನಲ್ಲೇನಿದೆಯೋ ಅದನ್ನು ನಿಸ್ಸಂಕೋಚ ವಾಗಿ ಅಪ್ಪಣೇ ಕೊಡಿಸೋಣಾಗಲಿ. ತಾವು ನನಗಿದುವರೆಗೂ ಅದೆಷ್ಟೋ ಉಪಕಾರಗಳನ್ನು ಮಾಡಿದ್ದೀರಿ. ತಮ್ಮಿಂದ ಉಪಕೃತನಾದ ನಾನು ತಮಗೆ ಸಮಯ ಬಂದಲ್ಲಿ ನನ್ನಿಂದಾಗುವ ಅಲ್ಪ ಸೇವೆಯನ್ನು ಸಲ್ಲಿಸಿ ನನ್ನ ಕೃತಜ್ಞತೆಯನ್ನು ತೋರ್ಪಡಿಸಿಕೊಳ್ಳಬೇಕೆಂಬುದೇ ನನ್ನ ಬಹುದಿನಗಳ ಹಾರೈಕೆಯಾಗಿದೆ. ಅಂತಹ ಅವಕಾಶವನ್ನೇನಾದರೂ ತಾವು ಕಲ್ಪಿಸಿ ಕೊಟ್ಟಲ್ಲಿ ನನಗಿಂತಲೂ ಹೆಚ್ಚು ಭಾಗ್ಯಶಾಲಿಗಳು ಈ ಪ್ರಪಂಚದಲ್ಲೇ ಇರ ಲಾರರೆಂದು ನಾನು ನಿಜವಾಗಿಯೂ ಹೆಮ್ಮೆಪಡುತ್ತೇನೆ.'

ಸುಬ್ಬಣ್ಣನವರಾಡಿದ ಮಾತು ಕೇಳಿ ಸಾಹೇಬರಿಗೆ ಸ್ವರ್ಗವೇ ತಮ್ಮ ಕೈಗೆ ಮುಟ್ಟಿದಷ್ಟು ಆನಂದವುಂಟಾಗಿಬಿಟ್ಟಿತು. ಅವರ ಮುಖ ಅರಳಿ ಹೋಯಿತು.

'ಹಾಗಾದರೆ ನನ್ನ ಮನಸ್ಸಿನಲ್ಲಿರೋದನ್ನ ನಿಸ್ಸಂಕೋಚವಾಗಿ ಹೇಳಲೇ ಸುಬ್ಬಣ್ಣೋರೇ'

'ಓಹೋ, ಅಗತ್ಯವಾಗಿ ಹೇಳಿ ಸಾರ್'

'ನಿಮ್ಮ ಹುಡುಗನಿಗೆ ನನ್ನ ಮಗಳನ್ನು ತಂದುಕೊಳ್ಳಬೇಕು'

ಇದುವರೆಗಾಗಲೇ ತಮಗೂ ಸಾಹೇಬರಿಗೂ ನಡೆದಿದ್ದ ಸಂಭಾಷಣೆಯಿಂದ ಸಾಹೇಬರು ತಮ್ಮಿಂದ ಅಪೇಕ್ಷಿಸಬಹುದಾದ ಉಪಕಾರವೇನೆಂಬುದನ್ನು ಸುಬ್ಬಣ್ಣನವರು ಊಹಿಸಿಬಿಟ್ಟಿದ್ದುದರಿಂದ, ಸಾಹೇಬರ ಮಾತು ಕೇಳಿ ಅವರಿಗೆ ಕಿಂಚಿನ್ಮಾತ್ರವೂ ಸೋಜಿಗವೆನಿಸಲಿಲ್ಲ. ಸಾಹೇಬರು ತಮ್ಮಿಂದ ಉತ್ತರವನ್ನು ನಿರೀಕ್ಷಿಸುತ್ತಿರುವುದನ್ನು ಕಂಡು ಸುಬ್ಬಣ್ಣನವರು ಹೇಳತೊಡಗಿದರು.

'ಸಾರ್ ನನ್ನ ಖಚಿತವಾದ ಅಭಿಪ್ರಾಯವನ್ನು ನಿಮ್ಮ ಮುಂದೆ ಹೇಳಿಬಿಡ್ತೇನೆ. ನಿಮ್ಮ ಹುಡುಗಿಯನ್ನು ತಂದುಕೊಳ್ಳಲು ನನಗೇನೋ ಸಂಪೂರ್ಣವಾಗಿ ಅಭಿಲಾಷೆಯಿದೆ. ಆದರೆ ಈ ವಿಚಾರದಲ್ಲಿ ನನ್ನ ಕುಟುಂಬದ ಮತ್ತು ನಮ್ಮ ಹುಡುಗನ ಅಭಿಪ್ರಾಯವೇನಿದೆಯೋ ನನಗೆ ತಿಳೀದು. ಅವರಲ್ಲಿ ಈ ಪ್ರಸ್ತಾಪಮಾಡದೆ ನಾನು ತಮಗೆ ಯಾವ ಖಚಿತವಾದ ಅಭಿಪ್ರಾಯವನ್ನೂ ತಿಳಿಸಲು ಸಾಧ್ಯವಿಲ್ಲ. ಈವತ್ತು ರಾತ್ರಿ ಅವರಿಬ್ಬರ ಹತ್ತಿರಲೂ ಈ ಪ್ರಸ್ತಾಪ ತೆಗೆದು ನಾಳೆ ಯಾವುದೊಂದೂ ನಿರ್ದಿಷ್ಟವಾಗಿ ನಿಮಗೆ ತಿಳಿಸುತ್ತೇನೆ.'

ಸುಬ್ಬಣ್ಣನವರ ಮಾತು ಕೇಳಿ ಸಾಹೇಬರು ನಿರಾಶೆಯಿಂದ ದೊಡ್ಡದೊಂದು ನಿಟ್ಟುಸಿರಿಟ್ಟರು. 'ಹಾಗಾದರೆ ನಿಮ್ಮ ಮಾತು ನಿಮ್ಮ ಮನೇಲಿ ನಡೆಯುವುದಿಲ್ಲ ಎನ್ನುತ್ತೀರಾ ಸುಬ್ಬಣ್ಣೋರೇ.' ಸಾಹೇಬರು ಕುತೂಹಲಾನ್ವಿತರಾಗಿ ಪ್ರಶ್ನಿಸಿದರು.

'ಹಾಗಲ್ಲಾ ಸಾರ್ ನನ್ನ ಅಭಿಪ್ರಾಯ. ಮೊದಲಿಂದಲೂ ನಮ್ಮ ಹುಡುಗನದು ಒಂದು ರೀತಿಯ ಹಠದ ಸ್ವಭಾವ. ಎಷ್ಟೇ ಆಗಲಿ ಈಗಿನ

ಕಾಲವವನು. ಜತೆಗೆ ಕಾಲೇಜು ಮೆಟ್ಟಲನ್ನು ತುಳಿದವನು. ಅವನು ಬಹಪೆಟ್ಟಿಗೆ ಮದುವೆಗೆ ಒಪ್ಪುವ ಹುಡುಗನಲ್ಲ. ಆದರೂ ಚಿಂತೆಯಿಲ್ಲ. ಅವನನ್ನು ಮದುವೆಗೆ ಒಪ್ಪಿಸಲು ನನ್ನ ಶಕ್ತಿಮೀರಿ ಯತ್ನಿಸುತ್ತೇನೆ. ನನ್ನ ಅಭಿಪ್ರಾಯದಂತೆಯೇ ನಮ್ಮ ಕುಟುಂಬದ ಅಭಿಪ್ರಾಯ. ಇರೋದೆಲ್ಲಾ ನಮ್ಮ ಹುಡುಗನದೇ ಸ್ವಲ್ಪ ತಾಪತ್ರಯ.'

'ಇಲ್ಲಿ ನೋಡೀ ಸುಬ್ಬಣ್ಣೋರೇ. ನೀವು ನಿಮ್ಮ ಮೇಲಿನ ದಾಕ್ಷಿಣ್ಯದ ಹೊರೆಯನ್ನು ಬಹಳ ಸುಲಭವಾಗಿ ನಿಮ್ಮ ಹುಡುಗನ ಮೇಲೆಳೆದುಬಿಡುವ ಸನ್ನಾಹದಲ್ಲಿದ್ದೀರೆಂದು ನನಗನ್ನಿಸುತ್ತದೆ. ನೀವೇನೂ ಯೋಚಿಸಬೇಡಿ. ನೀವು ಕೇಳಿದಷ್ಟು ವರದಕ್ಷಿಣೆ ಕೊಡಲು ನಾನು ಸಿದ್ಧ. ಮುಂದೆ ನಿಮ್ಮ ಹುಡುಗನ ವಿದ್ಯಾಭ್ಯಾಸದ ಖರ್ಚು ವೆಚ್ಚವನ್ನೆಲ್ಲಾ ವಹಿಸಿಕೊಳ್ಳುತ್ತೇನೆ. ಆ ಬಾಬತ್ತಿನಲ್ಲಿ ನಿಮಗ್ಯಾವ ತೊಂದರೆಯೂ ಇರಲಾರದು. ಅಷ್ಟೇ ಅಲ್ಲ. ನಿಮಗೆ ಈಗ ಬಂದಿರುವ ವರ್ಗದ ಆರ್ಡರನ್ನು ಕ್ಯಾನ್ಸಲ್ ಮಾಡಿಸಿಕೊಡುವ ಭಾರ ನನ್ನದು. ಇನ್ನೊಂದು ತಿಂಗಳಲ್ಲಿ ಆಫೀಸ್ ಮ್ಯಾನೇಜರ್ ನರಸಿಂಗ ರಾಯರು ರಿಟೈರಾಗುತ್ತಾರೆ. ನೀವೂ ಈ ಡಿಪಾರ್ಟ್‌ಮೆಂಟಿನಲ್ಲಿ ಇಪ್ಪತ್ತೈದು ವರ್ಷಗಳ ಸರ್ವಿಸ್ಸು ಮಾಡಿದ್ದೀರಿ. ಒಂದೇ ಗ್ರೇಡಿನಲ್ಲಿದ್ದೀರಿ. ನರಸಿಂಗ ರಾಯರು ರಿಟೈರಾದ ಮೇಲೆ ಮ್ಯಾನೇಜರ್ ಹುದ್ದೆ ನಿಮಗೆ ಕಟ್ಟಿಟ್ಟ ಗಂಟು. ಎಷ್ಟಾದರೂ ಸಾಹೇಬರ ಬೀಗರೆಂದ ಮೇಲೆ ಆಫೀಸಿನಲ್ಲೂ ನಿಮ್ಮ ಪ್ರತಿಷ್ಠೆ ಗೌರವಗಳು ಹೆಚ್ಚುತ್ತವೆ. ನಿಮಗಿರುವ ಐದು ವರ್ಷಗಳ ಸರ್ವೀಸನ್ನು ಲೀಲಾಜಾಲವಾಗಿ ಕಳೆದು ಆ ಮೇಲೆ ಪೆನ್ಷನ್ ತೆಗೆದುಕೊಂಡು ಮನೇಲಿ ಸುಖವಾಗಿ ಕೂಡಬಹುದು. ಹೇಗೂ ಬೆಳೆದು ಕೈಗೆ ಬಂದಿರುವ ವಿದ್ಯಾವಂತ ನಾದ ಮಗನಿದ್ದಾನೆ. ಅವನೇ ನಿಮ್ಮ ಸಂಸಾರ ಭಾರವನ್ನು ಹೊತ್ತು ಕೊಳ್ಳುತ್ತಾನೆ.'

ಸಾಹೇಬರು ತಮ್ಮ ಮುಂದೆ ಬಿತ್ತರಿಸುತ್ತಿರುವ ಭವಿಷ್ಯದ ಭವ್ಯ ಚಿತ್ರ ವನ್ನು ಕಂಡು ಸುಬ್ಬಣ್ಣನವರು ಹರ್ಷಪುಳಕಿತರಾಗಿ ಹೋದರು. ತಾವಾಗಲೇ ಸಾಹೇಬರ ಬೀಗರಾಗಿ ಹೋದ ಹಾಗೆಯೂ, ತಾವು ಆಫೀಸಿನಲ್ಲಿ ಮ್ಯಾನೇ ಜರ್ ಹುದ್ದೆಯನ್ನಲಂಕರಿಸಿ ಇತರ ಗುಮಾಸ್ತರ ಮೇಲೆ ತಮ್ಮ ಅಧಿಕಾರದ ದರ್ಪವನ್ನು ಚಲಾಯಿಸುತ್ತಿರುವ ಹಾಗೂ ಅವರು ಆಗಲೇ ಹಗಲುಗನಸು

ಕಾಣತೊಡಗಿದರು. ಆಗವರಿಗುಂಟಾದ ಸಂತೋಷಾತಿರೇಕದಲ್ಲಿ ತಮ್ಮ ಹೆಂಡತೀ ಮಗನನ್ನು ಈ ಮದುವೆಗೊಪ್ಪಿಸುವುದು ಅತಿ ಸುಲಭಸಾಧ್ಯವೆಂದು ಅವರಿಗನ್ನಿಸಿದುದರಲ್ಲಿ ಆಶ್ಚರ್ಯವೇನೂ ಇರಲಾರದು. ಕೃತಜ್ಞತೆ ಅವರ ಹೃದಯವನ್ನೆಲ್ಲಾ ವ್ಯಾಪಿಸಿಬಿಟ್ಟದ್ದುದರಿಂದ ಅವರಿಗೆ ಮಾತು ಹೊರಡ ದಾಯಿತು. ಸುಬ್ಬಣ್ಣನವರು ಏನು ಹೇಳಬೇಕೆಂಬುವುದೇ ತೋರದೆ ಅಪ್ರತಿಭರಾಗಿ ನಿಂತುಬಿಟ್ಟರು.

ಸಾಹೇಬರ ಸ್ಥಿತಿಯನ್ನಂತೂ ಹೇಳಬೇಕಾದುದೇ ಇಲ್ಲ. ಸುಬ್ಬಣ್ಣನವರ ಮಾತು ಕೇಳಿ ಅವರಿಗುಂಟಾದ ಸಂತೋಷಕ್ಕಂತೂ ಪಾರವೇ ಇದ್ದಿರ ಲಾರದು. ಅವರಿಗಾಗ ಸ್ವರ್ಗವೇ ತಮ್ಮ ಕೈಗೆಟಕಿದಷ್ಟು ಆನಂದವುಂಟಾಗಿ ಬಿಟ್ಟಿತೆಂದು ಹೇಳಿದರೆ ಅದು ಅತಿಶಯೋಕ್ತಿಯೇನಲ್ಲ. ಸಾಹೇಬರು ತಾವಾಗಿಯೇ ಎದ್ದು ಬಂದು ಸುಬ್ಬಣ್ಣನವರನ್ನು ಬಿಗಿದಪ್ಪಿಕೊಂಡುಬಿಟ್ಟರು. ಅನಿರೀಕ್ಷಿತ ಆನಂದದಿಂದ ಅವರ ಗಂಟಲು ಗದ್ಗದಿತವಾಗಿ ಹೋಗಿತ್ತು. ಆದರೂ ಹೇಳತೊಡಗಿದರು.

‘ ಸುಬ್ಬಣ್ಣೋರೇ ನಿಜವಾಗಿಯೂ ನೀವು ದೇವರಂತಹ ಮನುಷ್ಯರು. ನನ್ನ ‘ಕನ್ಯಾಸೆರೆ’ಯನ್ನು ಬಿಡಿಸಿ ಪುಣ್ಯ ಕಟ್ಟಿಕೊಂಡಿರಿ. ನಾಳೆ ಕಚೇರಿಗೆ ಬರೋವಾಗ ನಿಮ್ಮ ಹುಡುಗನ ಜಾತಕಾನ ಜತೆಯಲ್ಲಿ ತನ್ನಿ. ನಾಳೆಯೇ ನಮ್ಮ ಜೋಯಿಸರನ್ನು ಕರೆಸಿ ಎರಡು ಜಾತಕಗಳನ್ನೂ ತೋರಿಸುತ್ತೇನೆ. ದೇವರ ದಯೆಯಿಂದ ಜಾತಕಗಳೆರಡೂ ಹೊಂದಾಣಿಕೆಯಾದರೆ ನಮ್ಮ ಅಹಲ್ಯೆಯ ಲಗ್ನವಾದ ಹಾಗೆಯೇ. ಮುಂದಿನ ಶ್ರಾವಣ ಮಾಸದಲ್ಲೇ ಮದುವೆ ಮಾಡಿಬಿಡೋಣ. ಇನ್ನು ಕೊಟ್ಟೋ ಮಾಡುವುದು ಇವೆಲ್ಲಾ ವ್ಯವಹಾರಕ್ಕೆ ಸಂಬಂಧಪಟ್ಟರೋ ವಿಷಯ. ಅದನ್ನೂ ಒಟ್ಟಾಗಿ ಕಲೆತು ಅತಿಶೀಘ್ರದಲ್ಲಿಯೇ ಇತ್ಯರ್ಥಮಾಡಿಬಿಡೋಣ. ಸುಬ್ಬಣ್ಣೋರೇ ಇನ್ನೊಂದು ಮಾತು ಹೇಳ್ತೀನೆ. ಈವತ್ತಿನಿಂದ ನಾನು ಸಾಹೇಬ—ನೀವು ಗುಮಾಸ್ತೆ ಯೆಂಬ ಅಂತರವನ್ನು ಮರೆತು ಬಿಡಿ.’

ಸುಬ್ಬಣ್ಣನವರಂತೂ ಆಗಿನ ಸ್ಥಿತಿಯಲ್ಲಿ ಯಾವ ಮಾತನ್ನೂ ಆಡುವ ಹಾಗಿರಲಿಲ್ಲ. ಅವರ ಹೃದಯದಲ್ಲಿ ದೊಡ್ಡ ಕೋಲಾಹಲವುಂಟಾಗಿಬಿಟ್ಟಿತ್ತು. ತನಗುಂಟಾಗಿರುವ ಸಂತೋಷವನ್ನು ಯಾವ ರೀತಿಯಲ್ಲಿ ಸಾಹೇಬರ

ಮುಂದೆ ವ್ಯಕ್ತಪಡಿಸಬೇಕೆಂಬುದೇ ಅವರಿಗೊಂದು ಸಮಸ್ಯೆಯಾಗಿಬಿಟ್ಟಿತು. ಕಡೆಗೇನೂ ತೋಚದೆ ಮೂಕರಾಗಿ ನಿಂತುಬಿಟ್ಟರು. ಸ್ವಲ್ಪ ಹೊತ್ತಿನ ನಂತರ ಸಾಹೇಬರು ತಮ್ಮ ಕೈಗಡಿಯಾರದ ಕಡೆ ನೋಡಿಕೊಂಡರು. 'ಆಗಲೇ ಎಂಟೂವರೆ ಗಂಟೆಯಾಗಿ ಹೋಗಿದೆ ಸುಬ್ಬಣ್ಣೋರೇ. ಇನ್ನೀ ಮನೆಗೆ ಹೋಗೋಣ' ಎನ್ನುತ್ತಾ ಟೇಬಲ್ಲಿನ ಮೇಲಿದ್ದ ತಮ್ಮ ರುಮಾಲನ್ನು ಕೈಗೆ ತೆಗೆದುಕೊಂಡರು. ಸುಬ್ಬಣ್ಣನವರು ತಟ್ಟನೆ ಏನನ್ನೋ ಜ್ಞಾಪಿಸಿ ಕೊಂಡವರಾಗಿ 'ಲೋ ಚಿನ್ನಪ್ಪಾ' ಎಂದು ಒಂದೆರಡು ಸಲ ಕೂಗಿ ಕೊಂಡರು. ಕೂಡಲೇ ಹೊರಗಡೆ ಕುಳಿತು ಬೀಡಿ ಸೇದುತ್ತಿದ್ದ ವಾಚ್‌ಮ್ಯಾ ಚಿನ್ನಪ್ಪ ಅವರ ಮುಂದೆ ಪ್ರತ್ಯಕ್ಷನಾದ. 'ಇದ್ದೀಯೇನೋ. ನಾವು ಮನೆಗೆ ಹೋಗ್ತೀವೆ. ಸರಿಯಾಗಿ ಬಾಗಿಲು ಹಾಕ್ಕೊ' ಎನ್ನುತ್ತಾ ಸುಬ್ಬಣ್ಣನವರು ಸಾಹೇಬರನ್ನು ಹಿಂಬಾಲಿಸತೊಡಗಿದರು.

---

## ೨

ಭಾಗ್ಯಮ್ಮನವರ ಮನಸ್ಸು ಸ್ಥಿಮಿತವಾಗಿರಲಿಲ್ಲ. ಏನು ಕಾರಣವೋ ತಿಳಿಯದು. ಅದ್ಯಾವುದೋ ಅಸ್ಪಷ್ಟವಾದ ಭೀತಿ ಅವರ ಮನಸ್ಸನ್ನು ಹಿಂಡಿ ಹಿಪ್ಪೆ ಮಾಡುತ್ತಿತ್ತು. ತಮ್ಮ ಪದ್ಧತಿಯಂತೆ ದೇವರ ಮುಂದೆ ದೀಪ ಹತ್ತಿಸಿ ನಮಸ್ಕಾರ ಹಾಕಿದರು. ಅಷ್ಟು ಹೊತ್ತಿಗೆ ಮಕ್ಕಳು ಅವರನ್ನು ಸುತ್ತುಗಟ್ಟಿ 'ನಮಗೆ ಹಸಿವಾಗುತ್ತೆ. ಅನ್ನಾ ಹಾಕಮ್ಮ' ಎಂದು ಪೀಡಿಸ ತೊಡಗಿದರು. ಭಾಗ್ಯಮ್ಮನವರು ಮಡಿಯುಟ್ಟುಕೊಂಡು ಮಕ್ಕಳಿ ಗೆಲ್ಲಾ ಒಂದು ಪಂಕ್ತಿ ಬಡಿಸಿದರು, ಅಷ್ಟು ಹೊತ್ತಿಗೆ ಸುಬ್ಬಣ್ಣನವರು ಮನೆಗೆ ಬಂದರು. ಮನೆಯನ್ನು ಪ್ರವೇಶಿಸುತ್ತಿದ್ದಂತೆಯೇ ಅವರಿಗರಿ- ವಿಲ್ಲದೆಯೇ ದೀರ್ಘವಾದ ನಿಟ್ಟುಸಿರೊಂದು ಅವರಿಂದ ಹೊರಬಿತ್ತು. ತಮ್ಮ ಕೋಟು ರುಮಾಲುಗಳನ್ನು ಬಿಚ್ಚಿ ನೇರಾಗಿ ಹೋಗಿ ಆರಾಮು ಕುರ್ಚಿಯ ಮೇಲೆ ಕುಸಿದು ಬಿದ್ದರು. ಅವರು ಅದ್ಯಾವುದೋ ದೀರ್ಘ ಚಿಂತೆಯಲ್ಲಿ ಮುಳುಗಿ ಹೋಗಿದ್ದರೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಯೇ

ಇರಲಿಲ್ಲ. ಅವರ ಗಂಭೀರಮುಖಮುದ್ರೆಯನ್ನು ನೋಡಿದವರಿಗೆ ಅದು ಸ್ಪಷ್ಟವಾಗಿ ವ್ಯಕ್ತಪಡುತ್ತಿತ್ತು. ಆಯಾಸದಿಂದ 'ಉಶ್ಯಪ್ಪಾ' ಎನ್ನುತ್ತಾ ಸುಬ್ಬಣ್ಣನವರು ಒಂದು ಕಡೆಗೆ ಗೋಣು ಚೆಲ್ಲಿದರು. ಸ್ವಭಾವತಃ ಭೀರು ಗಳಾಗಿದ್ದ ಭಾಗ್ಯಮ್ಮನವರಿಗೆ ಇಷ್ಟೇ ಸಾಕಾಗಿತ್ತು. ಅವರು ತಮ್ಮ ಯಜ ಮಾನರ ಹತ್ತಿರ ಬಂದು 'ಅದ್ಯೇಕೆ ಮೈಯಲ್ಲಿ ಹುಷಾರಿಲ್ಲವೇನೂಂಪ್ರೇ. ಯಾಕೋ ಬಹಳ ಸುಸ್ತಾಗಿ ಕಾಣುತ್ತೀರಿ. ಆಫೀಸಿನಲ್ಲೇ ಇಷ್ಟುಹೊತ್ತು ಇದ್ದಿರೇನು? ಅದ್ಯೇನು ಕೆಲಸವೋ ಏನೋ. ಹೊತ್ತುಗೊತ್ತುಗಳೆಂಬುದೇ ಇಲ್ಲ. ಹಾಳು ಚಾಕರಿಗೆ'। ಎಂದು ಒಂದೇ ಉಸಿರಿನಲ್ಲಿ ಚಡಪಡಿಸಿದರು.

'ಈಗ ಆಫೀಸಿನಲ್ಲಿ ಕೆಲಸಾಜೋರುಕಣೇ. ಈ ತಿಂಗಳು ಕೊನೆಯಲ್ಲಿ ಡಿ. ಸಿ. ಸಾಹೇಬರ ಇನ್‌ಸ್ಪೆಕ್ಷನ್ನಿದೆ. ಅದಾದ ಮೇಲೆ ರೆವಿನ್ಯೂ ಕಮಿಷ ನ್ನರ ಇನ್‌ಸ್ಪೆಕ್ಷನ್ ಬರುತ್ತೆ. ಹೀಗೇ ಒಂದಾಗುತ್ತಲೊಂದು ಇದ್ದೇ ಇರು ತ್ತೇನ್ನು. ಸರ್ಕಾರೀ ಕೆಲಸದಲ್ಲಿ ಎಂದಿಗೆ ಪೂರ್ಣ ವಿರಾಮ ದೊರೆಯುತ್ತೆ ಹೇಳು' ಎಂದರು ಸುಬ್ಬಣ್ಣನವರು.

ಅಷ್ಟು ಹೊತ್ತಿಗೆ ಶ್ರೀಧರನ ಪ್ರವೇಶವಾಯಿತು. ತಮ್ಮ ಮಗನನ್ನು ನೋಡಿ 'ಇಷ್ಟು ಹೊತ್ತಿನವರೆಗೂ ಎಲ್ಲಿಗೆ ಹೋಗಿದ್ದೆಯೋ ಶ್ರೀಧರಾ' ಎಂದು ಕೇಳಿದರು ಸುಬ್ಬಣ್ಣ.

'ಇಲ್ಲೇ ಇಂಟರ್ ಕಾಲೇಜಲ್ಲಿ ಒಂದು ಡಿಬೇಟ್ ಇತ್ತು. ಅದಕ್ಕೆ ಹೋಗಿದ್ದೆ' ಎಂದುತ್ತರಿಸಿ ಶ್ರೀಧರ ತನ್ನ ಕೊಠಡಿಗೆ ಹೊಗಟುಹೋದ. ಕಮಲೂ ಆಗಲೇ ಎಲ್ಲರಿಗೂ ಎಲೇಹಾಕಿ ಅಣಿಮಾಡಿದ್ದಳು. ತಂದೇಮಗ ಇಬ್ಬರೂ ಎಲೆಯ ಮುಂದೆ ಕೂತರು. ಭಾಗ್ಯಮ್ಮ ಇಬ್ಬರಿಗೂ ಬಡಿಸಲಾ ರಂಭಿಸಿದರು. ತೆಂಗಿನ ಕಾಯಿಚಟ್ಣಿಯಲ್ಲಿ ಅನ್ನವನ್ನು ಕಲಿಸಿ ಒಂದು ತುತ್ತು ಬಾಯಲ್ಲಿಟ್ಟುಕೊಂಡಕೂಡಲೆ ಸುಬ್ಬಣ್ಣನವರಿಗೆ ತಡೆಯಿಲ್ಲದೆ ಕೆಮ್ಮು ಬಂದು ಬಿಟ್ಟಿತು. ಕೂಡಲೇ ಒಂದು ಲೋಟಾ ನೀರು ಕುಡಿದು ಸುಧಾರಿಸಿಕೊಂಡರು.

'ಹಾಳುಚಟ್ಣೀ ಇಷ್ಟು ಖಾರಾಮಾಡಿಬಿಟ್ಟಿದ್ದೀಯಲ್ಲೇ ಹೇಗೇ ತಿನ್ನೋದು' ಎನ್ನುತ್ತಾ ಸುಬ್ಬಣ್ಣ ತಮ್ಮ ಹೆಂಡತಿಯನ್ನು ದುರುಗುಟ್ಟಿ

ಕೊಂಡು ನೋಡಿದರು. ಭಾಗ್ಯಮ್ಮ ಪೆಪ್ಪುಮುಖ ಹಾಕಿಕೊಂಡು, ಏನೋ ಈವತ್ತು ಕೈತಪ್ಪಿ ಸ್ವಲ್ಪ ಖಾರಾಬಿದ್ದು ಹೋಗಿದೇಂದ್ರೆ. ದಿನವೂ ಸಪ್ಪೆಯಾಗಿಯೇ ಮಾಡುತ್ತಿರಲಿಲ್ವೇ'? ಎಂದು ಪ್ರತಿ ಸವಾಲು ಹಾಕಿದರು. ತಂದೆ ಮಗರಿಬ್ಬರ ಊಟವಾಯಿತು. ಭಾಗ್ಯಮ್ಮ ಎಲೆಯಲ್ಲಿ ಬಡಿಸಿ ಕೊಂಡು ಕೂತರು.

ಶ್ರೀಧರ ಕೈತೊಳೆದುಕೊಂಡು ಪಡಸಾಲೆಯಲ್ಲಿದ್ದ ಅಂದಿನ ದಿನ ಪತ್ರಿಕೆ ಯನ್ನು ತೆಗೆದುಕೊಂಡು ತನ್ನ ಕೊಠಡಿಗೆ ಹೊರಟುಹೋದ. ಸುಬ್ಬಣ್ಣ ನವರಿಗೇಕೋ ತಮ್ಮ ಮಗನ ದಿಟ್ಟತನವನ್ನು ನೋಡಿ ಮನಸ್ಸಿಗೆ ಸ್ವಲ್ಪ ಅಪಮಾನವಾದಂತೆ ಭಾಸವಾಯಿತು. ಅಂದವರು ಮಗನೊಂದಿಗೆ ಬಹಳ ಮಾತಾಡಬೇಕೆಂದಿದ್ದರು. ಸಮಯ ಸಂದರ್ಭ ನೋಡಿಕೊಂಡು ಅವ ನೊಡನೆ ಮಾತು ಬೆಳೆಸಬೇಕೆಂದಿರುವಷ್ಟರಲ್ಲೇ ಅವನು ಪುಸಕ್ಕನೆ ಕೊಠ ಡಿಗೆ ಹೊರಟು ಹೋದುದನ್ನು ನೋಡಿ ಅವರ ಸ್ವಾಭಿಮಾನಕ್ಕೆ ಬರೆಯೆಳೆ ದಂತಾಯಿತು. ಸುಬ್ಬಣ್ಣ ಸ್ವಲ್ಪ ಹೊತ್ತು ಪಡಸಾಲೆಯಲ್ಲಿ ಶತಪಥ ತಿರುಗಾಡತೊಡಗಿದರು. ಸಂಜೆಯಿಂದಲೂ ಅವರ ಮನಸ್ಸಿನ ಸ್ಥಿಮಿತ ತಪ್ಪಿಹೋಗಿತ್ತೆಂಬುದು ನಿರ್ವಿವಾದ. ಆಫೀಸಿನಲ್ಲಿ ಸಾಹೇಬರಿಗೂ ತಮಗೂ ನಡೆದ ಮಾತುಕತೆಗಳ ಬಗ್ಗೆ ಅವರು ಆಳವಾಗಿ ಚಿಂತಿಸತೊಡಗಿದರು. ಅವರ ಮನಸ್ಸು ಯಾವುದೊಂದು ನಿಲುಗಡೆಗೂ ಬಾರದೆ ಡೋಲಾಯಮಾನ ವಾಗಿ ಹರಿದಾಡುತ್ತಿತ್ತು. 'ಎಲಡಿಕೆತಗೊಳ್ಳೀಂದ್ರೆ' ಎನ್ನುತ್ತಾ ಭಾಗ್ಯಮ್ಮ ನವರು ತಟ್ಟೇಹಿಡಿದು ಪಡಸಾಲೆಗೆ ಬಂದರು. ಅದುವರೆಗೂ ಅಂತರ್ಮುಖಿ ಯಾಗಿದ್ದ ಸುಬ್ಬಣ್ಣ ಹಠಾತ್ತನೆ ಹಾವು ಮೆಟ್ಟಿದವರಂತೆ ಬೆಚ್ಚಿಬಿದ್ದರು. ತಮ್ಮ ಹೆಂಡತಿಯನ್ನುದ್ದೇಶಿಸಿ, 'ಏನೆಂದೆ – ಎಲೆಯಡಿಕೆಯೇ - ತಗೊಳ್ಳುತ್ತೇನೆ' ಎನ್ನುತ್ತಾ ತಟ್ಟೆಗೆ ಕೈಹಾಕಿದರು. ತಮ್ಮ ಯಜಮಾನರ ಅಂದಿನ ವಿಚಿತ್ರ ವರ್ತನೆಯನ್ನು ಕಂಡು ಭಾಗ್ಯಮ್ಮನವರಿಗೆ ಸೋಜಿಗವೆನ್ನಿಸದಿರಲಿಲ್ಲ. ಸುಬ್ಬಣ್ಣ ತಾಂಬೂಲ ಚರ್ವಣ ಮಾಡುತ್ತಾ 'ನಿನ್ನ ಮಗನನ್ನು ಸ್ವಲ್ಪ ಕರಿ. ಅವನಹತ್ರಮಾತಾಡೋ ವಿಷಯ ಬಹಳವಿದೆ' ಎಂದರು. ಭಾಗ್ಯಮ್ಮ ಮರು ಮಾತಾಡದೆ 'ಶ್ರೀಧರಾ-ಸ್ವಲ್ಪ ಬಾಪ್ಪಾ. ನಿಮ್ಮಣ್ಣ ನಿನ್ನೊಡನೆ ಏನೋ ಮಾತಾಡಬೇಕಂತೆ' ಎಂದು ಕೂಗಿ ಹೇಳಿದರು.

ಶ್ರೀಧರನಾಗ ಕೊಠಡಿಯಲ್ಲಿ ಕೂತು ಏಕಾಗ್ರಚಿತ್ತನಾಗಿ ಅದೇನನ್ನೋ ಬರೆಯುತೊಡಗಿದ್ದ. ಭಾಗ್ಯಮ್ಮನವರ ಕೂಗು ಅವನ ಭಾವ ಸಮಾಧಿಯನ್ನು ಭಂಗಗೊಳಿಸಿತು. ಅವನು ತಕ್ಷಣ ಎದ್ದುಬಂದು 'ಕೂಗಿದೆಯೇನಮ್ಮಾ' ಎಂದು ಕೇಳಿದ.

'ಹೌದು ಮಗೂ, ಅದ್ಯೇನೋ ನಿಮ್ಮಣ್ಣ ನಿನ್ನೊಂದಿಗೆ ಮಾತಾಡ ಬೇಕಂತೆ. ಸ್ವಲ್ಪ ಕೂತುಕೋ' ಎಂದರು ಭಾಗ್ಯಮ್ಮ.

ಶ್ರೀಧರ ಮರುಮಾತಿಲ್ಲದೆ ಚಾಪೆಯ ಮೇಲೆ ಕೂತುಕೊಂಡ. ಸ್ವಲ್ಪ ಹೊತ್ತಿನವರೆಗೂ ಮೌನವಾತಾವರಣವೇ ಮುಂದುವರೆಯಿತು. ಯಾರು ಹೇಗೆ ಮೊದಲು ಮಾತಿಗೆ ಪ್ರಾರಂಭಿಸಬೇಕೆಂಬುದೇ ಎಲ್ಲರ ಸಮಸ್ಯೆಯಾ ಗಿತ್ತು. ಸುಬ್ಬಣ್ಣ ತಮ್ಮ ಪತ್ನೀಪುತ್ರರೆದುರಿನಲ್ಲಿ ವಿಷಯವನ್ನು ಯಾವ ರೀತಿಯಲ್ಲಿ ಮಂಡಿಸಬೇಕೆಂಬುವ ಚಿಂತೆಯಲ್ಲಿ ಮುಳುಗಿ ಹೋಗಿದ್ದರು. ತಾವಂದು ಯಾವ ಸೋಜಿಗದ ಸುದ್ದಿಯನ್ನು ಕೇಳಲಿದ್ದೇವೋ ಎಂಬುದಾಗಿ ತಾಯಿ ಮಗ ಇಬ್ಬರೂ ನಿಬ್ಬೆರಗಾಗಿ ನಿರೀಕ್ಷಿಸುತ್ತಾ ಕೂತುಬಿಟ್ಟರು. ಪರಿಸ್ಥಿತಿಯ ಸೂಕ್ಷ್ಮವನ್ನರಿತು ಸುಬ್ಬಣ್ಣನವರೇ ಮಾತಿಗಾರಂಭಿಸಿದರು. 'ಇಲ್ಲಿ ನೋಡು ಶ್ರೀಧರಾ, ನಿನಗೆ ಹೆಣ್ಣು ಗೊತ್ತುಮಾಡಿಕೊಂಡು ಬಂದಿ ದ್ದೇನೆ. ಒಳ್ಳೇ ಕಡೆಯೇ ನೋಡಿದ್ದೇನೆ, ನೀನು ಮದುವೆಯಾಗಲೊಪ್ಪ ಬೇಕು. ನೀನಿದುವರೆಗೂ ತಳ್ಳಿಕೊಂಡು ಬಂದಂತೆ ಈಗ ಸಾಧ್ಯವಿಲ್ಲ. ತಿಳಿತೇ ?'

ಸುಬ್ಬಣ್ಣ ಸೂಚಿಸಿದ ಮದುವೆಯ ಪ್ರಸ್ತಾಪ ತಾಯಿ ಮಗ ಇಬ್ಬರಲ್ಲೂ ಪರಸ್ಪರ ವಿರುದ್ಧ ರೀತಿಯ ಪ್ರತಿಕ್ರಿಯೆಗಳನ್ನುಂಟುಮಾಡಿತು. ಮಗನ ಮದುವೆಯ ಪ್ರಸ್ತಾಪ ಬಂದುದನ್ನು ನೋಡಿ ತಾಯಿ ಕರುಳನ್ನುಳ್ಳ ಭಾಗ್ಯಮ್ಮ ಸಹಜವಾಗಿಯೇ ಸಂತೋಷಿಸಿದರು. ತಮ್ಮ ಯಜಮಾನರು ಸೂಚಿಸಿದ ಆ 'ಒಳ್ಳೇಕಡೆಯೇ ಹೆಣ್ಣು ನೋಡಿದ್ದೇನೆ' ಎಂಬುದರ ಸಾಕಷ್ಟು ವಿವರವನ್ನು ತಿಳಿದುಕೊಳ್ಳಬೇಕೆಂದು ಅವರ ಮನಸ್ಸು ಹಾತೊರೆಯ ತೊಡ ಗಿತು. ಆದರೆ ಶ್ರೀಧರನ ಪ್ರತಿಕ್ರಿಯೇ ಬೇರೆಯಾಗಿತ್ತು. 'ಮದುವೆ' ಎನ್ನುವ ಶಬ್ದ ಅವನ ಕಿವಿಗೆ ಬಿದ್ದ ಕೂಡಲೇ ಅವನ ಮನಸ್ಸು ಅವನ ತಂದೆ ಯವರ ವಿರುದ್ಧವಾಗಿ ದೊಡ್ಡ ಬಂಡಾಯವನ್ನೆಬ್ಬಿಸಿಬಿಟ್ಟಿತು. ಎಲ್ಲ

ಕ್ಕಿಂತಲೂ ಹೆಚ್ಚಾಗಿ ತನ್ನ ತಂದೆಯವರು ತನ್ನ ಅಭಿಪ್ರಾಯವನ್ನು ಕೇಳದೆಯೇ ತನಗೊಂದು ಹೆಣ್ಣು ಗೊತ್ತುಮಾಡಿಕೊಂಡು ಬಂದಿರುವ ಸುದ್ದಿ ತಿಳಿದು ಅವನ ಸ್ವಾಭಿಮಾನ ಕೆರಳಿತು. ತಾವು ಒಪ್ಪಿಬಂದಿರುವ ಹೆಣ್ಣನ್ನು ತಾನು ಮದುವೆಯಾಗಲೇ ಬೇಕೆಂದು ಕಡ್ಡಾಯ ಮಾಡುತ್ತಿರುವ ತನ್ನ ತಂದೆಯವರ ದಬ್ಬಾಳಿಕೆಯ ನೀತಿಯನ್ನು ಕಂಡು ಅವನ ರಕ್ತ ಕುದಿಯಲಾರಂಭಿಸಿತು. ತನ್ನ ತಂದೆಯವರ ಮಾತಿಗೆ ಉತ್ತರವೇನನ್ನೂ ಕೊಡದೆ ಚಿಂತಾಪರನಾಗಿ ಕೂತುಬಿಟ್ಟ ಶ್ರೀಧರ.

ತಮ್ಮ ಮಗನ ಮೌನವ್ರತ ಮುಂದುವರೆದಂತೆಲ್ಲಾ ಸುಬ್ಬಣ್ಣನವರ ಕೋಪವೂ ಅದೇ ಪ್ರಮಾಣದಲ್ಲಿ ಹೆಚ್ಚತೊಡಗಿತು. ತಂದೆ ಮಗ ಇಬ್ಬರ ಮಧ್ಯೆ ದೊಡ್ಡ ಹೊಂಡವೊಂದು ಬಾಯಿಬಿಡುತ್ತಿರುವುದನ್ನು ನೋಡಿ ಭಾಗ್ಯಮ್ಮ ಭಯದಿಂದ ತತ್ತಳಿಸಿ ಹೋದರು. 'ಇಂದಿನ ಗಂಡಾಂತರವನ್ನ ನೀನೇ ಪರಿಹಾರಮಾಡಪ್ಪಾ ಭಗವಂತಾ' ಎಂದು ಭಾಗ್ಯಮ್ಮ ದೇವರ ಮೇಲೆ ಭಾರಹಾಕಿ ತೆಪ್ಪಗೆಕೂತುಬಿಟ್ಟರು.

ಸ್ವಲ್ಪ ಹೊತ್ತಿನಂತರ ಯಾವ ರೀತಿಯ ಉದ್ರೇಕವನ್ನೂ ತೋರಗೊಡದೆ ಹೇಳಿದ್ದ ಶ್ರೀಧರ. 'ಈಗ ಮದುವೆಯಾಗಲು ನಾನು ಸಿದ್ಧನಾಗಿಲ್ಲಣ್ಣಾ. ನನ್ನ ಕೋರ್ಸು ಮುಗಿಯಲು ಇನ್ನೂ ಎರಡು ವರ್ಷಗಳ ಅವಧಿಯಿದೆ. ನನ್ನ ಓದು ಮುಗಿದು ನಾನೂ ಒಂದು ಉದ್ಯೋಗವನ್ನವಲಂಬಿಸಿದ ಮೇಲೆ ತಾನೇ ನನ್ನ ಮದುವೆ ಪ್ರಸ್ತಾಪಬರೋದು. ಈಗಲೇ ಯಾಕೆ ಆ ಮಾತು.'

'ಅದೆಲ್ಲಾ ನನಗೆ ತಿಳೀದೇ ಶ್ರೀಧರಾ. ನನಗೇನೋ ಹೊಸದಾಗಿ ಹೇಳ್ತಿದೀಯಲ್ಲಾ. ನಿನ್ನ ಮದುವೆಯಾದ ಕೂಡಲೇ ನಿನ್ನ ಹೆಂಡತಿಯೇನೂ ಮನೆಗೆ ಬಂದು ಬಿಡೋಲ್ಲ. ಇಷ್ಟು ಬೇಗ ನಿನ್ನ ಕೊರಳಿಗೇನೂ ಸಂಸಾರವನ್ನು ಬಿಗಿದು ಬಿಡೋಲ್ಲ. ನನಗೂ ಅದರ ಯೋಚನೆಯಿಲ್ಲದೆ ಇಲ್ಲ. ನಿನ್ನ ಪಾಡಿಗೆ ನೀನು ಓದಿಕೊಂಡು ಸ್ವಸ್ಥವಾಗಿರಬಹುದು. ನಿನ್ನ ಮೇಲೆ ಯಾವ ಹೊಣೆಯೂ ಬೀಳದಂತೆ ನಾನೆಲ್ಲವನ್ನೂ ವ್ಯವಸ್ಥೆ ಮಾಡುತ್ತೇನೆ. ಸುಮ್ಮನೇ ದುಡುಕಬೇಡಾ ತಿಳೀತೇ. ನಿಧಾನವಾಗಿ ಯೋಚನೆ ಮಾಡಿನೋಡು. ನಿನಗೊಳ್ಳೆಯದನ್ನೇ ನಾನು ಹೇಳ್ತಿರೋದು.'

'ಅದೆಲ್ಲಾ ಸರಿಯಣ್ಣಾ. ಮದುವೆಯೆಂದರೆ ತೀರಿತು. ಅದೊಂದು ಕಾಲ್ತೊಡಕೆಂದೇ ನನ್ನ ಭಾವನೆ. ಅದ್ಯೇನೋ ಹೇಳ್ತಾರಲ್ಲಾ 'ವಿವಾಹಂ ವಿದ್ಯಾನಾಶನಂ' ಅಂತೆ. ವಿವಾಹವಾದ ಮೇಲೆ ಅದರ ರೀತಿಯೇ ಬೇರೆ. ಈಗ ನಾನು ನಿರಾತಂಕವಾಗಿ ಓದಿಕೊಂಡಿರೋ ಹಾಗೆ ಮದುವೆಯಾದ ಮೇಲೆ ಸಾಧ್ಯವಾಗುತ್ತೋ ಇಲ್ಲವೋ ಹೇಳಲಾರೆ. ಎಷ್ಟೋ ಜನ ವಿದ್ಯಾರ್ಥಿಗಳು ತಮ್ಮ ವಿದ್ಯಾಭ್ಯಾಸದ ಕಾಲದಲ್ಲೇ ಮದುವೆಯಾಗಿ ಅವರು ಪಡುತ್ತಿರುವ ಬವಣೆಯನ್ನು ನಾನೇ ಕಣ್ಣಾರೇ ನೋಡುತ್ತಿದ್ದೇನೆ. ತಿಳಿದೂ ತಿಳಿದು ರಾತ್ರಿ ಕಂಡ ಭಾವೀಲಿ ಹಗಲು ಬಿದ್ದರೂಂತ ಹೇಳೋಹಾಗೆ ನಾನೇ ನನ್ನ ತಲೇ ಮೇಲೆ ಕಲ್ಲುಹಾಕಿಕೊಳ್ಳಲೇ........ನೀನೇಯೋಚನೆ ಮಾಡಣ್ಣಾ.

ಸುಬ್ಬಣ್ಣನವರಿಗಾಗಬೇಕಾಗಿದ್ದುದ್ದು ತಮ್ಮ ಮಗನ ತರ್ಕಬದ್ಧವಾದ ವಾದಸರಣಿಯಲ್ಲ. ಮತ್ಯಾವ ಸಮಾಧಾನೋಕ್ತಿಗಳೂ ಅವರಿಗೆ ಬೇಡ ವಾಗಿತ್ತು ತಮ್ಮ ಮಗನ ಬಾಯಿಂದ ಕಟ್ಟಿಗೇ ಮುರಿದಂತೆ ಒಂದು 'ಉಂಟು ಅಥವಾ ಇಲ್ಲ' ಎನ್ನುವ ಖಚಿತವಾದ ಉತ್ತರವನ್ನು ಮಾತ್ರ ಅವರು ನಿರೀಕ್ಷಿ ಸುತ್ತಿದ್ದರು. ತಾವು ಅಪೇಕ್ಷಿಸುತ್ತಿರುವ ಉತ್ತರವನ್ನು ಶ್ರೀಧರನ ಬಾಯಿಂದ ಹೊರಡಿಸಲು ಪುನಃ ಮಾತು ಬೆಳೆಸಿದರು.

'ಅದೆಲ್ಲಾ ತಲೆಹರಟೆ ನನಗೆ ಬೇಡಾ ಶ್ರೀಧರಾ. ನೀನು ನಮ್ಮ ಮಾತು ಕೇಳಿಕೊಂಡು ಇದುವರೆಗೂ ಇದ್ದ ಹಾಗೆ ವಿಧೇಯನಾಗಿರು ತ್ತೀಯೋ ಇಲ್ಲಾ ನಮ್ಮಿಷ್ಟಕ್ಕೆ ವಿರೋಧವಾಗಿ ನಡೆದುಕೊಂಡು ನಮಗೆ ಪ್ರತಿಕಕ್ಷಿಯಾಗಿ ನಿಲ್ಲುತ್ತೀಯೋ ಅದನ್ನೀಗಲೇ ಖಚಿತವಾಗಿ ಹೇಳಿಬಿಡು.'

'ಇಲ್ಲಣ್ಣಾ. ನಾನು ಮೊದಲೇ ಹೇಳಿದೆನಲ್ಲಾ ನನಗೀಗ ಮದುವೆ ಯಾಗಲು ಸುತರಾಂ ಇಷ್ಟವಿಲ್ಲಾಂತ. ಅದೇ ನನ್ನ ಅಂತ್ಯ ನಿರ್ಧಾರ. ನನ್ನ ತೀರ್ಮಾನವನ್ನು ಏನೇ ಆಗಲೀ ಬದಲಾಯಿಸಲಾರೆ.'

'ಹಾಗಾದರೆ ಹಾಳಾಗಿಹೋಗು. ನೀನೊಬ್ಬ ಶತಮೂರ್ಖ. ತಿಳಿ ಗೇಡಿ. ನನ್ನಮುಖಾ ನೋಡಬೇಡ.' ಸುಬ್ಬಣ್ಣ ಗುಡುಗಾಡಿದರು. ಕೋಪದಿಂದ ಉನ್ಮತ್ತರಾಗಿ ಹೋಗಿದ್ದರು. ರೋಷಾಗ್ನಿ ಅವರ ಮುಖ ದಲ್ಲಿ ಪ್ರಜ್ವಲಿಸ ತೊಡಗಿತು. ಹೆಡೆಮೆಟ್ಟಿದ ಹಾವಿನಂತೆ ಅವರು ಒಂದೇ

ಸಮನೆ ಬುಸುಗುಟ್ಟ ತೊಡಗಿದರು. ಭಾಗ್ಯಮ್ಮ ತಮ್ಮ ಯಜಮಾನರ ರೌದ್ರಾವತಾರವನ್ನು ನೋಡಿ ಭಯದಿಂದ ತತ್ತರಿಸತೊಡಗಿದರು. ಸುಬ್ಬಣ್ಣ ಮರುಮಾತಾಡದೆ ತಾವು ಕೂತಿದ್ದೆಡೆಯಿಂದ ಎದ್ದು ಹೋದರು. ಶ್ರೀಧರನೂ ತುಟಿಯೆರಡು ಮಾಡದೆ ತನ್ನ ಕೊಠಡಿಗೆ ಹೊರಟು ಹೋದ. ಭಾಗ್ಯಮ್ಮ ಮಾತ್ರ ಕಿಂಕರ್ತವ್ಯತಾ ವಿಮೂಢರಾಗಿ ಕೂತಲ್ಲಿಯೇ ಕೂತುಬಿಟ್ಟರು.

೩

ಮರುದಿನ ಭಾನುವಾರ. ಭಾನುವಾರ ಬಂದುದು ಸುಬ್ಬಣ್ಣನವರ ಪಾಲಿಗೆ ದೈವದತ್ತವಾದ ವರವಾಗಿತ್ತು. ಸಾಹೇಬರಿಗೆ ತಮ್ಮ ಅಂತ್ಯ ತೀರ್ಮಾನವನ್ನು ತಿಳಿಸಲು ಇಪ್ಪತ್ತುನಾಲ್ಕು ಗಂಟೆಗಳ ಅವಧಿ ದೊರೆತದ್ದು ಸುಬ್ಬಣ್ಣನವರ ಮನಸ್ಸಿಗೆ ಬಹಳ ಸಮಾಧಾನವನ್ನುಂಟುಮಾಡಿತ್ತು. ಹಿಂದಿನ ದಿನ ತಾವು ಯೋಚಿಸಿಕೊಂಡಿದ್ದಷ್ಟು ಸುಲಭವಾಗಿ ಸಮಸ್ಯೆ ಪರಿಹಾರವಾಗದೆ ಪರಿಸ್ಥಿತಿಯು ಮತ್ತಷ್ಟು ಬಿಗಡಾಯಿಸಿಕೊಂಡದ್ದನ್ನು ನೋಡಿ ಸುಬ್ಬಣ್ಣ ತೀರಾ ವ್ಯಗ್ರರಾದರು. ತಮ್ಮ ಮಗನ ಮೇಲೆ ಸಂಪೂರ್ಣ ವಿಶ್ವಾಸವನ್ನಿಟ್ಟುಕೊಂಡಿದ್ದರು ಸುಬ್ಬಣ್ಣ. ತಮ್ಮ ಹುಡುಗ ತಮ್ಮ ಮಾತನ್ನು ಮೀರಿ ಹೋಗಲಾರನೆಂಬ ಭರವಸೆಯಿದ್ದುದರಿಂದಲೇ ಹಿಂದಿನ ರಾತ್ರಿ ಧೈರ್ಯವಾಗಿ ಸಾಹೇಬರಿಗೆ ಅವರು ಮಾತುಕೊಟ್ಟಿದ್ದು. ಆದರೆ ಅವರ ಊಹಾಪೋಹಗಳೆಲ್ಲವೂ ಬುಡ ಮೇಲಾಗಿ ಹೋಗಿದ್ದುವು. ತಮ್ಮ ಮಗನ ಪ್ರತಿಭಟನೆಯನ್ನೆದುರಿಸುವ ವಿಷಮ ಸನ್ನಿವೇಶವೊದಗಿಬರಬಹುದೆಂದು ಅವರು ಕನಸಿನಲ್ಲಿಯೂ ಎಣಿಸಿರಲಿಲ್ಲ.

ತಮ್ಮ ಕುಟುಂಬ ನಿರ್ವಹಣೆಯ ಅವಶ್ಯ ಕರ್ತವ್ಯವನ್ನು ನಿರ್ವಹಿಸುವ ಸಲುವಾಗಿ ಒಂದಲ್ಲ ಹಲವು ಪರಿಗಳಲ್ಲಿ ತಾವು ಸಾಹೇಬರ ದಾಕ್ಷಿಣ್ಯವನ್ನು ಕಟ್ಟಿಕೊಂಡಿದ್ದು; ಅವರಿಂದ ಉಪಕೃತರಾಗಿದ್ದುದರಿಂದ ಅವರಿಗೆ ತಮ್ಮಿಂದಾಗಬಹುದಾದ ಪ್ರತ್ಯುಪಕಾರವನ್ನೆಸಗಿ ತನ್ಮೂಲಕ ಋಣ ವಿಮುಕ್ತರಾಗಬೇಕೆಂಬುದಾಗಿ ತಾವು ಯೋಚಿಸಿಕೊಂಡದ್ದು; ಈ ಮಧ್ಯೆ ತಮ್ಮ ಮಗನ ವೈವಾಹಿಕ ಪ್ರಶ್ನೆಯೆದ್ದು, ಬೆಳೆದು ಕೈಗೆ ಬಂದ ಒಬ್ಬನೇ ಮಗನೊಂದಿಗೆ ಆಜನ್ಮ ಪರ್ಯಂತ ವಿರೋಧ ಕಟ್ಟಿಕೊಳ್ಳಬೇಕಾದ ದುರ್ಧರ

ಪ್ರಸಂಗವೊದಗಿ ಬಂದದ್ದು; ಇವೆಲ್ಲವೂ ಒಂದೊಂದಾಗಿ ಸುಬ್ಬಣ್ಣನವರ ಚಿತ್ತಫಲಕದ ಮೇಲೆ ಸುಳಿದಾಡ ಹತ್ತಿದುವು.

ಈ ಘಟನಾವಳಿಗಳ ಹಿಂದೆ ಕ್ರೂರ ವಿಧಿಯ ಕೈವಾಡವಿರುವುದೆಂಬ ಸಂಗತಿಯು ಸುಬ್ಬಣ್ಣನವರ ಮನಸ್ಸಿಗೆ ಅತಿ ಸ್ಪಷ್ಟವಾಗಿ ಹೊಳೆದುಬಿಟ್ಟಿತು. ಆದರೂ ಅವರು ಹುಟ್ಟು ಆಶಾವಾದಿಗಳು. ಎಂತಹ ಸಂದರ್ಭದಲ್ಲೂ ಧೈರ್ಯಗೆಡರು. ಆದ್ದರಿಂದ ಅವರ ಹೃದಯದಲ್ಲಿ ಆಶೆಯ ಕಾರಂಜಿ ಬತ್ತಿ ಹೋಗಲು ಕಾರಣವಿರಲಿಲ್ಲ. ಒಮ್ಮೊಮ್ಮೆ ತಮ್ಮ ಕುಟುಂಬದ ಭಾವೀ ಜೀವನದ ರೂಪರೇಷೆಗಳನ್ನು ತಮ್ಮ ಚಿತ್ತಭಿತ್ತಿಯ ಮೇಲೆ ಚಿತ್ರಿಸಿಕೊಂಡು ಆನಂದ ತುಂದಿಲರಾಗುವರು. ಹಾಗೆಯೇ ತಮ್ಮ ವೈಯುಕ್ತಿಕ ಜೀವನದ ಉತ್ಕರ್ಷವನ್ನು ನೆನೆನೆನೆದು ಹರ್ಷಪುಲಕಿತರಾಗುವರು. ಮರುಕ್ಷಣದಲ್ಲೇ ತಾವು ಎದುರಿಸಲಂಜುತ್ತಿರುವ ಅದ್ಯಾವುದೋ ಭಯಂಕರ ಪರಿಸ್ಥಿತಿಯೊಂದು ಪ್ರೇತಾಕಾರವನ್ನು ತಾಳಿ ಅವರ ಮುಂದೆ ಬಂದು ನಿಲ್ಲುವುದು. ಅದು ತಮ್ಮ ಇಡೀ ಚೇತನವನ್ನೇ ನುಂಗಿ ನೊಣೆಯುತ್ತಿರುವಂತೆ ಅವರ ಮನಸ್ಸು ಭ್ರಾಂತಿಗೊಳ್ಳುವುದು. ಹಾಗಾದ ಕೂಡಲೇ ಮರಣ ಭಯದಿಂದ ತತ್ತಳಿಸಿ ಹೋಗುವರು ಸುಬ್ಬಣ್ಣ. ತಕ್ಷಣ ತಮ್ಮ ನಿರ್ಧಾರವನ್ನು ಮುರಿದು ತಮ್ಮ ಮಗನ ದಾರಿಯನ್ನು ಹಿಡಿಯಬೇಕೆಂದು ಯೋಚಿಸ ತೊಡಗುವರು. ಪುನಃ ತಮ್ಮ ಕೌಟುಂಬಿಕ ಜೀವನದ ಸ್ಥಿತಿಗತಿಗಳು; ತಮ್ಮ ದಾರುಣ ಬಡತನ; ಸಂಸಾರ ನಿರ್ವಹಣೆಯ ಕಷ್ಟಪರಂಪರೆಗಳು; ಮಗನ ವಿದ್ಯಾಭ್ಯಾಸದ ಖರ್ಚುವೆಚ್ಚಗಳು; ಎಲ್ಲಕ್ಕಿಂತಲೂ ಹೆಚ್ಚಾಗಿ ಸಾಹೇಬರು ತಮ್ಮ ಮೇಲಿಟ್ಟಿರುವ ಅಭಯ ಹಸ್ತ ಇವೆಲ್ಲವನ್ನೂ ತಮ್ಮ ಮನಸ್ಸಿನಲ್ಲೇ ಮೇಲಿಂದ ಮೇಲೆ ಮೆಲುಕು ಹಾಕ ಹತ್ತುವರು. ಕೂಡಲೇ ಅವರ ಚಿತ್ತ ಚಾಂಚಲ್ಯವು ಹಾರಿಹೋಗುವುದು. ಆಗಿನ ಸಂದರ್ಭದಲ್ಲಿ ತಮ್ಮ ತೀರ್ಮಾನವೇ ಸರ್ವೋತ್ಕೃಷ್ಟವಾದ ಮಾರ್ಗವೆಂದು ಭಾವಿಸಿಕೊಂಡು ಹಿರಿಹಿರಿಹಿಗ್ಗುವರು. ಇಂತಹ ವಿಚಿತ್ರವಾದ ಒಳತೋಟಿಯಲ್ಲೇ ಸುಬ್ಬಣ್ಣ ಇಡೀ ದಿನವನ್ನು ನೂಕಿಬಿಟ್ಟರು.

ಆಗ ತಾನೇ ರಾತ್ರಿಯೂಟ ಮುಗಿದಿತ್ತು. ಎಂದಿನಂತೆಯೇ ಶ್ರೀಧರ ತನ್ನ ಕೊಠಡಿಯಲ್ಲಿ ಕೂತು ಅದ್ಯಾವುದೋ ಪುಸ್ತಕಾವಲೋಕನದಲ್ಲಿ

ತಲ್ಲೀನನಾಗಿ ಹೋಗಿದ್ದ. ಏಕೋ ಸುಬ್ಬಣ್ಣ ತನ್ನ ಮಗನ ಕೊಠಡಿ ಯನ್ನು ಪ್ರವೇಶಿಸಿದರು. ತನ್ನ ತಂದೆಯವರನ್ನು ನೋಡಿದ ಕೂಡಲೇ ಶ್ರೀಧರ ಕುರ್ಚಿಯಿಂದೆದ್ದು ಅವರ ಮುಂದೆ ಕುರ್ಚಿಯನ್ನು ಸರಿಸಿ ತಾನು ಪಕ್ಕದಲ್ಲಿದ್ದ ಹಾಸಿಗೆಯ ಸುರುಳಿಯ ಮೇಲೆ ಕೂತುಕೊಂಡ. ಸ್ವಲ್ಪಹೊತ್ತಿನ ನಂತರ ಸುಬ್ಬಣ್ಣ ಮಾತಿಗಾರಂಭಿಸಿದರು.

'ಶ್ರೀಧರಾ, ನಾನು ನಿನ್ನೇ ಹೇಳಿದ್ದೆನಲ್ಲಾ ಆ ವಿಷಯ ಏನು ಯೋಚನೆ ಮಾಡಿದ್ದೀ.'

'ಅಣ್ಣಾ ನನ್ನನ್ನ ಪದೇ ಪದೇ ಕೇಳಬೇಕಾದ ಪ್ರಮೇಯವೇ ಇಲ್ಲವಲ್ಲಾ. ನಾನು ನಿನ್ನ ಮಾತನ್ನ ಇದುವರೆಗೂ ಮೀರಿಹೋಗಿಲ್ಲ ನಿಜ. ವಿವಾಹ ವೈಯಕ್ತಿಕ ಪ್ರಶ್ನೆಯೆಂಬುದನ್ನ ನೀನೂ ಒಪ್ಪುತ್ತೀಯೆಂದು ನನಗೆ ನಂಬಿಕೆಯಿದೆ. ಕೇವಲ ತಂದೆ ತಾಯಿಗಳ ಬಲವಂತಕ್ಕೊಳ ಗಾಗಿಯೋ ಅಥವಾ ಇನ್ನಾವುದಾದರೂ ಪರಿಸ್ಥಿತಿಯ ಪ್ರಭಾವಕ್ಕೊಳ ಗಾಗಿಯೋ ಹೆಣ್ಣನ್ನು ಮದುವೆಯಾಗಿ ನನ್ನ ಇಡೀ ಜೀವಮಾನವನ್ನೇ ವಿಷಮಯವನ್ನಾಗಿಸಲಾರೆ. ಪ್ರತಿಯೊಬ್ಬ ವ್ಯಕ್ತಿಗೂ ತನ್ನ ಭಾವೀ ಜೀವನವನ್ನು ರೂಪಿಸಿಕೊಳ್ಳುವ ಹಕ್ಕು ಆಜನ್ಮಸಿದ್ಧವಾಗಿ ಬಂದು ದೆಂಬುದು ನನ್ನ ಅಭಿಪ್ರಾಯ. ತಂದೆತಾಯಿಗಳಿಗೆ ತಮ್ಮ ಮಕ್ಕಳ ಮೇಲಿರುವ ಅಧಿಕಾರವಾಗಲೀ, ಮತ್ಯಾವ ವಿಧವಾದ ಸಾಮಾಜಿಕ ಒತ್ತಡ ವಾಗಲೀ, ಬಡತನ ಸಿರಿತನಗಳೆಂಬ ಆರ್ಥಿಕ ಅಡಚಣೆಗಳಾಗಲೀ ಈ ಪವಿತ್ರವಾದ ವ್ಯಕ್ತಿ ಸ್ವಾತಂತ್ರ್ಯಕ್ಕೆ ಎಂದಿಗೂ ಧಕ್ಕೆ ಉಂಟುಮಾಡಕೂಡ ದೆಂದು ನನ್ನ ಭಾವನೆ. ಆದರೆ ನಮ್ಮ ಪ್ರಸ್ತುತ ಸಮಾಜ ನಾನು ಹೇಳುತ್ತಿರುವಷ್ಟು ಮುಂದುವರಿದಿಲ್ಲವೆಂಬುದನ್ನು ನಾನೂ ಒಪ್ಪಿಕೊಳ್ಳು ತ್ತೇನೆ. ಆದರೆ ಇಂದಲ್ಲ ನಾಳೆಯಾದರೂ ನಮ್ಮ ಸಮಾಜ ನಾನು ಹೇಳಿದಂತೆ ಪರಿವರ್ತನೆಗೊಳ್ಳಲೇಬೇಕು. ನಮ್ಮ ಸಮಾಜದಲ್ಲಿ ವ್ಯಕ್ತಿಗತ ವಾದ ಹಲವು ಆ ಜನ್ಮಸಿದ್ಧವಾದ ಹಕ್ಕುಗಳು ನೆಲೆಗೊಳ್ಳಲೇಬೇಕು. ಹಾಗಾದ ದಿನ ನಮ್ಮ ಸಮಾಜ ಧನ್ಯವಾಗುವುದು. ಅಂದು ನಮ್ಮ ಜನತೆ ನಿಜವಾದ ಸ್ವಾತಂತ್ರ್ಯವನ್ನನುಭವಿಸಿದಂತಾಗುವುದು.'

'ಸಮಾಜ-ಸ್ವಾತಂತ್ರ್ಯ ಅಂತ ಏನ್ನೇನೋ ಮನಸ್ಸಿಗೆ ಬಂದಹಾಗೆ ಹರಟುತ್ತಿದ್ದೀಯಲ್ಲಾ ಶ್ರೀಧರಾ. ನಿನ್ನ ಲೆಕ್ಚರ್ ಕೇಳೋಕ್ಕೆ ಬರಲಿಲ್ಲ ನಾನು. ನಾನು ನಿನ್ನಷ್ಟು ಕಲಿತಿಲ್ಲ. ನೀನು ಬೇಕಾದರೆ ಕಾಲೇಜು ಮೆಟ್ಟಲು ತುಳಿದಿದ್ದೀಯ. ಬೇಕಾದ ಹಾಗೆ ಬಡಬಡಿಸುತ್ತೀಯ. ಪ್ರಸ್ತುತ ನಾನು ಕೇಳಿದ ವಿಷಯವನ್ನೇ ಹಾರಿಸಿಬಿಟ್ಟು ಏನ್ನೇನೋ ಹರಟುತ್ತಿದ್ದೀಯಲ್ಲಾ. ಈಗ ಇತ್ಯರ್ಥವಾಗಬೇಕಾದ್ದು ನಿನ್ನ ವಿವಾಹದ ಪ್ರಶ್ನೆ. ಈಗ ನೀನು ವಿವಾಹವಾಗಲು ಒಪ್ಪುತ್ತೀಯೋ ಇಲ್ಲವೋ ಅಷ್ಟು ಹೇಳು ನನಗೆ.'

'ಅಣ್ಣಾ ಇದೇನು ಪುನಃ ಚರ್ವಿತ ಚರ್ವಣ. ನನಗರ್ಥವಾಗೊಲ್ಲ. ನನ್ನ ನಿರ್ಧಾರವನ್ನಿದುವರೆಗಾಗಲೇ ಎಲ್ಲಾದರೂ ನೂರು ಸಲ ಹೇಳಿದ್ದೇನೆ. ಅದನ್ನೇ ಈಗಲೂ ಹೇಳುತ್ತೇನೆ. ಮುಂದೆಯೂ ಹೇಳುತ್ತೇನೆ. ನಿನ್ನ ಪ್ರಶ್ನೆಗೆ ನನ್ನಲ್ಲಿ ಬೇರೆ ಉತ್ತರವೇ ಇಲ್ಲ'.

'ಶ್ರೀಧರಾ ನೀನೊಬ್ಬ ಶತಮೂರ್ಖ. ನೀನು ಹಿಡಿದಿದ್ದೇ ಹಠವಾಗಿ ಹೋಗಿದೆ. ಮುಖ್ಯ ನಿನ್ನನ್ನ ಕಾಲೇಜು ಮೆಟ್ಟಲು ಹತ್ತಿಸಿದ್ದೇ ದೊಡ್ಡ ತಪ್ಪಾಗಿ ಹೋಯಿತು. ನನ್ನಿಂದಾದ ಅವಿವೇಕಕ್ಕಾಗಿ ಈಗ ನಾನೇ ಪೇಚಾಡಬೇಕಾದ ಪರಿಸ್ಥಿತಿಯೊದಗಿದೆ. ಹೊಟ್ಟೇ ಬಟ್ಟೇ ಕಟ್ಟಿ, ಮನೇ ಮಂದಿಯೆಲ್ಲಾ ಉಪವಾಸವೋ ವನವಾಸವೋ ಅನುಭವಿಸಿ ನಿನ್ನನ್ನ ಕಾಲೇಜು ವಿದ್ಯಾಭ್ಯಾಸಕ್ಕೆ ಹಚ್ಚಿದ್ದಕ್ಕೆ ಇದೇಯೋ ನೀನು ನಮಗೆ ಮಾಡುತ್ತಿರುವ ಪ್ರತ್ಯುಪಕಾರ. ನಿನ್ನನ್ನ ನಂಬಿದ್ದಕ್ಕೆ ಸರಿಯಾದ ದ್ರೋಹವನ್ನೇ ಮಾಡಿದೆ ಬಿಡು. ನಿನ್ನನ್ನ ನಂಬಿದ್ದವರನ್ನು ನಡುನೀರಿನಲ್ಲಿ ಕೈ ಬಿಟ್ಟು ನಲಿದಾಡುತ್ತಿರುವ ನಿನ್ನ ಕಟುಕತನಕ್ಕೆ ಆ ದೇವರೇ ತಕ್ಕ ಶಾಸ್ತಿ ಮಾಡುತ್ತಾನೆ! ನೀನು ಮಗನಾಗಿ ಹಾಳಾಗಿ ಹೋದೆ. ನೀನಿಂತಹ ಚಂಡಾಲನೆಂದು ನಾನು ತಿಳಿದುಕೊಂಡಿರಲಿಲ್ಲ.'

'ಅಣ್ಣಾ ನನ್ನ ಉದ್ಧಟತನವನ್ನು ನೀನು ಕ್ಷಮಿಸಬೇಕು. ನಿನ್ನ ಮಾತನ್ನ ಮೀರಿ ನಿನ್ನ ಮನಸ್ಸಿಗೆ ನೋವನ್ನುಂಟುಮಾಡಿದ್ದೇನೋ ನಿಜ. ಆದರೆ ನಿನ್ನ ಮನಸ್ಸಂತೋಷಪಡಿಸಹೋಗಿ ನಾನು ಒಲಿಯದ ಹೆಣ್ಣನ್ನು ಕೈಹಿಡಿದು 'ನನಗೆ ಅವಳಲ್ಲಿ ಪ್ರೀತಿಯಿದೆ, ನಮ್ಮದು ಆದರ್ಶ ದಾಂಪತ್ಯ' ಎಂದು ಜಗತ್ತಿನ ಮುಂದೆ ಸಾರಿಕೊಂಡು ಆತ್ಮವಂಚನೆ ಮಾಡಿಕೊಳ್ಳಲಾರೆ.

ಅಂತಹ ಆತ್ಮ ವಂಚನೆಗಿಂತಲೂ ಮರಣವೇ ಸಾವಿರಪಾಲು ಉತ್ತಮ ವೆಂದು ನನ್ನ ಭಾವನೆ. ವಿವಾಹದಲ್ಲಿ ಗಂಡುಹೆಣ್ಣುಗಳ ಪರಸ್ಪರ ಒಲಿಯುವಿಕೆ ಮುಖ್ಯ. ದಾಂಪತ್ಯ ಸುಖಪ್ರದವಾಗಬೇಕಾದರೆ ಇಬ್ಬರ ಹೃದಯಗಳೂ ಬೆರೆಯಬೇಕು. ಗಂಡು ಹೆಣ್ಣುಗಳ ಒಲವು-ನಲಿವು, ಆಶೆ ಅಭಿರುಚಿ, ಶಿಕ್ಷಣ-ಸಂಸ್ಕಾರ ಇವುಗಳೆಲ್ಲವೂ ಏಕೀಭಾವಿಸದೆ ಯಾವ ಆದರ್ಶ ದಾಂಪತ್ಯವೂ ನಿರ್ಮಾಣವಾಗಲಾರದು. ಅಂತಹ ಆದರ್ಶ ದಾಂಪತ್ಯವೇ ನನ್ನ ಬಾಳಿನ ಕನಸು! ನನ್ನ ಭವಿಷ್ಯದ ಭವ್ಯ ಮಂದಿರ ವನ್ನು ನಾನೇ ನಿರ್ಮಿಸಿಕೊಳ್ಳಬೇಕೆಂದಿದ್ದೇನೆ. ಅದಕ್ಕೆ ಮಾತ್ರ ನಾನು ಸಂಪೂರ್ಣ ಸ್ವತಂತ್ರನಾಗಿರಬೇಕೆಂದು ಬಯಸುತ್ತೇನೆ'.

'ನಮ್ಮ ಗೃಹಕೃತ್ಯದ ಬಗ್ಗೆ ನನಗೆ ಸಂಪೂರ್ಣ ಆದರಾಭಿಮಾನಗಳಿವೆ. ನನ್ನ ಪಾಲಿನ ಕರ್ತವ್ಯವನ್ನು ನಿರ್ವಹಿಸಲು ನಾನು ಸದಾಸಿದ್ಧನಿದ್ದೇನೆ. ಆದರೆ ಇದೊಂದು ವಿಷಯದಲ್ಲಿ ಮಾತ್ರ ನಿಮ್ಮಿಷ್ಟಕ್ಕೆ ವಿರೋಧವಾಗಿ ವರ್ತಿಸಬೇಕಾಗಿದೆ. ನಾನೇನು ಮಾಡಲಿ. ಇದು ನನ್ನ ದೈವದ ದುರ್ವಿಪಾಕ'. ಶ್ರೀಧರನಿಗೆ ಕಂಠಾವರೋಧವಾಯಿತು. ತನ್ನ ಕಣ್ಣುಗಳಂಚಿ ನಲ್ಲಿ ಚಿಮ್ಮಿಬಂದ ಕಂಬನಿಗಳನ್ನು ತೋರ್ಬೆರಳಿನಿಂದ ತೊಡೆದುಹಾಕಿದ.

ಸುಬ್ಬಣ್ಣ ತಮ್ಮ ಮಗನಾಡಿದ ಒಂದೊಂದು ಮಾತಿನ ಅರ್ಥವನ್ನೂ ಆಳವಾಗಿ ಆಲೋಚಿಸತೊಡಗಿದರು. ತನ್ನ ಕರ್ತವ್ಯವನ್ನು ಚೆನ್ನಾಗಿ ಮನಗೊಂಡಿರುವ ತಮ್ಮ ಮಗನ ಮೇಲೆ ಅವರಿಗೆ ಆಕ್ಷಣದಲ್ಲಿ ಅಭಿಮಾನ ತುಂಬಿ ಬರದಿರಲಿಲ್ಲ. ಶ್ರೀಧರ ಕಣ್ಣೀರು ತಂದುಕೊಂಡುದನ್ನು ನೋಡಿ ಅವರ ಹೃದಯದಲ್ಲಿ ಏನೋ ಒಂದು ವಿಧವಾದ ಕಸಿವಿಸಿಯುಂಟಾಗತೊಡ ಗಿತು. ಆದರೂ ಮಾತು ಮುಂದುವರಿಸಿದರು. 'ಇಲ್ಲಿ ನೋಡು ಶ್ರೀಧರಾ. ನಾನು ನೋಡಿರುವ ಹೆಣ್ಣು ಶ್ರೀಮಂತ ಮನೆತನದ ಹೆಣ್ಣನ್ನೇ. ಇನ್ನು ಯಾರೂ ಅಲ್ಲ. ನಮ್ಮ ಸಾಹೇಬರ ಎರಡನೇ ಮಗಳನ್ನೇ. ಅವರು ತಮ್ಮ ಮಗಳನ್ನು ನಿನಗೇ ಕೊಡಬೇಕೆಂದು ಬಹಳವಾಗಿ ಅಪೇಕ್ಷೆಪಡುತ್ತಿದ್ದಾರೆ. ನಿನ್ನೆ ಆಫೀಸಿನಲ್ಲಿ ಸಾಹೇಬರೇ ನನ್ನನ್ನು ಕರೆಸಿ ಖುದ್ದಾಗಿ ಹೇಳಿದರು. ನಿನ್ನ ವಿದ್ಯಾಭ್ಯಾಸಕ್ಕಾಗಿ ನೀನೇನೂ ಯೋಚಿಸಬೇಕಾಗಿಲ್ಲ. ನಿನ್ನ ಓದಿನ ಖರ್ಚನ್ನೆಲ್ಲಾ ಅವರೇ ವಹಿಸಿಕೊಳ್ಳಲು ಸಿದ್ಧವಾಗಿದ್ದಾರೆ. ನೀನು ಬಿ. ಎ.

ಅಲ್ಲಾ ಎಂ.ಎ. ಮಾಡು. ನೀನು ಎಲ್ಲಿಯ ತನಕಾ ಓದುತ್ತೀಯೋ ಅಲ್ಲೀ ವರೆಗೂ ಓದಿಸುತ್ತಾರಂತೆ. ಇನ್ನು ಹುಡುಗಿಯ ವಿಚಾರ. ಹುಡುಗಿಯೂ ಈ ವರ್ಷ ಮೆಟ್ರಿಕ್ಯುಲೇಷನ್ ಪರೀಕ್ಷೆಗೆ ಕಟ್ಟುತ್ತಾಳಂತೆ. ಜತೆಗೆ ಸಂಗೀತ ವನ್ನೂ ಹೇಳಿಸುತ್ತಿದ್ದಾರಂತೆ. ಇಷ್ಟೇ ಅಲ್ಲ ಶ್ರೀಧರಾ. ಸಾಹೇಬರ ಸಂಬಂಧ ಬೆಳೆಸೋದರಿಂದ ನನಗೂ ಲಾಭವಿಲ್ಲದೇ ಇಲ್ಲ. ಮೇಲಧಿಕಾರಿಗಳು ನನ್ನನ್ನು ಆ ಶುದ್ಧ ಮಲೆನಾಡು ಕೊಂಪೆಗೆ ವರ್ಗಾಯಿಸಿಬಿಟ್ಟಿದ್ದಾರೆ. ಈ ಊರಲ್ಲಿದ್ದು ಕೊಂಡೇ ನಮ್ಮ ಸಂಸಾರದ ಸ್ಥಿತಿ ಹೇಗಿದೆಯೆಂಬುದನ್ನು ನೀನೇ ಕಣ್ಣಾರೆ ನೋಡುತ್ತಿದ್ದೀಯ. ನನಗೆ ಬರೋ ಅರವತ್ತು ರೂಪಾಯಿಗಳ ಸಂಬಳದಲ್ಲಿ ಬಾಡಿಗೆ ಕೊಟ್ಟುಕೊಂಡು ಇಷ್ಟು ದೊಡ್ಡ ಸಂಸಾರ ನಿರ್ವಹಿಸಲು ಸಾಧ್ಯ ವಿದೆಯೇ ನೀನೇ ಹೇಳು. ನೀನು ಬೇರೆ ಕಾಲೇಜಲ್ಲಿ ಓದುತ್ತಿದ್ದೀಯ. ನಿನಗೆ ಬೇರೆ ಹಣ ಒದಗಿಸಬೇಕಾಗಿದೆ. ಹೀಗಿದೆ ನೋಡು ನಮ್ಮ ಸಂಸಾರದ ಪರಿಸ್ಥಿತಿ. ನೀನು ಸಾಹೇಬರ ಮಗಳನ್ನು ಮದುವೆಯಾದರೆ ನಮ್ಮ ಸಂಸಾರದ ಸ್ಥಿತಿಗತಿಗಳು ಬಹುಮಟ್ಟಿಗೆ ಸುಧಾರಿಸೀತು. ಸಾಹೇಬರಂತ ಶ್ರೀಮಂತರ ನೆಂಟಸ್ತಿಕೆ—ಬೀಗರತನ ನಮಗೆ ದೊರೆತ ಹಾಗಾಯಿತು. ನನಗೆ ಇಷ್ಟರಲ್ಲೇ ನಮ್ಮ ಕಚೇರಿಯ ಮ್ಯಾನೇಜರ್ ಹುದ್ದೆಯನ್ನು ಕೊಡಿಸುತ್ತಾರಂತೆ ಸಾಹೇಬರು. ಕೈತುಂಬಾ ಸಂಬಳ. ಸ್ವಂತ ಊರಲ್ಲೇ ಉದ್ಯೋಗ. ಕಚೇರಿ ಯಲ್ಲಿ ಸಾಹೇಬರ ಬೀಗರೆಂದು ನನಗೆ ಸಲ್ಲತಕ್ಕ ಗೌರವ. ಇದರ ಜತೆಗೆ ನಿನಗೆ ದೊರೆಯುವ ಶ್ರೀಮಂತ ಮನೆತನದ ಹೆಣ್ಣು. ಹೇಗಿದೆ ನೋಡು ಶ್ರೀಧರಾ ನನ್ನ ಯೋಜನೆ.'

ಶ್ರೀಧರ ನಗುತ್ತಾ ಹೇಳತೊಡಗಿದ. 'ಇಲ್ಲಿ ನೋಡಣ್ಣಾ. ಇದ್ದಕ್ಕಿದ್ದ ಹಾಗೆಯೇ ಸಾಹೇಬರ ಬೀಗರಾಗಬೇಕೆನ್ನುವ ಹುಚ್ಚು ನಿನಗೆ ಹೇಗೆ ಹಿಡಿಯಿತೋ ನನಗದೇ ಆಶ್ಚರ್ಯ. ಪರವಾಗಿಲ್ಲ. ನಿಮ್ಮ ಸಾಹೇಬರು ನಿನ್ನ ಮುಂದೆ ಒಳ್ಳೆಯ ಪ್ರಲೋಭನೆಯನ್ನೇ ಒಡ್ಡಿದ್ದಾರೆ. ಪಾಪ ನೀನೂ ಅವರೊಡ್ಡಿರುವ ಮಾಯಾಜಾಲದಲ್ಲಿ ಬಹು ಸುಲಭವಾಗಿ ಸಿಕ್ಕಿಬಿದ್ದಿದ್ದೀಯ. ನಿನ್ನನ್ನು ನೋಡಿ ನನಗೆ ಬಹಳ ದುಃಖವಾಗುತ್ತಿದೆ. ನಾನಾಗಲೇ ಹೇಳಿದೆ ನಲ್ಲಣ್ಣಾ. ಶ್ರೀಮಂತರ ಮಗಳು ದೊರೆಯುತ್ತಾಳೆಂಬ ಹುಚ್ಚು ಹಿಗ್ಗಿನಲ್ಲಿ ಪ್ರೇಮವಿರಹಿತವಾದ ದಾಂಪತ್ಯವನ್ನು ತಲೆಗೆ ಕಟ್ಟಿಕೊಳ್ಳಲು ನನಗೆ

ಸುತರಾಂ ಇಷ್ಟವಿಲ್ಲ. ಕೇವಲ ಹಣದ ಪ್ರಲೋಭನೆಯಿಂದಾಗಲೀ ಅಥವಾ ಶ್ರೀಮಂತ ಸಂಬಂಧ ಬೆಳೆಸುವುದರಿಂದುಂಟಾಗುವ ಪ್ರತಿಷ್ಠೆ ಗೌರವಗಳ ಮೇಲಿನ ವ್ಯಾಮೋಹದಿಂದಾಗಲೀ ನಾನು ನಿಮ್ಮ ಸಾಹೇಬರ ಮಗಳನ್ನು ಮದುವೆಯಾಗಲಾರೆ. ಪ್ರತಿಷ್ಠೆ ಗೌರವಗಳು ಯಾರೊಬ್ಬರೂ ಹಣ ಕೊಟ್ಟು ಕೊಂಡುಕೊಳ್ಳುವ ವಸ್ತುಗಳೇನಲ್ಲ; ಅದು ವ್ಯಕ್ತಿಗತವಾದ ಉನ್ನತ ಸಂಸ್ಕೃತಿಯ ಪ್ರಭಾವದ ಪರಿಣಾಮವಾಗಿ ಲಭಿಸತಕ್ಕ ಅಮೂಲ್ಯವಾದ ಆಸ್ತಿ.'

'ಶ್ರೀಧರಾ........ನೀನು ಪ್ರಸ್ತುತ ವಿಷಯವನ್ನೇ ಹಾರಿಸಿಬಿಟ್ಟು ನಿನ್ನ ಮನಸ್ಸೀ ಹರಟುತ್ತಿದ್ದೀಯ. ನೀನು ಭಾಷಣ ಮಾಡೋದರಲ್ಲಿ ಪ್ರವೀಣ ನೆಂದು ನಾನು ಒಪ್ಪಿಕೊಳ್ಳುತ್ತೇನೆ. ಅದಿರಲಿ. ನಮ್ಮ ಕುಟುಂಬದ ರಕ್ಷಣೆಯ ಭಾರ ನನಗೆಷ್ಟು ಸೇರಿದೆಯೋ ನಿನಗೂ ಅಷ್ಟೇ ಸೇರಿದೆಯೆಂಬುದನ್ನು ಈಗ ತಾನೇ ನೀನೇ ಒಪ್ಪಿಕೊಂಡಿದ್ದೀಯ. ನಮ್ಮ ಇಡೀ ಕುಟುಂಬದ ಹಿತರಕ್ಷಣೆ ನಿನ್ನ ವೈವಾಹಿಕ ಪ್ರಶ್ನೆಯನ್ನೇ ಅವಲಂಬಿಸಿದೆ. ಒಂದನ್ನುಳಿದು ಮತ್ತೊಂದಿಲ್ಲ. ಈಗ ನೀನು ಮದುವೆಯಾಗಲೊಪ್ಪದಿದ್ದರೆ ನಮ್ಮ ಸಂಸಾರದ ಪರಿಸ್ಥಿತಿ ತೀರಾ ಹದಗೆಟ್ಟು ಹೋಗುತ್ತದೆ. ನಾನು ವಿನಾಕಾರಣ ನಿನ್ನ ದೆಸೆಯಿಂದ ಸಾಹೇಬರ ಪ್ರಕೋಪಕ್ಕೆ ಪಾತ್ರನಾಗಬೇಕಾಗುತ್ತೆ. ಸರಿ. ನಾಳೆಯೇ ನನ್ನನ್ನೆತ್ತಿ ಒಗೆಯುತ್ತಾರೆ ಶಿವಮೊಗ್ಗಿಗೆ. ನನ್ನ ಮ್ಯಾನೇಜರ್ ಹುದ್ದೆಗೆ ಕಲ್ಲು ಬೀಳುತ್ತೆ. ನನಗೆ ಬರೋ ಈ ಭಿಕ್ಷಾಟನೆಯ ಅರವತ್ತು ರೂಪಾಯಿಗಳ ಸಂಬಳದಲ್ಲಿ ಇಷ್ಟು ದೊಡ್ಡ ಸಂಸಾರ ನಿಭಾಯಿಸೋದು ನನ್ನಿಂದ ಸಾಧ್ಯವಾಗದೆ ಕಡೇಲಿ ನನಗೆ ಹುಚ್ಚು ಹಿಡಿಯುತ್ತೆ. ಇಷ್ಟೆಲ್ಲಾ ನಾನು ಕಷ್ಟಪಡೋದನ್ನ ನೋಡಿ ಸಂತೋಷಪಡಬೇಕೆಂಬುದು ನಿನ್ನಿಷ್ಟವಾಗಿದ್ದರೆ ನೀನು ನಿನ್ನ ಹಠವನ್ನೇ ಸಾಧಿಸುತ್ತೀಯ. ನಮ್ಮ ಕುಟುಂಬದ ಹಿತರಕ್ಷಣೆಯಾಗಬೇಕೆಂಬುದು ನಿನ್ನಿಷ್ಟವಾಗಿದ್ದರೆ ಮರುಮಾತಿಲ್ಲದೆ ನನ್ನ ಸಲಹೆ ಗೊಪ್ಪಿಕೊಳ್ಳುತ್ತೀಯ. ಇವೆರಡರಲ್ಲಿ ಯಾವುದನ್ನ ಆರಿಸಿಕೊಳ್ಳುತ್ತೀಯ ಹೇಳಿಬಿಡು. ಯಾವುದೊಂದೂ ಈಗಲೇ ಇತ್ಯರ್ಥವಾಗಿ ಹೋಗಲಿ.'

'ನೀನು ಹೀಗೆಲ್ಲಾ ಹುಚ್ಚಾಪಟ್ಟೆ ಮಾತಾಡಿ ನನ್ನ ಮನಸ್ಸಿಗೆ ವ್ಯಥೆಯುಂಟುಮಾಡಬೇಡಣ್ಣಾ. ನಾನಾಗಲೇ ನನ್ನ ಅಂತ್ಯ ತೀರ್ಮಾನವನ್ನ

ತಿಳಿಸಿಬಿಟ್ಟಿದ್ದೇನೆ. ಪುನಃ ಪುನಃ ನನ್ನನ್ನು ಕೆದಕಿ ಪ್ರಯೋಜನವೇನೂ ಇಲ್ಲ. ನನ್ನನ್ನು ದಯವಿಟ್ಟು ಕ್ಷಮಿಸಿ ಬಿಡಣ್ಣಾ.' ಶ್ರೀಧರ ಎದ್ದು ಹೋಗಿ ಸುಬ್ಬಣ್ಣನವರ ಪಾದದ್ವಯಗಳ ಮೇಲೆ ಬಿದ್ದುಬಿಟ್ಟ. ಶ್ರೀಧರನ ಕಣ್ಣುಗಳಿಂದುದುರಿದ ಬಿಸಿ ಕಂಬನಿಗಳು ಅವರ ಪಾದಗಳನ್ನು ತೊಯ್ಸಿಬಿಟ್ಟವು. ಸುಬ್ಬಣ್ಣ ತಮ್ಮ ಮಗನ ಉದ್ಧಟತನವನ್ನು ಕ್ಷಮಿಸಲು ಸಿದ್ಧರಾಗಿರಲಿಲ್ಲ. ತಮ್ಮ ಮಗನ ಕೈಯ್ಯಲ್ಲಿ ತಮಗುಂಟಾದ ಅಪಮಾನದಿಂದ ಅವರ ಸ್ವಾಭಿಮಾನಕ್ಕೆ ದೊಡ್ಡದೊಂದು ಆಘಾತವುಂಟಾಗಿತ್ತು. ಅದನ್ನು ನುಂಗಿಕೊಳ್ಳಲು ಸುಬ್ಬಣ್ಣ ಪೂರಾ ಅಸಮರ್ಥರಾಗಿ ಹೋಗಿದ್ದರು. ರೋಷಾಗ್ನಿ ಅವರ ಮುಖದಲ್ಲಿ ತಾಂಡವವಾಡತೊಡಗಿತು. ಹೆಡೆಮೆಟ್ಟಿದ ಹಾವಿನಂತೆ ಒಂದೇ ಸಮನೆ ಅವರು ಬುಸುಗುಟ್ಟುತ್ತಿದ್ದರು. ಕೋಪವಿವಶರಾಗಿ ಹೋಗಿದ್ದುದರಿಂದ ಅವರಿಗೆ ಮೈಮೇಲಿನ ಪ್ರಜ್ಞೆಯೇ ಉಳಿದಿರಲಿಲ್ಲ.

'ನೀನೊಬ್ಬ ಚಂಡಾಲ. ನನ್ನ ಮಗನಲ್ಲ. ಹಾಳಾಗಿ ಹೋಗು. ಈವತ್ತಿನಿಂದ ನಿನ್ನ ಹಾಳು ಮುಖ ನನಗೆ ತೋರಿಸಬೇಡ' ಎಂದು ಗುಡುಗಾಡಿದರು ಸುಬ್ಬಣ್ಣ. ಶ್ರೀಧರ ಥರಥರನೆ ನಡುಗುತ್ತಾ ಎದ್ದುನಿಂ 'ಛೀ ಭ್ರಷ್ಟ' ಎಂದು ಕನಲುತ್ತಾ ಸುಬ್ಬಣ್ಣ ಕೊಠಡಿಯಿಂದ ಬಿರಬಿರನೆ ಹೊರಟು ಹೋದರು. ಶ್ರೀಧರ ದಿಕ್ಕುತೋರದೆ ಶಿಲಾಪ್ರತಿಮೆಯಂತೆ ನಿಂತುಬಿಟ್ಟ.

೪

"ಬನ್ನೀ ಸುಶೀಲಮ್ಮ. ಬಾಮ್ಮ ಅಹಲ್ಯ. ಒಳಗೆ ಬನ್ನಿ." ಮನೆ ಬಾಗಿಲಲ್ಲಿ ನಿಂತಿದ್ದ ಅತಿಥಿಗಳನ್ನು ಬಹಳ ಸಂಭ್ರಮದಿಂದ ಸ್ವಾಗತಿಸಿದರು ಭಾಗ್ಯಮ್ಮ. ತಾಯಿಮಗಳಿಬ್ಬರೂ ಪಡಸಾಲೆಯಲ್ಲಿ ಹಾಸಿದ್ದ ಚಾಪೆಯ ಮೇಲೆ ಕೂತುಕೊಂಡರು. ಬಚ್ಚಲುಮನೆಯಲ್ಲಿ ಮುಖಾ ತೊಳೆದುಕೊಳ್ಳುತ್ತಿದ್ದ ಕಮಲೂ ಅಲ್ಲಿಂದಲೇ "ಯಾರಮ್ಮಾ ಬಂದಿರೋದು" ಎಂದು ಕೂಗಿಕೊಂಡಳು. "ಸಾಹೇಬರ ಮನೆಯವರು ಬಂದಿದ್ದಾರೆ ಕಣೇ. ಜತೇಲಿ ನಿನ್ನ ಸ್ನೇಹಿತೆ ಅಹಲ್ಯೆಯೂ ಬಂದಿದ್ದಾಳೆ. ಇನ್ನೂ ನಿನ್ನ ಮುಖ ತೊಳೆದುಕೊಂಡಾಗಲಿಲ್ಲವೇನೇ" ಎಂದು ಭಾಗ್ಯಮ್ಮ ಪಡಸಾಲೆ

ಯಿಂದಲೇ ಕೂಗಿಕೊಂಡರು. ಅಹಲ್ಯೆ ಬಂದಿದ್ದಾಳೆಂದು ತಿಳಿದು ಒಂದೇ ಓಟದಲ್ಲಿ ಓಡಿಬಂದಳು ಕಮಲೂ. 'ಇದೇನು ಸುಶೀಲಮ್ಮ ಬಹಳ ಅಪರೂಪ ವಾಗಿ ಬಂದುಬಿಟ್ಟಿರಿ ನಮ್ಮನೇಗೆ. ಒಂದುದಿನಾ ನಿಮ್ಮ ತಾಯಿಯವರನ್ನೂ ಕರೆದುಕೊಂಡುಬಾರೇಂತ ಅಹಲ್ಯೆಗೆ ದಿನವೂ ಹೇಳುತ್ತಿದ್ದೆ. ಕಡೆಗೂ ಈವತ್ತು ಬಂದಿರಲ್ಲಾ. ಬಹಳ ಸಂತೋಷ ಕಾಣ್ರೀ ಸುಶೀಲಮ್ಮ ನೀವು ಬಂದಿರೋದು' ಕಮಲೂ ಟವಲಿನಲ್ಲಿ ಮುಖವೊರಿಸಿಕೊಳ್ಳುತ್ತಾ ಹೇಳಿದಳು. ಥಟ್ಟನೇ ಏನನ್ನೋ ನೆನೆಸಿಕೊಂಡು ಒಳಗೆ ಹೋಗಿ ಕೊಬ್ಬರೀ ಎಣ್ಣೆ ಶೀಶೆ, ಬಾಚಣಿಗೆ, ಕನ್ನಡಿ ಇವುಗಳನ್ನು ತಂದು ಸುಶೀಲಮ್ಮನವರ ಮುಂದಿಟ್ಟಳು. 'ನಿಮ್ಮ ಕೈಯಲ್ಲಿ ಜಡೇ ಹಾಕಿಸಿಕೊಳ್ಳಬೇಕೆಂದು ಆಸೆ ಯಾಗುತ್ತೇ ಸುಶೀಲಮ್ಮ. ನೀವು ಅಳ್ಳಕವಾಗಿ ಚೆನ್ನಾಗಿ ಜಡೇ ಹಾಕು ತ್ತೀರಿ' ಎನ್ನುತ್ತಾ ಅವರ ಮುಂದೆ ಕೂತುಕೊಂಡೇ ಬಿಟ್ಟಳು.

'ಸ್ವಲ್ಪ ಇಲ್ಲೇ ಕೂತ್ಕೊಂಡು ಮಾತಾಡ್ತಿರೀ. ಈಗ ಬಂದ್ಬಿಡ್ತೀನಿ' ಎನ್ನುತ್ತಾ ಭಾಗ್ಯಮ್ಮ ಎದ್ದುಹೋದರು.

'ನೀವ್ಯೇನೂ ನಮಗೋಸ್ಕರ ತೊಂದ್ರೇ ತೆಗೆದುಕೊಳ್ಬೇಡಿ ಭಾಗ್ಯಮ್ಮ. ನಿಮ್ಮನ್ನ ನೋಡಿ ಬಹಳ ದಿನವಾಗಿತ್ತು. 'ಅಣ್ಣಾ ಕೂಡಾ ಊರಲ್ಲಿಲ್ಲ. ಭಾಗ್ಯಮ್ಮನೋರ ಮನೆಗೆ ಹೋಗಿಬರೋಣಾಂತ' ಅಹಲ್ಯೇ ಹೇಳಿದಳು. ಹಾಗೇ ನೋಡಿಕೊಂಡು ಹೋಗೋಣಾಂತ ಬಂದೆ. ನೀವು ಬಂದು ಕೂತ್ಕೊಳ್ಳೀ ಭಾಗ್ಯಮ್ಮ'

'ನಾನ್ಯೇನೂ ನಿಮಗೋಸ್ಕರ ಮಾಡೋಲ್ಲ ಸುಶೀಲಮ್ಮ. ನಮ್ಮಂಥ ಬಡವರ ಮನೇಗೆ ಭಾಗ್ಯಲಕ್ಷ್ಮೀ ಬರೋಹಾಗೆ ಬಂದಿದ್ದೀರಿ. ನನಗಂತೂ ತುಂಬಾ ಸಂತೋಷವಮ್ಮ' ಎಂದಿಷ್ಟು ಹೇಳಿ ಭಾಗ್ಯಮ್ಮ ಅಡಿಗೆಯ ಮನೆಗೆ ಹೊರಟುಹೋದರು. ಒಲೆ ಹತ್ತಿಸಿ ಕಾಫಿಗೆ ನೀರಿಟ್ಟರು. ನೀರು ಕಾಯುವ ಹೊತ್ತಿಗೆ, ತೆಂಗಿನಕಾಯಿ ತುರಿದಿಟ್ಟುಕೊಂಡು, ಹಸೀಮೆಣಸಿನ ಕಾಯಿ ಮುಂತಾದುವನ್ನು ಹಚ್ಚಿಟ್ಟುಕೊಂಡರು. ಸ್ವಲ್ಪ ಹೊತ್ತಿಗೆಲ್ಲಾ ನೀರು ಮರಳಿತು. ಮರಳುತ್ತಿದ್ದ ನೀರನ್ನು ಫಿಲ್ಟರಿನಲ್ಲಿ ಸುರಿದರು. ಒಲೆಯಮೇಲೆ ಬಾಣಲಿ ಹಾಕಿದರು. ಕಾಲುಗಂಟೆಯಲ್ಲೆಲ್ಲಾ ಉಪ್ಪಿಟ್ಟು ಸಿದ್ಧವಾಗಿಹೋಯಿತು.

'ಲೇ ಕಮಲೂ, ನಿನ್ನ ಜಡೇ ಮುಗಿದಿದ್ದರೆ ಸ್ವಲ್ಪ ಬಾರೇ ಇಲ್ಲಿ' ಭಾಗ್ಯಮ್ಮ ಕೂಗಿಕೊಂಡರು. ಅಷ್ಟುಹೊತ್ತಿಗೆ ಸುಶೀಲಮ್ಮ ಕಮಲೂಗೆ ಜಡೇ ಹಾಕಿ ಮುಗಿಸಿದ್ದರು. 'ಬಂದೇವಮ್ಮಾ' ಎನ್ನುತ್ತಾ ತನ್ನ ತುರುಬಿನಲ್ಲಿದ್ದ ಸಂಪಿಗೇಹೂವಿನ ದಂಡೆಯನ್ನು ಮುಟ್ಟಿ ಮುಟ್ಟಿ ನೋಡಿಕೊಳ್ಳುತ್ತಾ ಕಮಲೂ ಜಿಂಕೆಯ ಮರಿಯಂತೆ ಅಡಿಗೆಯ ಮನೆಗೆ ಓಡಿದಳು.

'ಬಾಳೇ ಎಲೇ ಕಟ್ಟು ಬಿಚ್ಚಿ ಹರೀದಿರೋದು ನೋಡಿ ನಾಲ್ಕೆಲೇ ತೆಗೆದಿಡೇ. ಹಾಗೇ ಹೂಜಾ ತುಂಬಾ ನೀರೂ ಲೋಟಾಗಳನ್ನು ಹಾಲಿಗೆ ತಗೊಂಡು ಹೋಗು. ಇಗೋ ನಾನೂ ಬಂದುಬಿಟ್ಟೆ' ಎಂದರು ಭಾಗ್ಯಮ್ಮ ಉಪ್ಪಿಟ್ಟಿಗೆ ನಿಂಬೇ ಹಣ್ಣು ಹಿಂಡುತ್ತಾ. ಕಮಲೂ ಭಾಗ್ಯಮ್ಮ ಹೇಳಿದ ಕೆಲಸವನ್ನು ಕ್ಷಣಮಾತ್ರದಲ್ಲಿ ಮುಗಿಸಿಬಿಟ್ಟಳು. ಭಾಗ್ಯಮ್ಮ ಬಾಣಲಿಯನ್ನೇ ಹಾಲಿನಲ್ಲಿ ತಂದಿಟ್ಟುಕೊಂಡರು. ನಾಲ್ಕೆಲೆಗಳಲ್ಲಿ ಉಪ್ಪಿಟ್ಟನ್ನು ಹಾಕಿ, ತಾಯಿಮಗಳ ಮುಂದೆ ಒಂದೊಂದೆಲೆಯನ್ನು ಜರುಗಿಸಿದರು. ತಮ್ಮ ಮುಂದಿಟ್ಟದ್ದ ಎಲೇನ ನೋಡಿ 'ಇದೆಲ್ಲಾ ಯಾಕಮ್ಮಾ ಮಾಡಿದಿರಿ ಈಗ. ಸುಮ್ನೇ ನಿಮಗೆ ತೊಂದರೆ ಕೊಟ್ಟಹಾಗಾಯ್ತಲ್ಲಾ ನಾವು ಬಂದದ್ದು' ಎಂದರು ಸುಶೀಲಮ್ಮ ಬಹಳ ಸಂಕೋಚದಿಂದ.

'ಹೌದು ಕಾಣ್ರೀ ಸುಶೀಲಮ್ಮ. ಬಹಳ ತೊಂದರೆಯಾಯ್ತು ನಿಮ್ಮಿಂದ ನಿಜ. ನಾನು ನಿಮ್ಮನೇಗೆ ಬಂದಾಗಲೆಲ್ಲಾ ನೀವು ತಿಂಡೀ ಕೊಡ್ತೀರಿ. ನಾನೂ ತಿಂದುಕೊಂಡು ಬಂದುಬಿಡ್ತೇನೆ. ನಮ್ಮನೇಗೆ ನೀವು ಬರೋದೇ ಬಹಳ ಅಪರೂಪ. ಏನೋ ಬಡವರು ನಾವು. ದೇವರು ನಮಗೆ ಕೊಟ್ಟಿರೋದನ್ನ—ಅವಲಕ್ಕಿಯೋ, ಹುರೀ ಹಿಟ್ಟೋ ಏನಾದರೂ ಸರಿಯೆ ವಿಶ್ವಾಸದಿಂದ ಮನೆಗೆ ಬರೋ ಅತಿಥಿಗಳಿಗೆ ಕೊಡಬೇಕನ್ನಿಸುತ್ತೆ ಸುಶೀಲಮ್ಮ. ಪರವಾಗಿಲ್ಲ ತಗೊಳ್ಳಿ. ತಗೊಳ್ಳೇ ಅಹಲ್ಯಾ' ಎಂದಳು ಕಮಲೂ.

'ನಿಮ್ಮನೇಲಿ ತಿಂಡೀ ತಿನ್ನೋಕೆ ನನಗೇನೂ ಸಂಕೋಚವಿಲ್ಲಮ್ಮ ಕಮಲೂ. ಮಧ್ಯಾಹ್ನ ಒಂದಿಷ್ಟು ಪೂರೀಸಾಗು ಮಾಡಿದ್ದೆ. ಕಂಠಪೂರ್ತಿ ತಿಂದುಬಂದಿದ್ದೇವೆ. ಪಾಪ ನಿಮ್ಮಮ್ಮ ಕಷ್ಟಪಟ್ಟು ಉಪ್ಪಿಟ್ಟು ಮಾಡಿದ ರಲ್ಲಾಂತ ನನ್ನ ಒದ್ದಾಟ ಅಷ್ಟೆ' ಎಂದು ಸಮಜಾಯಿಷಿ ಹೇಳಿದರು

ಸುಶೀಲಮ್ಮ. ಕಡೆಗೆ ತಾಯೀಮಗಳಿಬ್ಬರ ಮನಸ್ಸು ನೋಯಿಸಬಾರ ದೆಂದುಕೊಂಡು ಸುಶೀಲಮ್ಮ ಎಲೆಗೆ ಕೈ ಹಚ್ಚಿದರು. 'ನೀವೂ ತಗೊಳ್ಳೀ ಭಾಗ್ಯಮ್ಮ' ಎಂದು ಸೂಚಿಸಿದರು. 'ಆಗಲಮ್ಮ ತಗೊಳ್ತೀನೆ. ಸ್ಕೂಲಿಂದ ಹುಡುಗರು ಬರ್ತಾರೆ. ಅವರ ಭಾಗ ಎತ್ತಿಟ್ಟುಬಿಟ್ಟು ಬರ್ತೀನೆ' ಎನ್ನುತ್ತಾ ಬಾಣಲಿಯ ಸಹಿತ ಅಡಿಗೆಯ ಮನೆಗೆ ಹೋದರು ಭಾಗ್ಯಮ್ಮ. ಬರುವಾಗ ಕಾಫೀ ಪಾತ್ರೆಯನ್ನು ಹಿಡಿದುಕೊಂಡು ಬಂದರು.

'ಉಪ್ಪಿಟ್ಟು ಬಹಳ ರುಚಿಯಾಗಿದೆ ಭಾಗ್ಯಮ್ಮ. ಆದರೆ ಹೊಟ್ಟೇ ತುಂಬಿಹೋಗಿದೆ' ಎಂದಳು ಅಹಲ್ಯೆ.

'ಏನೋಮ್ಮ ಬಡವರಮನೇದು. ಹೇಗಿದೆಯೋ ಏನೋ. ಮುಖ್ಯ ನಿಮ್ಮ ವಿಶ್ವಾಸ, ಅಂತಃಕರಣ, ದೊಡ್ಡದು. ದೇವರು ಎಲ್ಲಾದರೂ ನಿನ್ನನ್ನು ....' ಭಾಗ್ಯಮ್ಮನವರಿಗೆ ಕಂಠ ಬಿಗಿದು ಬಂತು. ಮಾತು ಅಷ್ಟಕ್ಕೇ ನಿಂತುಹೋಯಿತು. ತಿಂಡಿ ತಿನ್ನುತ್ತಿದ್ದವರೆಲ್ಲರೂ ಮೂಕವಿಸ್ಮಿತರಾಗಿ ಭಾಗ್ಯಮ್ಮನವರನ್ನೇ ನೋಡುತ್ತಾ ಕೂತುಬಿಟ್ಟರು.

'ಏನೋ ನಮಗೂ ಅದೃಷ್ಟವಿಲ್ಲದೇ ಹೋಯಿತು ಸುಶೀಲಮ್ಮ. ನಮ್ಮ ಹುಡುಗಾ ಒಪ್ಪದೇ ಹೋದ. ಕೈ ತೊಳೆದು ಮುಟ್ಟೋಹಾಗಿದ್ದಾಳೆ ನಿಮ್ಮ ಮಗಳು. ಒಳ್ಳೇ ರತಿಯಂಥಾ ಸೊಸೇ ಬರ್ತಿದ್ದಳು ನಮ್ಮನೇಗೆ. ಯಾವುದಕ್ಕೂ ಅದೃಷ್ಟವಿರಬೇಕು ಸುಶೀಲಮ್ಮ. ನನಗೇನೋ ಮೊದ ಲಿಂದಲೂ ನಿಮ್ಮ ಅಹಲ್ಯೇಮೇಲೇ ಹೆಚ್ಚು ಮಮತೆ ನೋಡಿ. ನಿಮ್ಮ ದೊಡ್ಡ ಮಗಳು ಕೌಸಲ್ಯೇನೂ ನೋಡಿದ್ದೇನೆ. ಅವಳದೇ ಒಂದು ರೀತಿ. ಇವಳದೇ ಒಂದು ರೀತಿ. ಹಿಗೇ ಹೇಳಿದೆ ಅಂತ ಮನಸ್ಸಿಗೇನೂ ತಿಳಿಕೋ ಬೇಡೀ ಸುಶೀಲಮ್ಮ. ಏಕೋ ಇವಳನ್ನು ನೋಡಿದರೆ ನನಗೆ ಕರುಳು ಬಾಧಿಸುತ್ತೆ. ಏನೋ ಅಕ್ಕರೆ ಆದಿವಾರ ಹುಟ್ಟುತ್ತೇ ಮನಸ್ಸಿನಲ್ಲಿ. ನಿಮ್ಮ ಅಹಲ್ಯೇನ ಮೊದಲಿಂದಲೂ ನೋಡ್ತಿದೇನಲ್ಲಾ. ಬಹಳ ಮಾನಾಷ್ಟೆ ಹುಡುಗಿ. ಕೆಲಸಕಾರ್ಯದಲ್ಲಿ ಜಾಣೆ. ವಿದ್ಯಾಬುದ್ಧಿ, ಗುಣ, ರೂಪ, ಎಲ್ಲವೂ ಇದೆ. ಅವಳ ನಯ ವಿನಯ, ಒಪ್ಪ ಓರಣ ಇವೆಲ್ಲಾ ನನ್ನ ಮನಸ್ಸಿಗೆ ಬಹಳವಾಗಿ ಮೆಚ್ಚಿಕೆಯಾಗಿದೆ ಸುಶೀಲಮ್ಮ.

ನಮ್ಮ ಯಜಮಾನ್ರು ನಮ್ಮ ಹುಡುಗನ ಮದುವೇ ಪ್ರಸ್ತಾಪ ತೆಗೆಯೋಕೆ ಮುಂಚೆಯೇ ನಾನು 'ಇವಳೇ ನನಗೆ ಸರಿಯಾದ ಸೊಸೆ. ತಂದುಕೊಂಡರೆ ಇವಳನ್ನೇ ತಂದುಕೊಳ್ಳಬೇಕು ನಮ್ಮ ಹುಡುಗನಿಗೆ' ಅಂತ ಮನಸ್ಸಿನಲ್ಲಿ ನಿಷ್ಕರ್ಷೆ ಮಾಡಿಕೊಂಡುಬಿಟ್ಟಿದ್ದೆ. ಆದರೆ ನಮ್ಮಿಚ್ಛೆ ಏನು ನಡಿಯುತ್ತೆ ಹೇಳೀ ಸುಶೀಲಮ್ಮ. ರತೀದೇವಿಯಂಥಾ ಸೊಸೇನ ಮನೆಗೆ ತಂದುಕೊಳ್ಳೋ ಪುಣ್ಯಾ ಪಡೆದುಕೊಂಡು ಬಂದಿಲ್ಲಾ ನಾನು ....'

'ಆದದ್ದು ಆಗಿಹೋಯಿತು ಭಾಗ್ಯಮ್ಮ. ಅದಕ್ಕೋಸ್ಕರ ನೀವ್ಯೇಕೆ ಸಂಕಟ ಪಡುತ್ತೀರಿ ಬಿಡಿ. ನಿಮ್ಮ ಸಂಬಂಧ ಬೆಳೆಸಬೇಕೂಂತ ನಾವೂ ಬಹಳವಾಗಿ ಆಸೆಯಿಟ್ಟುಕೊಂಡಿದ್ದೆವು. ಅದರಲ್ಲೂ ನಮ್ಮ ಯಜಮಾನರಂತೂ ನಿಮ್ಮ ಹುಡುಗನಿಗೇ ನಮ್ಮ ಅಹಲ್ಯೇನಕೊಡೋದೂಂತ ತೀರ್ಮಾನಿಸಿಕೊಂಡುಬಿಟ್ಟಿದ್ದರು. 'ನಮ್ಮ ಸುಬ್ಬಣ್ಣೋರ ಮಗ ಶ್ರೀಧರನೇ ನನ್ನ ಚಿಕ್ಕಳಿಯ ಕಣೇ' ಎಂದು ನನ್ಹತ್ರ ಹೆಮ್ಮೆಯಿಂದ ಸಾರಿಕೊಳ್ಳುತ್ತಿದ್ದರು.

ಜೋಯಿಸರಿಗೆ ಜಾತಕಗಳನ್ನು ತೋರಿಸಿದಿವಿ. ಅವರೂ ಜಾತಕಗಳನ್ನು ಗುಣಿಸಿ ನೋಡಿ ಈ ಸಂಬಂಧ ಅಗತ್ಯವಾಗಿ ಬೆಳೆಸಬೇಕಾದ್ದು — ವಧೂವರರಿಬ್ಬರಿಗೂ ಅನ್ಯೋನ್ಯ ದಾಂಪತ್ಯಯೋಗವಿದೆ. ಖಂಡಿತ ಆಗಬಹುದು ಅಂತ ಹೇಳಿದರು. ನಿಮ್ಮ ಹುಡುಗನಿಗೂ ಈಗ ರಜವಿತ್ತು. ಯಾವ ತೊಂದರೆಯೂ ಇರಲಿಲ್ಲ. ಅನಾಯಾಸವಾಗಿ ನಡೆದುಹೋಗುತ್ತಿತ್ತು. ನೋಡಿ ಭಾಗ್ಯಮ್ಮ, ಆಗಲೇ ಮನೆಗೆ ಸುಣ್ಣ ಬಣ್ಣ ಮಾಡಿಸ್ತಿದಾರೆ ನಮ್ಮ ಯಜಮಾನ್ರು. ಅಷ್ಟರಲ್ಲೇ ದೇವರು ಅದೆಂಥಾ ದೊಡ್ಡ ಪಿಡುಗು ತಂದಿಟ್ಟುಬಿಟ್ಟ ನೀವೇ ನೋಡೀ ಭಾಗ್ಯಮ್ಮ. ಈಗ ನಾನು ಮದುವೆಯಾಗೋಲ್ಲಾಂತ ನಿಮ್ಮ ಹುಡುಗ ಖಡಾಖಂಡಿತವಾಗಿ ಹೇಳಿಬಿಟ್ಟನಂತೆ ಇದು ನಿಜವೇ. ನಿಮ್ಮ ಯಜಮಾನರ ಬಾಯಲ್ಲಿ ಈ ಮಾತು ಕೇಳಿದಾಗಿನಿಂದಲೂ ಅವರು ಭೂಮಿಗಿಳಿದುಹೋಗಿದ್ದಾರೆ. ಹೊತ್ಹೊತ್ತಿಗೆ ಊಟಾತಿಂಡೀಏನೂ ಬೇಕಾಗಿಲ್ಲ ಅವರಿಗೆ. ಅನ್ಯಾಯವಾಗಿ ಹುಡುಗೀ ಮದುವೇ ನಿಂತುಹೋಯ್ತಲ್ಲಾ. ನಾನು ಪಾಪಿ—ನಾನೆಂತಹ ನತದೃಷ್ಟ' ಅಂತ ಸುಮ್ಮನೆ ಒದ್ದಾಡಿಕೊಳ್ಳುತ್ತಿದ್ದಾರೆ. ನಾನು ಹೆಣ್ಣು ಹೆಂಗಸಾದರೂ ವಾಸಿ; ಅದೆಷ್ಟೆಷ್ಟೋ ಸಮಾಧಾನ ಹೇಳ್ತಿದೇನೆ ಅವರಿಗೆ.

ಆದರೆ ಅವರ ಕೊರಗು ತಪ್ಪಿಸೋಕ್ಕಂತೂ ನನ್ನಿಂದ ಸಾಧ್ಯವಿಲ್ಲ ಭಾಗ್ಯಮ್ಮ. ನಾನ್ಯೇನು ಮಾಡಲೀ ಹೇಳಿ. ದೇವರು ನಮ್ಮ ಭಾಗಕ್ಕೆ ದೊಡ್ಡ ಕಲ್ಲು ಗುಂಡಾಗಿ ಕೂತು ಬಿಟ್ಟಿದ್ದಾನೆ. ಆ ಭಗವಂತ ಎಂದಿಗೆ ಕಣ್ಣು ತೆಗೆದು ನೋಡ್ತಾನೋ; ಎಂದಿಗೆ ನಮ್ಮ ಅಹಲ್ಯೆಗೆ ಕಂಕಣ ಪ್ರಾಪ್ತಿ ಕೂಡಿ ಬರುತ್ತ್ಯೋ ಕಾಣೆ."

ಹೀಗೆ ಹೇಳುತ್ತಿದ್ದ ಹಾಗೆಯೇ ಸುಶೀಲಮ್ಮನವರ ಕಣ್ಣುಗಳಿಂದ ಬಿಸಿಯಾದ ಕಂಬನಿಗಳೆರಡು ಜಗುಳಿದುವು. ತಮ್ಮ ಸೀರೆಯ ಅಂಚಿನಿಂದ ಕಣ್ಣೀರನ್ನು ತೊಡೆದು ಹಾಕಿದರು. ಅವರ ಮುಂದಿದ್ದ ಉಪ್ಪಿಟ್ಟು ಅವರಿಗೆ ವಿಷವಾಗಿ ಪರಿಣಮಿಸಿತು. ಅವರಿಗೆ ದುಃಖವುಕ್ಕೆತ್ತರಿಸಿಕೊಂಡು ಬರುತ್ತಿತ್ತು. ಅದುವರೆಗೂ ನಡೆದಿದ್ದ ಸಂಭಾಷಣೆಯಿಂದ ಎಲ್ಲರ ಮನಸ್ಸೂ ಕಲಕಿಹೋಗಿದ್ದುವು. ಅದೊಂದು ವಿಲಕ್ಷಣವಾದ ಮೂಗು ಸಂಕಟ ಎಲ್ಲರ ಮನಸ್ಸನ್ನೂ ಹಿಂಡಿ ಹಿಪ್ಪೇ ಮಾಡುತ್ತಿತ್ತು. ಸ್ವಲ್ಪ ಹೊತ್ತು ವಾತಾವರಣ ಮೌನವಾಗಿತ್ತು. ಇದ್ದುದರಲ್ಲಿ ಸಮಾಧಾನ ತಂದುಕೊಂಡು ಭಾಗ್ಯಮ್ಮ ಹೇಳಿದರು. "ಹೀಗ್ಯೇಕೆ ನನಗೆ ಮತೀಮುಚ್ಚುಹೋಯಿತೋ ಗೊತ್ತಿಲ್ಲವಲ್ರೀ ಸುಶೀಲಮ್ಮ. ಏನೋ ನೋಡಿಕೊಂಡು ಹೋಗೋಣಾಂತ ಅಪರೂಪವಾಗಿ ನೀವು ಬಂದ್ರೆ, ನಿಮಗೆ ಇಲ್ಲದ ಕಾಷ್ಟಾವ್ಯಸನಾಹಚ್ಚಿ, ಮನಸ್ಸಿಗೆ ಬೇಜಾರು ಮಾಡುತ್ತಿದ್ದೀನಲ್ಲಾ ಸುಶೀಲಮ್ಮ. ಹೋಗಲಿ ಆ ಮಾತನ್ನಷ್ಟಕ್ಕೇಬಿಡಿ. ಕಾಫಿ ಆಗಲೇ ಹಾಕಿದ್ದು-ಆರಿಹೋಯಿತೋ ಏನೋ.'

ಸುಶೀಲಮ್ಮನವರಿಗೆ ಕಾಫಿಕುಡಿಯುವಷ್ಟು ಚಿತ್ತಸ್ವಾಸ್ಥ್ಯವಿರಲಿಲ್ಲವಾದರೂ ಭಾಗ್ಯಮ್ಮನವರ ಮನಸ್ಸುನೋಯಬಾರದೆಂದು ಲೋಟಾ ಕೈಗೆತ್ತಿಕೊಂಡರು. "ಹೂವು ತಗೊಳ್ಳೀ ಭಾಗ್ಯಮ್ಮ. ನೀವೂ ಜಡೇಹಾಕ್ಕೊಂಡು ಹೂವು ಮುಡುಕೊಳ್ಳಿ. ನಾವಿನ್ನು ಹೋಗಿಬರ್ತೇವೆ" ಸುಶೀಲಮ್ಮ ನುಡಿದರು.

'ಇನ್ನು ಸ್ವಲ್ಪ ಹೊತ್ತು ಕೂತ್ಕೊಕ್ರೀ ಸುಶೀಲಮ್ಮ. ನೀವು ಬರೋದೇ ಬಹಳ ಅಪರೂಪ" ಎಂದು ಗೋಗರೆದಳು ಕಮಲೂ.

"ಇಲ್ಲಾಮ್ಮ ಹೋಗ್ಬೇಕು. ಸಂಗೀತದ ಮೇಷ್ಟ್ರು ಬರೋ ಹೊತ್ತಾಯ್ತು. ಮನೇಲಿ ಯಾರೂ ಇಲ್ಲ. ಬೀಗಾಹಾಕ್ಕೊಂಡು ಬಂದಿದ್ದೇವೆ.

ಇನ್ನೊಂದಿನ ಹೊತ್ತಿಗೆ ಮುಂಚೆಯೇ ಬರ್ತೇವೆ. ಬೇಕಾದಷ್ಟು ಹೊತ್ತು ಕೂತಿರ್ತೇವೆ" ಎಂದರು ಸುಶೀಲಮ್ಮ. "ಸ್ವಲ್ಪ ಕೂತ್ಕೊಳ್ಳೀಮ್ಮ. ಕುಂಕುಮ ಕೊಡ್ತೀನಿ" ಎನ್ನುತ್ತಾ ಭಾಗ್ಯಮ್ಮ ಒಳಗೆ ಹೋದರು. ಒಂದು ತಟ್ಟೆಯಲ್ಲಿ ಎಲಡಿಕೆ, ಎರಡು ತೆಂಗಿನಕಾಯಿಗಳನ್ನಿಟ್ಟುಕೊಂಡು ಬಂದರು. "ಇದೇನು ಭಾಗ್ಯಮ್ಮ. ಈಗೇನು ಮದುವೆಯೇ, ಪ್ರಸ್ತವೇ ತೆಂಗಿನಕಾಯಿ ಕೊಡೋಕ್ಕೆ. ಖಂಡಿತಾ ಬೇಡ. ಬರೀ ಕುಂಕುಮ ಕೊಡಿ ಸಾಕು" ಎನ್ನುತ್ತಾ ಬಟ್ಟಲಲ್ಲಿದ್ದ ಕುಂಕುಮ ಹಚ್ಚಿಕೊಂಡರು ಸುಶೀಲಮ್ಮ.

"ಪರವಾಗಿಲ್ಲ ತಗೊಳ್ಳೀಮ್ಮ. ನಿಮ್ಮಂಥ ಭಾಗ್ಯವಂತರು ನಮ್ಮನೇಗೆ ಬರೋದೇ ಅಪರೂಪ. ಈವತ್ತು ಶುಕ್ರವಾರ. ಲಕ್ಷಣವಾಗಿ ಭಾಗ್ಯಲಕ್ಷ್ಮೀ ಬರೋಹಾಗೆ ಬಂದಿದ್ದೀರಿ ಮನೆಗೆ. ತಗೊಳ್ಳೀ ಪರವಾಗಿಲ್ಲ" ಎನ್ನುತ್ತಾ ಎಲಡಿಕೇ ತಟ್ಟೆಯನ್ನು ಸುಶೀಲಮ್ಮನವರ ಮುಂದೆ ನೀಡಿದರು. ಅವರು ವಿಧಿಯಿಲ್ಲದೆ ತಾಂಬೂಲವನ್ನು ತೆಗೆದುಕೊಂಡು ಹೊರಡಲುದ್ಯುಕ್ತರಾದರು.

"ನಾವಿನ್ನು ಬರ್ತೀವಿ ಭಾಗ್ಯಮ್ಮ. ನೀವೂ ಪುರಸತ್ತುಮಾಡಿಕೊಂಡು ನಾಳೆ ನಾಳಿದ್ದರಲ್ಲಿ ನಮ್ಮನೇಗೆ ಬನ್ನಿ" ಎನ್ನುತ್ತಾ ಬೀದಿಯ ಬಾಗಿಲಿಗೆ ಹೋದರು ಸುಶೀಲಮ್ಮ. ಅಹಲ್ಯೆ ಥಟ್ಟನೆ ಏನನ್ನೋ ಜ್ಞಾಪಿಸಿಕೊಂಡು "ನಾಳೆ ಮಧ್ಯಾಹ್ನ ಹೇಗಿದ್ದರೂ ರಜ. ನಮ್ಮನೇಗೇ ಬಂದುಬಿಡೇ ಕಮಲೂ, ನನ್ನ ಕ್ಲಾಸ್‌ಮೇಟ್ ನಾಗರತ್ನಾ ಬರ್ತಾಳಂತೆ. ಅವಳಿಗೆ ಯಾವುದೋ ಡೈಮಂಡ್ ಪ್ಯಾಟರ್ನ್ ಸ್ವೆಟರ್ ಹಾಕೋದು ಹೇಳಿಕೊಡಬೇಕಂತೆ. ನನಗೆ ಸರಿಯಾಗಿ ಬರೋಲ್ಲ. ಹೇಳಿಕೊಡೇಂತ ಒಂದೇ ಸಮನಾಗಿ ಪೀಡಿಸ್ತಿದ್ದಾಳೆ ನನ್ನ. ನೀನು ನಾಳೆ ಬಂದು ಅವಳಿಗೆ ಹೇಳಿಕೊಡುವಿಯಂತೆ. ಹಾಗೇ ಮರೀದೇ ನಿನ್ನ ಹಾಡಿನ ಪುಸ್ತಕಾನೂ ತಗೊಂಡುಬಾ. ಹೊಸದಾಗಿ ಮೇಷ್ಟ್ರು ಹೇಳಿಕೊಟ್ಟಿರೋ ಕೀರ್ತನೇ ಬರಿದುಕೊಡ್ತೀನಿ" ಎಂದಳು. "ಆಗಲೀ ಕಣೇ, ಖಂಡಿತ ಬರ್ತೀನಿ. ನಾಳೇ ಮಧ್ಯಾಹ್ನತಾನೇ" ಎಂದಳು ಕಮಲೂ.

"ಹೌದು ಮಧ್ಯಾಹ್ನ ಮೂರಕ್ಕೆಲ್ಲಾ ಬಂದುಬಿಡು" ಎಂದಳು ಅಹಲ್ಯೆ. "ಬರ್ತೀವಿ ಭಾಗ್ಯಮ್ಮ" ಎನ್ನುತ್ತಾ ತಾಯಿಮಗಳಿಬ್ಬರೂ ಮನೆಯ ದಾರಿ ಹಿಡಿದರು.

ಆದೇ ತಾನೇ ರಾತ್ರಿಯೂಟವಾಗಿತ್ತು. ಸುಬ್ಬಣ್ಣ ಯಾವುದೋ ಪತ್ರಾವಲೋಕನದಲ್ಲಿ ತಲ್ಲೀನರಾಗಿ ಹೋಗಿದ್ದರು. ಮಕ್ಕಳು ಮಲಗಿ ಬಿಟ್ಟಿದ್ದರು. ಭಾಗ್ಯಮ್ಮ ಅಡಿಗೇ ಮನೆಯ ಕೆಲಸದಲ್ಲಿ ನಿರತರಾಗಿದ್ದರು. ಕಮಲೂ ಕೋಣೆಯಲ್ಲಿ ಸ್ವೆಟರ್ ಹೆಣೆಯುತ್ತಾ ಕೂತಿದ್ದಳು. ಸುಬ್ಬಣ್ಣ ಕಾಗದವನ್ನು ಆಮೂಲಾಗ್ರವಾಗಿ ಓದಿಕೊಂಡರು. ವಿಷಯಗಳೆಲ್ಲವೂ ಮನದಟ್ಟಾಯಿತು. ಯಾವುದೋ ನೆನಪೊಂದು ಕೆರಳಿ ಅವರ ಹೃದಯ ದಲ್ಲಿ ತಳಮಳವೆದ್ದಿತ್ತು. ದಾರುಣವಾದ ವ್ಯಥೆಯಿಂದ ಅವರ ಮುಖ ಬಾಡಿಹೋಗಿತ್ತು. ಸುಬ್ಬಣ್ಣ ಕಾಗದವನ್ನು ಪುನಃ ಓದಿಕೊಂಡರು. ತೃಪ್ತಿಯಾಗಲಿಲ್ಲ. ಮತ್ತೊಮ್ಮೆ ಓದಿಕೊಂಡರು. ಅದನ್ನೋದಿದಂತೆಲ್ಲಾ ಅವರ ಮುಖ ವಿವರ್ಣವಾಗತೊಡಗಿತು. ಆಳವಾದ ನಿಟ್ಟುಸಿರೊಂದು ಹೊರಹೊಮ್ಮಿತು.

ಸುಬ್ಬಣ್ಣ ಈಡಾಗಿದ್ದ ಮಾನಸಿಕ ವೇದನೆ ಅವರನ್ನು ಒಂದೆಡೆಯಲ್ಲಿ ಸ್ವಸ್ಥವಾಗಿ ಕೂಡಿಸುವಂಥದಲ್ಲ. ಅವರೆದ್ದು ಹಾಲಿನಲ್ಲಿ ಶತಪಥ ತಿರುಗಾಡ ತೊಡಗಿದರು. ಮನೆಯಾಕೆ ಕೆಲಸ ಮುಗಿಸಿಕೊಂಡು ಬಾರದಿರುವುದನ್ನು ಕಂಡು "ಇನ್ನೂ ನಿನ್ನ ಕೆಲಸಾ ಮುಗೀಲಿಲ್ಲವೇನೇ" ಎಂದು ಕೂಗಿದರು ಸುಬ್ಬಣ್ಣ. "ಎಲ್ಲಾ ಮುಗೀತೂಂದ್ರೆ. ಹಾಲುಕ್ಕುತ್ತಿದೆ, ಹಾಲಿಳಿಸಿಬಿಟ್ಟು ಬರ್ತೀನಿ." ಭಾಗ್ಯಮ್ಮ ಅಡಿಗೆಯ ಮನೆಯಿಂದಲೇ ಉತ್ತರಿಸಿದರು. ಸ್ವಲ್ಪ ಹೊತ್ತಿನಂತರ ಹಾಲಿಗೆ ಬಂದು ಕೂತರು. ತಮ್ಮ ಹೆಂಡತಿ ಬರುವುದನ್ನೇ ನಿರೀಕ್ಷಿಸುತ್ತಿದ್ದ ಸುಬ್ಬಣ್ಣ "ನೋಡಿದಿಯೇನೇ ಶಾರದೆಯ ಕಾಗದಾನ." ಏನು ಯೋಚನೆ ಮಾಡಿದ್ದೀಯ ಎಂದು ಕೇಳಿದರು.

"ನೋಡಿದೇಂದ್ರೆ. ಇದೊಳ್ಳೇ ಚೆನ್ನಾಗಿ ಕೇಳ್ತೀರಿ ನನ್ನನ್ನೇ. ನಾನ್ಯೇನು ಮಾಡೋಹಾಗಿದ್ದೇನೆ ಹೆಣ್ಣು ಹೆಂಗಸು.

"ಹಾಗಲ್ಲಾ ಕಣೇ ನನ್ನ ಅಭಿಪ್ರಾಯ ನನ್ನ ಬುದ್ಧಿಗೇನೂ ಹೊಳೀದೇಹೋದ್ರಿಂದಲೇ ನಿನ್ನನ್ನ ಕೇಳಿದ್ದು ನಾನು. ಶಾರದೆಯ ಕಾಗದ ನೋಡಿದರೆ ನಾವಿನ್ನು ನಿಧಾನ ಮಾಡೋಹಾಗಿಲ್ಲ. ಅವಳಿಗಿದೇ ಜ್ಯೋಷ್ಟಲು ಪೆರಿಗೆ. ಅದಕ್ಕಿಂತಲೂ ಹೆಚ್ಚಾಗಿ ಅವತ್ತೇ ಮನೆಯವರು ಅವಳನ್ನ ತೌರುಮನೆಗೆ ಕಳಿಸಿಕೊಡಲೊಪ್ಪಿರೋದೇ ಒಂದು ದೊಡ್ಡ ಪುಣ್ಯ."

"ಹೌದು ನೀವು ಹೇಳೋದೆಲ್ಲಾ ಸರಿಯೇ. ಇದರ ಮಧ್ಯೆ ನಿಮ್ಮ ವರ್ಗದ ಆರ್ಡರೊಂದು ಕಡೆ ದೊಡ್ಡ ಪೆಡಂಭೂತವಾಗಿ ಕೂತಿದೆ. ಇನ್ನು ಯಾವೂರಿಗೆ ವನವಾಸ ಹೋಗಬೇಕಾಗುತ್ತೋ ಏನೋ. ಶುದ್ಧ ಮಲೆ ನಾಡು ಕೊಂಪೆಗೇನಾದರೂ ಹಾಕಿಬಿಟ್ಟರೆ ಚೊಚ್ಚಲು ಬಸಿರಿಯನ್ನ ಹೇಗೆ ತಾನೇ ಕರಕೊಂಡು ಹೋಗೋದು. ನನಗೊಂದೂ ತೋಚೋಲ್ಲ".

"ಇನ್ನು ವರ್ಗದ ಯೋಚನೇ ಬಿಟ್ಟುಬಿಡೇ. ನನ್ನ ಟ್ರಾನ್ಸ್‌ಫರ್ ಆರ್ಡರ್ ಕ್ಯಾನ್ಸಲ್ ಮಾಡಬೇಕೆಂಬುದಾಗಿ ಸಾಹೇಬರಿಂದ ಶಿಫಾರಸು ಕಾಗದ ಮೇಲಿನಾಫೀಸಿಗೆ ಹೋಗಿದೆ. ಟ್ರಾನ್ಸ್‌ಫರ್ ಆರ್ಡರ್ ಕ್ಯಾನ್ಸ ಲಾಗುವುದೆಂದು ಸಾಹೇಬರೇ ಭರವಸೆ ಕೊಡುತ್ತಿದ್ದಾರೆ."

"ಅದೇನೋ ಒಂದ್ವಿಷಯಕ್ಕೆ ಸರಿಹೋಯಿತೆನ್ನಿ. ನಾವೀಗಿರೋ ಸ್ಥಿತೀಲಿ ಶಾರದೇನ ಬಾಣಂತನಕ್ಕೆ ಕರಕೊಂಡು ಬರೋದು ಸಾಧ್ಯವೇ ಹೇಳಿ. ಪಾಪ ಅವಳಿಗಿದೇ ಚೊಚ್ಚಲು ಹೆರಿಗೆ. ಲೋಕಾರೂಢಿಯಾಗಿ ತೌರು ಮನೇಲಿ ನಡೀಬೇಕಾದ್ದು. ನಾವೋ ಕೈಯಲ್ಲಿ ಮೂರು ಕಾಸಿಲ್ಲದೆ ಕೂತಿದ್ದೇವೆ. ನಿಮಗೆ ಬರೋ ಅರವತ್ತು ರೂಪಾಯಿ ಯಾವ ಮೂಲೆಗೆ ಸಾಕು. ನಮ್ಮದು ನೂರು ಕಷ್ಟವಿರಲಿ, ಶಾರದೇನ ಬಾಣಂತನಕ್ಕೆ ಕರಕೊಂಡು ಬರಲೇಬೇಕು. ಇಲ್ಲದಿದ್ದರೆ ಜನ ಏನಂದುಕೊಂಡಾರು. ಮಧ್ಯಾಹ್ನ ಅವಳ ಕಾಗದಾ ನೋಡಿದಾಗಿನಿಂದ ನನಗೇಕೋ ಹೊಟ್ಟೇಲಿ ಸಂಕಟವಾಗ್ತಿದೆ. ಅವಳಿಗೆ ದೇವರು ಈ ಕಷ್ಟಕೊಡಬಾರದಾಗಿತ್ತು."

ಭಾಗ್ಯಮ್ಮನವರಿಗೆ ಪುನಃ ತಮ್ಮ ಮಗಳ ಕಾಗದವನ್ನೊಮ್ಮೆ ಓದ ಬೇಕೆಂದೆನಿಸಿತು. ತಮ್ಮ ಯಜಮಾನರ ಮುಂದಿದ್ದ ಕಾಗದವನ್ನು ಕೈಗೆ ತೆಗೆದುಕೊಂಡು ಓದ ತೊಡಗಿದರು. ಶಾರದೆಯ ಪತ್ರದ ಒಕ್ಕಣೆ ಹೀಗಿತ್ತು.

ಕ್ಷೇಮ ಶ್ರೀ ಬೆಂಗಳೂರು.

೧೫-೬-೧೯೪೨

ಮಾತೃಶ್ರೀಯವರ ಚರಣಾರವಿಂದಗಳಿಗೆ ಚಿ|| ಸೌ|| ಶಾರದೆ ಮಾಡುವ ಅನೇಕ ಸಾಷ್ಟಾಂಗ ನಮಸ್ಕಾರಗಳು. ಉ| ಕು| ಸಾಂ. ಈಚೆಗೆ ನಿಮ್ಮಗಳ ಕ್ಷೇಮ ಸಮಾಚಾರವೇ ತಿಳಿಯಲಿಲ್ಲ. ನೀವೂ ಕಾಗದಾ ಬರೆದಿಲ್ಲ. ಅಣ್ಣನಿಂದಲೂ ಕಾಗದವಿಲ್ಲ. ನನಗೆ ನಿಮ್ಮದೇ ಯೋಚನೆಯಾಗಿದೆ.

ಈಗ ನಿಮ್ಮ ದೇಹಸ್ಥಿತಿ ಹೇಗಿದೆ. ನೀವು ಹೆಚ್ಚು ಕಷ್ಟಪಡಲಾರಿರಿ. ಎಲ್ಲ ಕೆಲಸವನ್ನೂ ನೀವೇ ಮಾಡಬೇಕೆಂದು ಕೈಲಾಗದಿದ್ದರೂ ಎದ್ದು ಓಡಾಡಿ ಆಮೇಲೆ ಪಟ್ಟಾಗಿ ಹಾಸಿಗೆ ಹಿಡಿದು ಮಲಗಿಬಿಡುವುದು ನಿಮ್ಮ ಸ್ವಭಾವ. ನಾನು ನಿಮ್ಮನ್ನು ಕೇಳಿಕೊಳ್ಳುವುದಾದರೂ ಇಷ್ಟೆ. ಅಡಿಗೇ ಕೆಲಸ ಮಾತ್ರ ನೀವು ಮಾಡಿ. ಮಿಕ್ಕ ಕೆಲಸಗಳನ್ನೆಲ್ಲಾ ಕಮಲೂ ನಿರ್ವಹಿಸುತ್ತಾಳೆ. ಅವಳು ಜಾಣೆ. ಮುಂದೆ ಮದುವೆಯಾಗಿ ಗಂಡನ ಮನೆಯಲ್ಲಿ ಸಂಸಾರ ಮಾಡತಕ್ಕವಳು. ಅವಳಿನ್ನೂ ಗೃಹಕೃತ್ಯದಲ್ಲಿ ಸಾಕಷ್ಟು ತರಪೇತು ಪಡೆಯಬೇಕಾಗಿದೆ. ಅಂದಹಾಗೆ ಅವಳಿಗೆ ಈ ವರ್ಷ ಹೈಸ್ಕೂಲಿನ ಎರಡನೇ ತರಗತಿಯಿಂದ ಮೂರನೆಯದಕ್ಕೆ ಪ್ಯಾಸಾಗಿರಬೇಕಲ್ಲವೆ? ಅವಳಿಗೂ ಈ ಬಡ ಅಕ್ಕನ ಮೇಲೆ ತಿರಸ್ಕಾರವೆ? ಅವಳಾದರೂ ಕಡೆಯ ಪಕ್ಷ ತಿಂಗಳಿಗೊಂದು ಕಾಗದಾ ಬರೆಯುತ್ತಿರಬಾರದೇ.

ಚಿ|| ಶ್ರೀಧರನಿಗಿನ್ನೂ ಕಾಲೇಜು ಬಾಗಿಲು ತೆಗೆದಿಲ್ಲವೆಂದು ಕಾಣುತ್ತೆ. ಅವನಿನ್ನೂ ಊರಲ್ಲೇ ಇರಬಹುದು. ಅವನ ಮದುವೇ ಪ್ರಸ್ತಾಪ ನಡೆಯುತ್ತಿದೆಯೆಂದು ನನಗೆ ಗಾಳೀವರ್ತಮಾನ ತಿಳಿದು ಬಂತು. ಬಹಳ ಸಂತೋಷ. ಹುಡುಗಿ ಎಲ್ಲಿಯದು? ಹೇಗಿದ್ದಾಳೆ? ಏನು ಓದಿದ್ದಾಳೆ? ಎಲ್ಲಕ್ಕಿಂತ ಹೆಚ್ಚಾಗಿ ಸಂಗೀತ ಬರುತ್ತೆಯೇ? ಶ್ರೀಧರನಿಗೆ ಹೆಂಡತಿಯಾಗಿ ಬರತಕ್ಕವಳು ಒಳ್ಳೇ ಸಂಗೀತಗಾರಳಾಗಿರಬೇಕಲ್ಲವೆ? ಈ ವಿವರಗಳೆಲ್ಲಾ ತಿಳೀದೇ ಬಹಳ ಒದ್ದಾಡುತ್ತಿದ್ದೇನೆ. ನಿಮ್ಮ ಮುಂದಿನ ಕಾಗದದಲ್ಲಿ ಎಲ್ಲ ವಿವರಗಳನ್ನೂ ಮರೆಯದೆ ತಿಳಿಸುವುದು. ಚಿ|| ಗಳಾದ ರಾಘಣ್ಣ, ಕೂಸಣ್ಣ, ಸರಸೂ ಆರೋಗ್ಯವೆಂದು ತಿಳಿಯುತ್ತೇನೆ. ನನ್ನ ಪುಟ್ಟ ತಮ್ಮ ಆ ಪೋಕರೀ ರಾಧಾಕೃಷ್ಣ ಈಗ ಹೇಗಿದ್ದಾನೆ? ಆ ತುಂಟ ನನ್ನ ಕಣ್ಣಿಗೇ ಕಟ್ಟಿದ್ದಾನೆ. ನಿಮ್ಮನ್ನೆಲ್ಲಾ ಒಮ್ಮೆಯಾದರೂ ಕಣ್ಣು ತುಂಬಾ ನೋಡಬೇಕೆಂದು ಆಶೆ ಬಾಧಿಸುತ್ತಿದೆ.

ಮುಖ್ಯ ಈಗ ನಾನು ನಿಮಗೆ ಕಾಗದಾ ಬರೆಯಲು ಕೂತಿರುವ ಉದ್ದೇಶ ಇಷ್ಟೆ. ನಾನು ಪ್ರಸ್ಥವಾಗಿ ಒಂದು ಎರಡು ವರ್ಷಗಳೇನೋ ಆಯಿತು. ಲೋಕಾರೂಢಿಯಂತೆ ಗಂಡನ ಮನೆಗೆ ಬಂದಮೇಲೆ ಮೊದಲನೈ

ಸಲ ತೌರುಮನೆಗೆ ಹೋಗಿ ಬರುವ ಪುಣ್ಯವನ್ನ ಈ ಹತಭಾಗ್ಯಳು ಕೇಳಿಕೊಂಡು ಬರಲಿಲ್ಲ. ಅದು ಹಾಗಿರಲಿ. ಹುಣ್ಣಿನ ಮೇಲೆ ಬೊಕ್ಕೆ ಯೆದ್ದಂತೆ ನನಗೇಕೆ ದೇವರು ಇಷ್ಟು ಬೇಗ ಈ ಅವಸ್ಥೆಯನ್ನ ತಂದಿಟ್ಟನೋ ಹೇಳಲಾರೆ. ನನಗೀಗಾಗಲೇ ಆರು ತಿಂಗಳು ತುಂಬಿತು. ಈ ಸಂದರ್ಭ ದಲ್ಲಿ ಪ್ರಪಂಚದಲ್ಲಿ ಎಲ್ಲ ಹೆಣ್ಣು ಮಕ್ಕಳಿಗೂ ಇರಬಹುದಾದ ಸಂತೋಷ ನನ್ನ ಪಾಲಿಗಿಲ್ಲವಾಗಿದೆ. ಇದಕ್ಕೆ ಕಾರಣ ನಿಮಗೆ ನಾನೇನೂ ಬಿಡಿಸಿ ಹೇಳ ಬೇಕಾಗಿಲ್ಲ. ಇಲ್ಲಿ ದಿನ ಕಳೆಯುವುದು ಒಂದು ಯುಗವಾಗಿದೆ. ಇಲ್ಲಿ ಮನೆಯವರಾಡುವ ಚುಚ್ಚು ಮಾತುಗಳನ್ನ ಕೇಳಲಾರೆ. ಒಂದಲ್ಲ ಒಂದು ನೆಪದಲ್ಲಿ ನನ್ನ ತೌರುಮನೆಯವರನ್ನ ಶಪಿಸದಿರುವ ದಿನವೇ ಇಲ್ಲ. ಹೀಗಾ ದುದಕ್ಕೇ ನಾನು ವ್ಯಥೆಪಡಲೇ; ಮನೆಯವರಾಡುವ ವಾಗ್ಬಾಣಗಳನ್ನೇ ಸಹಿಸಲೇ ನನಗೊಂದೂ ತೋಚದಾಗಿದೆ.

'ನಿನ್ನ ತೌರುಮನೇ ಬೊಗಸೆಯನ್ನ ಏನು ಹೇಳಬೇಕೋ. ಲಕ್ಷಣ ವಾಗಿ ಚೊಚ್ಚಲು ಬಸಿರಿಯನ್ನು ಕರಕೊಂಡು ಹೋಗಿ ಒಂದು ಸೀಮಂತ ವಾಗಲಿ ಒಂದು ಆರತಕ್ಷತೆಯಾಗಲೀ ಮಾಡೋಕ್ಕಾದರೂ ನಿನ್ನ ತಂದೆಗೆ ಗತಿ ಆರಿಹೋಗಿದೆಯಲ್ಲವೇ. ಹಡೆದ ತಂದೇತಾಯಿಗಳೆನ್ನಿಸಿಕೊಂಡಿರೋರು ಇಷ್ಟು ನಿಸ್ಸೂರರಾಗಿರೋದನ್ನ ನಾವು ನೋಡೇ ಇಲ್ಲ ಈ ಜಗತ್ತಿನಲ್ಲಿ. ಕಡೆಗೆ ಮನೆಯಿಂದ ಮನೆಗೆ ತಿರುಗಿ ಯಾಚಕಾಮಾಡುವ ಬ್ರಾಹ್ಮಣನೇ ನಿಮ್ಮಪ್ಪನಿಗಿಂತ ಸಾವಿರಪಾಲು ಮೇಲು. ಅವನಿಗಾದರೂ ಅಲ್ಪ ಸ್ವಲ್ಪ ಸ್ವಾಭಿಮಾನವೆನ್ನೋದಿರುತ್ತೆ. ಹೆತ್ತ ಮಗಳಮೇಲೆ ಮಮತೆಯಿರುತ್ತೆ. ಹೇಗೋ ಸಾಲವೋ ಸೋಲವೋ ಮಾಡಿ ಮಗಳ ಚೊಚ್ಚಲು ಬಾಣಂತ ನಾನ ನಿಭಾಯಿಸಿ ಜಯಭೇರಿ ಹಾಕ್ತಾನೆ. ಅಂತಹ ಯಾಚಕದ ಬ್ರಾಹ್ಮಣ ನಿಗಿಂತಲೂ ಕಡೆಯಾದನೇ ನಿಮ್ಮಪ್ಪ ! ಏನು ಹೇಳಿಕೊಳ್ಳೋದು ನೋಡಿ ದರೆ ನಿರ್ವಾಹಕವಿಲ್ಲ. ಸರ್ಕಾರಿ ಕೆಲಸ. ತಿಂಗಳಿಗೆಂಭತ್ತು ರೂಪಾಯಿಗಳ ಸಂಬಳಾಂತ. ಇಷ್ಟಿದ್ದರೂ ಈ ಬಂಡಾಟವೇಕೆ ನಿಮ್ಮಪ್ಪನಿಗೇಂತ' ದಿನ ಬೆಳಗಾದರೆ ನಮ್ಮತ್ತೆ ನನ್ನ ಮುಂದೆ ನೂರು ಸಲ ಪಾರಾಯಣ ಮಾಡ್ತಿ ರ್ತಾರೆ. ಅವರು ಹೀಗೆ ಇಪ್ಪತ್ತುನಾಲ್ಕು ಗಂಟೆಯೂ ನನ್ನನ್ನು ಮುಖಾ ತಿವಿದೂ ತಿವಿದೂ ಹಂಗಿಸುತ್ತಿದ್ದರೆ ಅದು ಹೇಗೆತಾನೇ ಸಹಿಸಿಕೊಂಡಿರಲಿ

ನೀವೇ ಹೇಳಿ. ನನ್ನ ದೆಸೆಯಿಂದ ನನ್ನ ತೌರುಮನೆಗುಂಟಾಗುತ್ತಿರುವ ಅಪಮಾನವನ್ನ ನಾನು ಸಹಿಸಿಕೊಂಡಿರಲಾರೆ.

ಅದೆಷ್ಟೋ ಸಲ ನಾನಿನ್ನು ಈ ಭೂಮಿಯ ಮೇಲೆ ಬದುಕಿದ್ದು ಮಾಡಬೇಕಾದ ಪುರುಷಾರ್ಥವೇನೆಂದು ಯೋಚಿಸತೊಡಗುತ್ತೇನೆ. ನನ್ನ ಬಾಳನ್ನು ಕೊನೆಗಾಣಿಸಬೇಕೆಂದು ತೀರ್ಮಾನಿಸಿಕೊಳ್ಳುತ್ತೇನೆ. ಆದರೆ ಅದೇಕೋ ನನ್ನ ಮನಸ್ಸು ಒಮ್ಮೊಮ್ಮೆ ತಲ್ಲಣಿಸುತ್ತದೆ. ಹಾಗೆಂದ ಮಾತ್ರಕ್ಕೆ ನಾನು ಸಾಯಲು ಹೆದರುತ್ತೇನೆಂದು ತಿಳಿಯಬೇಡಿ. ನನ್ನಂತಹ ನಿರ್ಭಾಗ್ಯಳಿಗೆ ಈ ರೀತಿ ಪ್ರತ್ಯಕ್ಷ ನರಕಯಾತನೆಯನ್ನನುಭವಿಸಿಕೊಂಡಿರುವುದಕ್ಕಿಂತಲೂ ಸಾವೇ ಸರ್ವೋತ್ಕೃಷ್ಟವಾದ ಪರಿಹಾರಮಾರ್ಗವೆಂಬುದನ್ನ ಚೆನ್ನಾಗಿ ಮನಗಂಡಿದ್ದೇನೆ. ಆದರೆ ಒಂದು ಯೋಚನೆ ತಲೆಯಲ್ಲಿ ಸುಳಿಯುತ್ತೆ. ನನ್ನ ಬಾಳಿಗೆ—ನನ್ನ ಪಾಪಿಜೀವಕ್ಕೆ ಬೆಲೆಯಿಲ್ಲದೇ ಹೋದರೂ ನನ್ನ ಹೊಟ್ಟೆಯಲ್ಲಿರುವ ಆ ಕಂದಮ್ಮ ಆ ಪುಟ್ಟ ಜೀವಕ್ಕಾದರೂ ಬೆಲೆಯಿಲ್ಲದೆ ಹೋಗುವುದೆ ! ನನ್ನ ಪೂರ್ವಾರ್ಜಿತ ಕರ್ಮವಿಶೇಷವನ್ನ ನಾನನುಭವಿಸಿಯೇ ತೀರಬೇಕು. ವಿಧಿಯಿಲ್ಲ. ಆದರೆ ಅ ಹಸುಗೂಸು ಏನು ತಪ್ಪುಮಾಡಿದೆ ಈ ಘೋರ ಶಿಕ್ಷೆಯನ್ನನುಭವಿಸುವುದಕ್ಕೆ! ತಾಯ ತಪ್ಪಿಗಾಗಿ ಮಗುವಿಗೆ ಶಿಕ್ಷೆಯೇ ! ಮುಂದೆ ಅದರ ಭವಿಷ್ಯ ಹೇಗಿದೆಯೋ ಏನೋ ಯಾರು ಬಲ್ಲರು ! ಅಷ್ಟಕ್ಕೂ ಅದರ ಜೀವತೆಗೆಯಲು ನನಗಿರುವ ಅಧಿಕಾರವಾದರೂ ಏನು ! ಆತ್ಮಹತ್ಯೆಯ ಪಾಪದ ಜತೆಗೆ ಶಿಶುಹತ್ಯೆಯ ಪಾಪವೂ ನನಗೆ ಸಂಘಟಿಸುತ್ತದೆಯೆಲ್ಲಾ ಎಂಬ ಪಾಪ ಭೀತಿಯೇ ಇಂದಿನವರೆಗೂ ನನ್ನನ್ನ ಈ ಭೂಮಿಯಮೇಲಿಟ್ಟಿದೆ. ಇದೊಂದು ಕಾಲ್ತೊಡಕು ನನಗಿಲ್ಲದೇ ಹೋಗಿದ್ದಿದ್ದರೆ ನಿಮ್ಮ ಮಗಳು ಈಗಾಗಲೇ ಹೇಳಹೆಸರಿಲ್ಲದೇ ಹೋಗಿಬಿಡುತ್ತಿದ್ದಳು. ಅವಳಪಾಲಿಗೆ ಪ್ರತ್ಯಕ್ಷ ನರಕವಾಗಿರುವ ಈ ಹೊಲಸು ಮನೆಯಿಂದ ಅದೆಂದೋ ಅವಳ ಪ್ರಾಣಪಕ್ಷಿ ಹಾರಿಹೋಗಿ ಬಿಡುತ್ತಿತ್ತು.

ಅಮ್ಮಾ, ನನ್ನ ಸಂಸಾರದ ಗೋಳಿನ ಕಥೆಯನ್ನ ಪದೇ ಪದೇ ನಿಮ್ಮ ಮುಂದೆ ತೋಡಿಕೊಂಡು, ಹೆತ್ತಕರುಳಿಗೆ ಕಿಚ್ಚು ಹೊತ್ತಿಸಬೇಕೆಂಬುದು ನನ್ನಿಷ್ಟವಲ್ಲ. 'ಶಾರದೆ'ಯೆಂಬ ಮಗಳಿದ್ದಾಳೆಂಬ ನೆನಪು ಮಾತ್ರ ನಿಮಗಿದ್ದರೆ ಸಾಕು. ಅದೇ ನನ್ನ ಪುಣ್ಯವೆಂದು ಭಾವಿಸಿದ್ದೇನೆ.

ಹಾಗಂತಲೇ ನಾನಿಷ್ಟು ದಿನಗಳವರೆಗೂ ನಿಮಗೆ ಕಾಗದಾ ಬರೆಯದಿದ್ದೆ. 'ಪಾಲಿಗೆ ಬಂದದ್ದು ಪಂಚಾಮೃತ' ಅಂತ ನೀವು ನನಗೆ ಮದುವೆಯಾಗುವ ಮುಂಚೆ ಅನೇಕ ಸಲ ಬೋಧಿಸಿದ್ದಿರಿ. ಅದು ನನ್ನ ನೆನಪಿನಲ್ಲಿ ಅಚ್ಚಳಿಯದೆ ನಿಂತಿದೆ. ಅದರಂತೆಯೇ ನನ್ನ ಕಷ್ಟ ಕಾರ್ಪಣ್ಯ ಗಳನ್ನ ಸಾವಿರವಿರಲೀ ಯಾರಿಗೂ ಉಸಿರಿಕೊಳ್ಳದೆ ಅನುಭವಿಸುತ್ತಿದ್ದೇನೆ. ದೇವರು ಈ ದೊಡ್ಡ ಪಿಡುಗನ್ನ ತಂದಿಡದಿದ್ದರೆ ಇದುವರೆಗಿದ್ದ ಹಾಗೆಯೇ ಕಾಲ ತಳ್ಳಿಬಿಡುತ್ತಿದ್ದೆ. ಆದರೆ ಮನುಷ್ಯನ ಆಶೆ ಆಕಾಂಕ್ಷೆಗಳೇ ಒಂದಾದರೆ ದೈವಚಿಂತನೆ ಅದಕ್ಕೆ ವಿರುದ್ಧ ತಾನೇ. ನಾನು ಮೊದಲೇ ಹೇಳಿದಂತೆ ನನಗಿಲ್ಲಿ ದಿನ ಕಳೆಯುವುದು ಒಂದು ಯುಗವಾಗಿ ಪರಿಣಮಿ ಸಿದೆ. ರೆಟ್ಟೆಯ ಸಂಕಟ ಹತ್ತು ಪಾಲಾದರೆ ಹೊಟ್ಟೆಯ ಸಂಕಟ ನೂರು ಪಾಲಾಗಿದೆ. ನಮ್ಮತ್ತೇ ಮನೆಯವರು ದಿನಂಪ್ರತಿ ಪ್ರಯೋಗಿಸುತ್ತಿರುವ ವಾಗ್ಬಾಣಗಳಿಂದ ನನ್ನ ಹೃದಯ ಛಿದ್ರಛಿದ್ರವಾಗಿ ಹೋಗಿದೆ.

ಈಗಿನ ಸಂದರ್ಭದಲ್ಲಿ ನಿಮಗೆ ತೊಂದರೆ ಕೊಡದಿದ್ದರೆ ವಿಧಿಯಿಲ್ಲ. ಈ ನರಕವಾಸದಿಂದ ಸ್ವಲ್ಪ ದಿನಗಳ ಮಟ್ಟಿಗಾದರೂ ಬಿಡುಗಡೆ ದೊರೆಯು ವಂತಾದರೆ ನನ್ನ ಪಾಲಿಗೆ ಅದೇ ಒಂದು ದೊಡ್ಡ ಭಾಗ್ಯ. ಈ ಮನೆಯವರ ಬಿರುನುಡಿಗಳು ತಪ್ಪಿದರೆ ಈ ಬಡ ಜೀವ ಬದುಕಿಕೊಳ್ಳುತ್ತದೆ. ನೀವಿಷ್ಟು ಮಾತ್ರ ಈ ನನ್ನ ಕೋರಿಕೆಯನ್ನು ನೆರವೇರಿಸಬೇಕೆಂದು ನಿಮ್ಮನ್ನ ದುಂಬಾಲುಬಿದ್ದು ಕೇಳಿಕೊಳ್ಳುತ್ತಿದ್ದೇನೆ. ಎಲ್ಲರೂ ಬರೆಯುವ ಹಾಗೆ ರಾಜಾರೋಷವಾಗಿ ಕಾಗದ ಬರೆದು ಅದಕ್ಕೆ ಮರು ಜವಾಬನ್ನು ತರಿಸಿ ಕೊಳ್ಳುವ ಧೈರ್ಯವಾಗಲೀ ಅವಕಾಶವಾಗಲೀ ನನಗಿಲ್ಲ. ಮೊದಲೇ ನನ್ನ ಮೇಲೆ ವಿಷಕಾರುತ್ತಿದ್ದಾರೆ ಇಲ್ಲಿಯ ಜನ. ಜತೆಗೆ ತೌರುಮನೆಯಿಂದ ಕಾಗದತರಿಸಿಕೊಂಡೆನೆಂದರೆ ಮುಗಿದೇಹೋಯಿತು. ಅಂದೇ ನನ್ನ ಶ್ಮಶಾನ ಯಾತ್ರೆ ಖಂಡಿತ. ಆದ್ದರಿಂದ ನೀವು ಖಂಡಿತವಾಗಿಯೂ ನನ್ನ ಕಾಗದಕ್ಕೆ ಜವಾಬು ಬರೆಯಬೇಡಿ. ಇಲ್ಲಿ ನಡೆಯುತ್ತಿರುವ ಸಕಲ ವಿದ್ಯಮಾನಗಳನ್ನೂ ತಿಳಿಸಿಬಿಟ್ಟಿದ್ದೇನೆ. ಇದರ ಮೇಲೆ ದೇವರು ನಿಮಗೆ ಬುದ್ಧಿ ಕೊಟ್ಟ ಹಾಗೆ ಮಾಡಿ. ನೀವು ಯಾರಾದರೂ ಬಂದು ನನ್ನನ್ನು ಕರಕೊಂಡು ಹೋದರೂ ಸರಿಯೆ. ಇಲ್ಲದಿದ್ದರೂ ಸರಿಯೇ ನನಗೆರಡೂ ಸಮ್ಮತವೆ. ನೀವು ಬಂದು

ಕರಕೊಂಡು ಹೋಗಲಿಲ್ಲವೆಂದು ನನಗೆ ನಿಮ್ಮ ಮೇಲೆ ಕೋಪವಾಗಲೀ ಅಸಮಾಧಾನವಾಗಲೀ ಕಿಂಚಿತ್ತಾದರೂ ಇಲ್ಲ. ಇನ್ನೊಂದು ಎಚ್ಚರಿಕೆಯ ಮಾತು. ಈ ಕಾಗದವನ್ನೋದಿಕೊಂಡ ತಕ್ಷಣವೇ ಚುಕ್ಕುಚೂರು ಮಾಡಿಬಿಡಿ, ಅಷ್ಟೇ ಅಲ್ಲ. ಕೂಡಲೇ ಅಗ್ನಿ ಸಂಸ್ಕಾರವನ್ನೂ ಮಾಡಿಬಿಡಿ. ಅಪ್ಪೀತಪ್ಪೀ ನೀವೇನಾದರೂ ನನ್ನ ಕಾಗದಕ್ಕೆ ಜೀವದಾನವನ್ನ ಮಾಡಿ ಬಿಟ್ಟರೆಂದರೆ ತೀರಿತು. ನನ್ನವಸ್ಥೆ ಮುಗಿದಂತೆಯೇ ಸರಿ.

ಈ ಕಾಗದವೀಗಾಗಲೇ ಬಹಳ ದೀರ್ಘವಾಗಿ ಬೆಳೆದಿದೆ. ನಾನು ಬರೆಯಲು ಕೂತುಕೊಂಡಾಗ ಇಷ್ಟೊಂದು ದೀರ್ಘ ಪತ್ರವನ್ನು ಬರೆಯು ತ್ತೇನೆಂದು ಎಣಿಸಿರಲಿಲ್ಲ. ಆದರೆ ಲೇಖನಿ ಹಿಡಿದ ಕೂಡಲೇ ನನ್ನ ಮೈಮೇಲಿನ ಎಚ್ಚರವೇ ತಪ್ಪಿಹೋಗಿದೆ. ಅದೇನೇನು ಬರೆಯುತ್ತಿದೇ ನೆಂಬುದೇ ನನಗರಿವಿಲ್ಲ. ಬೆಳಗಿನ ಹೊತ್ತು ಪುರಸತ್ತಾಗುವುದಿಲ್ಲವಾದ್ದ ರಿಂದ ರಾತ್ರಿ ಕೂತು ನಿಮಗೆ ಕಾಗದ ಬರೆಯುತ್ತಿದೇನೆ. ಇದರಲ್ಲಿ ತಪ್ಪುಗಳೇನಿದ್ದರೂ ದಯವಿಟ್ಟು ಕ್ಷಮಿಸುವುದು. ತೀರ್ಥರೂಪರವರಿಗೆ ನನ್ನ ಸಾಷ್ಟಾಂಗ ಪ್ರಣಾಮಗಳನ್ನು ತಿಳಿಸುವುದು. ಚಿರಂಜೀವಿಗಳೆಲ್ಲರಿಗೂ ನನ್ನ ಹೃತ್ಪೂರ್ವಕವಾದ ಆಶೀರ್ವಾದಗಳು. ಆದಷ್ಟು ಬೇಗ ನಿಮ್ಮನ್ನೆಲ್ಲಾ ನೋಡಬೇಕೆಂದು ತಹತಹಿಸುತ್ತಿರುವ,

ನಿಮ್ಮ ಮಗಳು,

'ನಿರ್ಭಾಗ್ಯ ಶಾರದೆ'.

ಭಾಗ್ಯಮ್ಮ ಕಾಗದವನ್ನು ಓದಿ ಮುಗಿಸಿದನಂತರ ಗೊಳೋ ಎಂದತ್ತುಬಿಟ್ಟರು. ಅವರ ಹೊಟ್ಟೆಯೊಳಗಿನ ಸಂಕಟವೆಲ್ಲಾ ಕಣ್ಣೀರಿನ ಕೋಡಿಯಾಗಿ ಹರಿದುಹೋಯಿತು. ಅಷ್ಟಾದ ಮೇಲೆ ಅವರ ಹೃದಯ ಹಗುರವೆನಿಸಿತು. 'ಅಯ್ಯೋ ನಮ್ಮಮ್ಮಾ ನಿನಗೆಂತಹ ಗತೀ ಬಂತೇ ತಾಯಿ' ಎಂದು ಒಂದೇ ಸಮನೆ ಒದ್ದಾಡಿಕೊಂಡರು. ಸುಬ್ಬಣ್ಣನವರಂತೂ ದಿಙ್ಮೂಢರಾಗಿ ಕೂತು ಬಿಟ್ಟಿದ್ದರು.

"ನನ್ನ ಕೂಸು ಅದೆಷ್ಟು ಕಿರುಕುಳ ಸಹಸಿಕೊಂಡಿದೆಯೋ ಆ ನರಕದಲ್ಲಿ ಸಿಕ್ಕಿಕೊಂಡು. ಅದರಲ್ಲೂ ಈಗ ತುಂಬಿದ ಬಸುರಿ. ಇನ್ನು ಸ್ವಲ್ಪವೂ ಸಾವಕಾಶ ಮಾಡಬೇಡೀಂಪ್ರೆ. ನಿಮ್ಮ ದಮ್ಮಯ್ಯ. ನಾಳೆ

ಬೆಳಿಗ್ಗೆಯೇ ಬೆಂಗಳೂರಿಗೆ ಹೊರಟು ಬಿಡಿ. ಆಫೀಸಿಗೆ ಒಂದೆರಡು ದಿನ ರಜಕ್ಕೆ ಬರೆದು ಹಾಕಿ" ಭಾಗ್ಯಮ್ಮ ನುಡಿದರು.

ಅದೆಲ್ಲಾ ಸರಿಯೇ ಕಣೆ. ನಾನೇನೋ ಹೊರಡಲು ಸಿದ್ಧ. ಈಗ ತಿಂಗಳು ಕೊನೆ. ಕೈಲಿ ತಾಮ್ರದ ಬಿಡಿಕಾಸಿಲ್ಲದೆ ಕೂತಿದ್ದೇನೆ. ಪ್ರಯಾಣದ ಖರ್ಚಿಗೇನು ಮಾಡಲೀ ಹೇಳು.

'ಹೀಗೆ ಹೇಳಿದರೆ ಹೇಗಾಗುತ್ತೆ. ಎಲ್ಲಾದರೂ ಒಂದಿಪ್ಪತ್ತು ರೂಪಾಯಿ ಸಾಲ ಹುಟ್ಟಲಾರದೇ ನಿಮಗೆ! ಸಂಬಳ ಬಂದಮೇಲೆ ತೀರಿಸಿದರಾಯಿತು. ನಾನಿದನ್ನೂ ಹೇಳಿಕೊಡಬೇಕೇ.'

'ಸಾಲಾ ತಂದವರ ಋಣಾ ತೀರಿಸಿದ್ರೆ ತಾನೇನೇ ಹೊಸ ಸಾಲಾ ತರೋ ಯೋಚ್ನೇ. ಇದುವರೆಗಾಗಿರೋ ಸಾಲ ಬೆಟ್ಟದಷ್ಟು ಬೆಳೆದು ಕೂತಿದೆ.'

'ಹಾಗಾದರೆ ನನ್ನನ್ನೇನು ಮಾಡೂಂತೀರಿ.'

'ಅದೇ ನನಗೂ ಬಗೆಹರಿಯದಾಗಿದೆ ಕಣೇ.'

'ಅಂದಹಾಗೆ ನಮ್ಮ ಶ್ರೀಧರ ಚಿಕ್ಕಂದಿನಲ್ಲಿ ಹಾಕಿಕೊಳ್ಳುತ್ತಿದ್ದ ಹತ್ತಕಡಕವಿದೇಂದ್ರೆ. ಅವನು ಹೈಸ್ಕೂಲಿಗೆ ಸೇರಿದ ಕೂಡಲೇ ನನಗದು ಬೇಡಾಂತ ತೆಗೆದಿಟ್ಟುಬಿಟ್ಟ. ಅದನ್ನ ಪೆಟ್ಟಿಗೇಲಿ ತೆಗೆದಿಟ್ಟದ್ದೇನೆ. ಅದನ್ನಿನ್ನು ಯಾರು ಹಾಕಿಕೊಳ್ಳಬೇಕು ಹೇಳಿ. ಸುಮ್ಮನೆ ನಿಷ್ಪ್ರಯೋಜಕವಾಗಿ ಪೆಟ್ಟಿಗೇಲಿ ಕೂತಿದೆ. ಅದನ್ನ ತೆಗೆದುಕೊಡುತ್ತೇನೆ. ತಗೊಂಡು ಹೋಗಿ ನಿಮ್ಮ ಅಂಗಡೀ ಶೆಟ್ಟೀಗೆ ಮಾರಿಬಿಡಿ. ಅದರಲ್ಲಿ ನಿಮ್ಮ ಪ್ರಯಾಣದ ಖರ್ಚಾದರೂ ಏಳೋಲ್ಲವೇ.'

'ಅಯ್ಯೋ ಹುಚ್ಚೀ! ಅದೇನು ಮಹಾ ದೊಡ್ಡ ಒಡವೇಂತ ಹೇಳ್ತೀಯೇ. ಈವತ್ತೆಲ್ಲಾ ಅದರಿಂದ ಏನುಬಂದೀತು. ಹ್ಞೂ. ಇರಲಿ ನೋಡೋಣ. ನಾಳೆ ಬೆಳಿಗ್ಗೆ ತೆಗೆದುಕೊಡು. ಅದನ್ನ ವಿಲೇವಾರಿ ಮಾಡಿಕೊಂಡು ಬರ್ತೀನಿ.'

'ಹಾಗಾದರೆ ಅದರಲ್ಲಿ ಒಂದಿಪ್ಪತ್ತು ರೂಪಾಯಾದರೂ ಬರೋದಿಲ್ಲಾ ಅಂತೀರಾ. ನೀವದನ್ನ ನೋಡಿಲ್ಲಾಂತ ಕಾಣುತ್ತೆ. ಕಲ್ಲು ಒಳ್ಳೇ ಪುಷ್ಯ ರಾಗ. ಹಳೇ ಕಟ್ಟಡ. ಏನಿಲ್ಲಾಂದ್ರೂ ಒಂದರ್ಧ ಸವರನ್ ಭಂಗಾರ

ವಾದ್ರೂ ಅದರಲ್ಲಿ ತೇಲುತ್ತೆ. ಹೋಗಲಿ. ಅದರಿಂದೇನೂ ಉಪಯೋಗ ವಾಗ್ದಿದ್ರೆ ನನ್ನ ಭಂಗಾರದ ಬಳೇನೇ ಕೊಡ್ತೇನೆ. ಈಗ ನನ್ನ ಕೈಗೆ ಬಹಳ ಚಿಕ್ಕದಾಗಿಹೋಗಿದೇಂತ ಪೆಟ್ಟಿಗೇಲಿ ತೆಗೆದಿಟ್ಟಿದ್ದೇನೆ. ಸಮಯ ಕ್ಕಿಲ್ಲದ ಒಡವೇವಸ್ತ್ರ ಕಟ್ಟಿಕೊಂಡೇನುಮಾಡಬೇಕು ಹೇಳಿ. ಬಳೇ ಹೋದರೆ ಹೋಗಲಿ ಅದೃಷ್ಟ ಹೋಗಲಿಲ್ಲ. ನಮ್ಮ ಶಾರದೇನ ಸದ್ಯ ಕಣ್ತುಂಬಾ ನೋಡಿಯೇನೇ ಅನ್ನಿಸಿಬಿಟ್ಟಿದೆ ನನಗೆ.'

'ಆಗಲೀಕಣೇ ಏನುಕೊಡ್ತೀಯೋ ಕೊಡು. ಬೆಳಿಗ್ಗೆ ಅಂಗಡೀಗೆ ತಗೊಂಡು ಹೋಗ್ತೇನೆ.'

ಅಷ್ಟುಹೊತ್ತಿಗೆ ಹತ್ತಿರದಲ್ಲಿದ್ದ ತಾಲ್ಲೂಕು ಕಚೇರಿಯಿಂದ ಗಂಟೆ ಬಾರಿಸಿದ ಶಬ್ದ ಕೇಳಿಸಿತು ಒಂದು ಎರಡು ಮೂರು ಎಂದು ಸುಬ್ಬಣ್ಣ ನಿಧಾನವಾಗಿ ಎಣಿಸತೊಡಗಿದರು. 'ಅಬ್ಬಾ ಆಗಲೇ ಹನ್ನೊಂದುಗಂಟೇ ಕಣೇ. ಹೊತ್ತೇ ತಿಳೀಲಿಲ್ಲ ಮಾತಿನಲ್ಲಿ. ಇನ್ನು ಹೋಗಿ ಮಲಗೋಣ' ಎನ್ನುತ್ತಾ ಗಡಿಬಿಡಿಯಿಂದೆದ್ದರು. ಭಾಗ್ಯಮ್ಮ ಪತಿಯನ್ನು ಹಿಂಬಾಲಿಸಿದರು.

## ೬

'ಏನು ಹಾಡಿದನಯ್ಯಾ ಪುಣ್ಯಾತ್ಮಾ ಒಂದೇ ಸಮನಾಗಿ ಐದು ಗಂಟೆಗಳ ಕಾಲ! ನನಗಂತೂ ಮೈಮೇಲೆ ಎಚ್ಚರವೇ ಇರಲಿಲ್ಲ. ಅದೇನು ಆಲಾಪಣಾ! ಅದೇನು ಖರಹರಪ್ರಿಯ!! ಆ ಖರಹರಪ್ರಿಯ ರಾಗಾಲಾಪನೆ ಅದೆಷ್ಟು ಸೊಗಸಾಗಿ ಬಂತು. ಅದೇನು ವೈಖರೀಂತೀಯ! ನಾನಿದು ವರೆಗೂ ಇಂಥಾ ಸಂಗೀತಾನ್ನೇ ಕೇಳಿಲ್ಲಯ್ಯ.'

'ನನಗೂ ಹಾಗೇ ಅನ್ನಿಸಿದೆ. ಭಾಗವತರು ಕಡೇಲಿ ಹಾಡಿದ ಆ ಸಾಮರಾಗ ನನಗೆ ಬಹಳ ಹಿಡಿಸಿತು. ಆ ರಾಗದ ಇಂಪು - ಅದರ ಮಾಧುರ್ಯ ನಿನ್ನ ಆ ಖರಹರಪ್ರಿಯಕ್ಕೆಲ್ಲಿ ಬಂತು. ಅದರ ರೀತಿ ಹೀಗೇಂತ ಹೇಳೋಕ್ಕೆ ಬರೋಲ್ಲ ನನಗೆ. ನಾನೂ ನಿನ್ನಹಾಗೇ ಕವಿಯಾಗಿದ್ದಿದ್ದರೆ ನನ್ನ ಮನಸ್ಸಿನ ಭಾವನೆಗಳನ್ನ ವರ್ಣಿಸಿ ಹೇಳಬಹುದಾಗಿತ್ತು.'

'ನಿನಗೆ ಹೇಳೋಕ್ಕೆ ಬರದಿದ್ರೆ ನಾನು ಹೇಳ್ತೀನಿ ಕೇಳಯ್ಯ. ನಿನ್ನ ಮನಸ್ಸಿನಲ್ಲಿರೋ ಭಾವನೆಗಳನ್ನ ಊಹಿಸಿಕೊಳ್ಳಬಲ್ಲೆ. ಶ್ರೀಮಾನ್ ವಿ. ಸೀ ಅವರ 'ವೀಣಾಗಾನ' ಎಂಬ ಕವಿತೆಯನ್ನು ನೀನು ಓದಿದ್ದೀಯೋ

ಇಲ್ಲವೋ ತಿಳೀದು. ಅದರ ತುಣುಕೊಂದು ನನಗೆ ಬರುತ್ತೆ. ಹೇಳ್ತೀನೆ ಕೇಳು. 'ಅಲರ ಪರಿಮಳವೆರೆಸಿದೆಳಗಾಳಿ ಸುಳಿವಂತೆ| ನಲವಿಂದ ಬಳಿ ಬರುವ ಇನಿಯಳಂತೆ| ಬಳಿಬಂದು ನಗುನಗುತೆ ಮೊಗದಿಮೊಗವಿರಸುತ್ತೆ ನಲಿಯುತುಲಿಯುತಲಿರುವ ಹಸುಳೆವೋಲು|| ಎಂದು ಕವಿ ವೀಣಾಗಾನದ ವೈಖರಿಯನ್ನ ವರ್ಣಿಸಿದ್ದಾನೆ. ಕವಿ ಹೇಳಿರೋ ಮಾತು ನಿನ್ನ ಸಾಮ ರಾಗಕ್ಕೆ ಬಹಳ ಚೆನ್ನಾಗಿ ಅನ್ವಯಿಸುತ್ತೆ.'

ಬಳ್ಳಿಯಂತೆ ಬಳುಕುತ್ತಾ, ಕುಲುಕುತ್ತಾ ಕಳ್ಳ ಹೆಜ್ಜೆ ಹಾಕಿಕೊಂಡು ಹಿಂದಿನಿಂದ ಬಂದು ತನ್ನ ನಲ್ಲನ ಕಣ್ಣು ಮುಚ್ಚಿ, ಅವನ ಬಾಯಿಂದ ತನ್ನ ಹೆಸರು ಹೇಳಿಸಿಕೊಂಡು ಹಿಗ್ಗುವ ಪ್ರೇಯಸಿಯಂತೆ ಕಣಯ್ಯ ಆ ರಾಗ! ಅದನ್ನ ಕೇಳುತ್ತಿದ್ದರೆ ನಿಜವಾಗಿಯೂ ಪ್ರೇಯಸಿಯ ಸಹವಾಸದಲ್ಲಿದ್ದಂತೆ ಭಾಸವಾಗುತ್ತೆ. ಹೌದೋ ಅಲ್ಲವೋ ಹೇಳು ಅನಂತರಾಮೈಯ್ಯ.'

'ಭೇಷ್, ಒಪ್ಪಿದೇಕಣಯ್ಯ. ಅದಕ್ಕೇ ನೋಡು ನಿನ್ನಂತಹ ರಸಿಕರಾದ ಗೆಳೆಯರಿರಬೇಕೂನ್ನೋದು. ನೀನು ಹೇಳಿದ್ದು ಅಕ್ಷರಶಃ ನಿಜ. ಸ್ವೇಚ್ಛೆಯಾಗಿ ಆಕಾಶದಲ್ಲಿ ಹಾರಾಡುತ್ತಿರುವ ಹಕ್ಕಿಯಂತೆ ನನ್ನ ಮನಸ್ಸು ಉಲ್ಲಾಸಗೊಂಡಿದೆ. ಹೃದಯ ಅದೆಷ್ಟೋ ಹಗುರಾಗಿದೆ. ಸದಾ ಸಂಗೀತ ಕೇಳುತ್ತಿರಬೇಕೆಂದನ್ನಿಸಿಬಿಟ್ಟಿದೇ ಶ್ರೀಧರಾ.'

'ಸಂಗೀತದ ಪ್ರಭಾವವೇ ಅಂಥಾದ್ದು ಕಣಯ್ಯ. ನಿಜವಾಗಿಯೂ ಅದರಲ್ಲಿ ಅಭಿರುಚಿಯಿರೋರಿಗೆ ಎಷ್ಟು ಕೇಳಿದರೂ ತೃಪ್ತಿಯುಂಟಾಗೋಲ್ಲ. ಕೇಳಿದಷ್ಟೂ ಇನ್ನೂ ಕೇಳಬೇಕು - ಮತ್ತೂ ಕೇಳಬೇಕು ಅನ್ನಿಸುತ್ತೆ.'

'ಅದೇನಾದರೂ ಆಗಲಿ. ಇದುವರೆಗೂ ನಾವು ಗಾಯನ ಸಮಾಜದ ಮೆಂಬರುಗಳಾಗಿಲ್ಲ. ಆಗಾಗ ದುಡ್ಡುಕೊಟ್ಟು ಹೋಗೋದು ಯಾಕೆ. ತಿಂಗಳಿಗೆರಡು ರೂಪಾಯಿ ಹೋದರೆ ಹೋಗಲಿ. [illegible] ಮೆಂಬರುಗಳಾಗಿ ಬಿಡೋಣ. ಪ್ರತಿ ಭಾನುವಾರವೂ ಸಂಗೀತ ಕೇಳುತ್ತಿರಬಹುದು. ಏನು ಹೇಳ್ತೀಯ.'

'ಅಷ್ಟು ಮಾತ್ರ ಮಾಡು ಮಹರಾಯಾ. ನಿನಗೆ ಪುಣ್ಯ ಬರುತ್ತೆ. ಹೂವಿನಿಂದ ನಾರು ಸ್ವರ್ಗಕ್ಕೆ ಹೋಯಿತಂತೆ. ಹಾಗೇ ನಾನೂ ನಿನ್ನ ಜತೇಲಿ ಒಂದಿಷ್ಟು ಸಂಗೀತ ಕೇಳಿಕೊಂಡು ಸುಖವಾಗಿರುತ್ತೀನೆ.'

ರಾತ್ರಿ ಹತ್ತುಗಂಟೆಯಾಗಿತ್ತು. ಗೆಳೆಯರಿಬ್ಬರೂ ಬಿಡಾರ ಕೃಷ್ಣಪ್ಪನವರ ರಾಮಮಂದಿರದಲ್ಲಿ ಗಾನಕಲಾಧರ ಮಧುರಾ ಮಣಿಐಯ್ಯರ್ ಅವರ ಸಂಗೀತ ಕೇಳಿಕೊಂಡು ಮನೆಗೆ ಹಿಂತಿರುಗುತ್ತಿದ್ದರು. ಅಂದು ಹುಣ್ಣಿಮೆ. ಬೆಳದಿಂಗಳು ಹಾಲು ಚೆಲ್ಲಿದಂತೆ ಹಬ್ಬಿತ್ತು. ನೀಲಾಕಾಶ ನಿರಭ್ರವಾಗಿತ್ತು. ಪೂರ್ಣಿಮಾ ಚಂದ್ರ ಬೆಣ್ಣೆಯ ಮುದ್ದೆಯಂತೆ ಆಕಾಶದಲ್ಲಿ ತೇಲಾಡುತ್ತಿದ್ದ. ಇದನ್ನು ನೋಡಿ ಶ್ರೀಧರನ ಹೃದಯ ಉಬ್ಬಿತು. ಅವನಂದ.

'ಅಲ್ಲಿನೋಡು ಅನಂತರಾಮಯ್ಯ. ಹುಣ್ಣಿಮೆಯಿರುಳು ಅದೆಷ್ಟು ಸೊಗಸಾಗಿದೆ. ಏನು ಬೆಳದಿಂಗಳಯ್ಯ ಈವತ್ತು. ಬೀದಿಗಳಲ್ಲಿ ಹಾಲಿನ ಹೊಳೆಯೇ ಹರಿದು ಬಿಟ್ಟಿದೆ. ಎಷ್ಟುಬೇಕಾದರೂ ಬಾಚಿ ಕುಡಿಯೋ ಹಾಗಿದೆ.'

"ಹೌದು ಬಹಳ ಚೆನ್ನಾಗಿದೆ. ಈವತ್ತು ಸಂಗೀತ ಕಚೇರಿ ಇಲ್ಲದಿದ್ರೆ ಹೊರಗೆ ಬಂದು ನಾವೀ ಬೆಳದಿಂಗಳನ್ನ ನೋಡಿ ಸಂತೋಷಪಡುತ್ತಿದ್ದೆವೋ ಇಲ್ಲವೋ ಹೇಳಲಾರೆ. ಇಷ್ಟು ಹೊತ್ತಿಗೆ ನೀನು ಪುಸ್ತಕಾ ಹಿಡಿದು ಕೂತು ಬಿಡುತ್ತಿದ್ದೆ. ನಾನು ಹಾಸಿಗೇಲಿ ಬಿದ್ದುಕೊಂಡು ಬಿಡುತ್ತಿದ್ದೆ. ಈವತ್ತು ಹೊರಗೆ ಬಂದದ್ದು ನಮ್ಮ ಪುಣ್ಯವೆಂತಲೇ ಹೇಳಬೇಕು." "ಹಾಗೇ ನೋಡು. ಅದೆಷ್ಟೋ ಹುಣ್ಣಿಮೆ ರಾತ್ರಿಗಳು ಬಂದು ಹೋಗಿವೆ. ನಮಗದರ ಮೇಲೆ ಗಮನವೇ ಇರೋಲ್ಲ. ಏನೋ ಹಾಳು ನೂರೆಂಟು ತಾಪತ್ರಯ, ತಂಟೆ ತಕರಾರುಗಳನ್ನು ತಲೆಗೆ ಹಚ್ಚಿಕೊಂಡು ಒದ್ದಾಡುತ್ತಿರ್ತೇವೆ. ಪ್ರತಿಯೊಂದು ಅಲ್ಪ ವಿಷಯಕ್ಕೂ ಅಗಾಧ ಚಿಂತೆ. 'ಅನುಗಾಲವೂ ಚಿಂತೆ ಜೀವಕ್ಕೆ—ಈ ಜೀವ ಒಂದು ಪರಿಯಾಗೋತನಕ' ಅಂತ ಪುರಂದರದಾಸರು ಹಾಡಿದ್ದಾರೆ. ದೇವರು ಕೊಟ್ಟಿರೋ ಸುಖಸಂತೋಷಗಳನ್ನನುಭವಿಸೋದಕ್ಕೂ ನಮಗೆ ಲಭ್ಯವಿಲ್ಲ. ಅಥವಾ ಅವೆಲ್ಲಾ ನಮಗೆ ಬೇಡ. ಯಾವಳೋ ಒಬ್ಬ ಸಿನಿಮಾತಾರೆ—ಮೈಕುಲುಕಿಸಿಕೊಂಡು ಅರಬೆತ್ತಲೆಯಾಗಿ ನಮ್ಮ ಮುಂದೆ ಕುಣಿದುಬಿಟ್ಟರೆ ನಮಗದೇ ಪರಮಾನಂದ! ಅದೇ ನಮಗೆ ಸ್ವರ್ಗ!! ಅಷ್ಟರಲ್ಲೇ ನಮ್ಮ ಸಂತೃಪ್ತಿ. ಮುಗೀತು. ಅಲ್ಲಿಂದ ಮುಂದಕ್ಕೆ ಹೋಗೋಲ್ಲ ನಮ್ಮ ಜನ. ಏನು ಜನವಯ್ಯ ನಮ್ಮವರು! ಎಷ್ಟು ಅಲ್ಪ ತೃಪ್ತಿ ನಮ್ಮದು!!"

"ದೊಡ್ಡ ವೇದಾಂತಿಯಂತೆ ಮಾತಾಡುತ್ತಿದ್ದೀಯಲ್ಲಯ್ಯಾ ಶ್ರೀಧರಾ! ಜನರ ಮೇಲೆ ನಿನಗೇಕಿಷ್ಟು ಅಸಮಾಧಾನಾಂತೀನಿ. 'ಲೋಕೊಭಿನ್ನ ರುಚೀರ್ಜನಸ್ಯ'. ಜನರ ರುಚಿ ನಾನಾ ವಿಧವಾಗಿರುತ್ತೆ. ಒಬ್ಬೊಬ್ಬರಿಗೊಂದೊಂದರಲ್ಲಿ ಆಸಕ್ತಿ. ಎಲ್ಲಾ ರೋಗಿಗಳಿಗೂ ಒಂದೇ ಪ್ರಿಸ್ಕ್ರಿಪ್ಷನ್ ಬರೆದು ಕೊಡ್ತಾರೇನಯ್ಯಾ ಡಾಕ್ಟ್ರು!"

"ನನ್ನ ಅಭಿಪ್ರಾಯ ಅದಲ್ಲಾ ಅನಂತರಾಮೈಯ್ಯ. ಜನರಿಗಿರುವ ಅಭಿರುಚಿಯ ವೈವಿಧ್ಯದ ಮಾತಲ್ಲ ನಾನು ಹೇಳುತ್ತಿರೋದು. ವಿವಿಧ ಅಭಿರುಚಿ ಆಕಾಂಕ್ಷೆಗಳಿರಬೇಕಾದ್ದೇ. ಹಾಗಿರಬೇಕಾದ್ದೂ ನ್ಯಾಯವೇ. ನಾನೂ ಒಪ್ತೀನಿ. ಆದರೆ ನಮ್ಮ ಜನದ ಅಭಿರುಚಿ ಇಷ್ಟು ಕೀಳುಮಟ್ಟಕ್ಕಿಳೀಬಾರದೂಂತ ನನ್ನ ಅಭಿಪ್ರಾಯ ಅಷ್ಟೆ. ನಾವೀಗ ನೋಡುತ್ತಿರೋದಕ್ಕಿಂತಲೂ ಉತ್ತಮವಾದದ್ದು ಬೇರೆ ಇದೆ. ಕೇವಲ ಕೀಳ್ತರಗತಿಯ ಮನರಂಜನೆಯಲ್ಲದೆ ಉತ್ತಮರೀತಿಯ ಮನರಂಜನೆಯೊದಗಿಸುವ ಹವ್ಯಾಸಗಳೂ ಜೀವನದಲ್ಲಿ ಬೇಕಾದಷ್ಟಿವೆ ಎಂಬ ತಿಳಿವಳಿಕೆ ನಮ್ಮ ಜನಕ್ಕಿಲ್ಲವಲ್ಲಾಂತ ನನ್ನ ಕೊರಗು ಅಷ್ಟೆ."

ಅಷ್ಟು ಹೊತ್ತಿಗೆ ಅವರಿದ್ದ ಕೊಠಡಿ ಸಿಕ್ಕಿತು. ಇಬ್ಬರೂ ಕೋಟು ಬಿಚ್ಚಿಟ್ಟು ಹೆಲ್ತ್ ಕಿಚನ್ನಿಗೆ ಹೋದರು. ಅಲ್ಲೇನಿದೆ! ಹೋಟಲಿನ ಅಯ್ಯರು ಲಕ್ಷಣವಾಗಿ ಅಡಿಗೇ ಮನೆಯನ್ನು ತೊಳೆಯುತ್ತಿದ್ದ.

"ಏನಯ್ಯರೇ, ನಮಗೆ ಊಟ ಇಟ್ಟಿಲ್ಲವೇ" ಎಂದು ಕೇಳಿದ ಅನಂತರಾಮೈಯ್ಯ.

"ಇಲ್ಲಾ ಸಾರ್. ನೀವು ರಾತ್ರಿ ಲೇಟಾಗಿ ಬರ್ತೀವೀಂತ ಹೇಳಿ ಹೋಗಲಿಲ್ಲವಲ್ಲಾ. ಈವತ್ತು ಯಾರೋ ವಿಸಿಟರ್ಸ್ ಬಂದುಬಿಟ್ಟಿದ್ದರು. ಅಡಿಗೆಯೆಲ್ಲಾ ಆಗ್ಹೋಯ್ತು" ಎಂದ ಐಯ್ಯರು.

"ಲಕ್ಷಣವಾಯ್ತು" ಎಂದು ನಿಟ್ಟುಸಿರಿಟ್ಟ ಅನಂತರಾಮೈಯ್ಯ.

"ಹಸಿವಾಗುತ್ತಿದೆಯಲ್ಲಯ್ಯಾ" ಎಂದ ಶ್ರೀಧರ.

ಇವರ ಪೇಚಾಟವನ್ನು ನೋಡಿ ಐಯ್ಯರಿಗೆ ನಗು ಬಂತು. "ಹೋಗಲಿ ಕುಳಿತುಕೊಳ್ಳೀ ಸಾರ್. ಇನ್ನೂ ನೀರೊಲೆ ಉರೀತಾನೇ ಇದೆ. ಬೇಗ ಒಂದಿಷ್ಟು ಚಪಾತಿ ಮಾಡ್ತೀನಿ. ರಾತ್ರಿ ಮಾಡಿದ ಪಲ್ಯ ಒಂದಿಷ್ಟು ಮಿಕ್ಕಿದೆ.

ಜತೆಗೆ ಬಾಳೇಹಣ್ಣಿನ ಸೀಕರ್ಣೇನೂ ಕೊಡ್ತೇನೆ. ತಿಂದುಬಿಟ್ಟು ಹೋಗು ನಿರಂತೆ."

"ಸದ್ಯ ಬದುಕಿದೆ ಐಯ್ಯರ್" ಎಂದ ಅನಂತರಾಮೈಯ್ಯ.

"ಅಷ್ಟಾದರೂ ಮಾಡಿಕೊಡೀ ಐಯ್ಯರ್. ಹೊಟ್ಟೇಲಿ ತಾಳಾ ಹಾಕ್ತಿದೆ. ಸಂಗೀತ ಕಚೇರಿಗೆ ಹೋಗಿದ್ವಿ. ಮಧ್ಯದಲ್ಲೆದ್ದು ಹೋಟಲಿಗೆ ಹೋಗಲಾಗಲಿಲ್ಲ. ಬಹಳ ಹಸಿವಾಗಿದೆ" ಎಂದ ಶ್ರೀಧರ.

ಐಯ್ಯರ್ ಚಪಾತಿ ಮಾಡಲು ಅಡಿಗೇಮನೆಗೆ ಹೋದ. ಗೆಳೆಯರಿಬ್ಬರೂ ಹೋಗಿ ಲೌಂಜಿನಲ್ಲಿ ಕೂತರು.

"ನಾಳೆ ಎಷ್ಟಯ್ಯಾ ತಾರೀಖು" ಏನನ್ನೋ ಯೋಚಿಸುತ್ತಾ ಕೇಳಿದ ಅನಂತರಾಮೈಯ್ಯ.

"ಇಪ್ಪತ್ತು".

"ಹಾಗಾದರೆ ನಾಳೆ ನೀನು ಫೀಸು ಕಟ್ಟಬೇಕು."

"ಹೌದು."

"ಏಕೋ ನನಗೂ ಅಣ್ಣನಿಂದ ಎಂ.ಓ. ಬರಲಿಲ್ಲ. ಪ್ರತಿ ತಿಂಗಳೂ ಹತ್ತನೇ ತಾರೀಖಿಗೇ ಕಳಿಸಿಬಿಡ್ತಿದ್ದ."

"ಪಾಪ ಅವರಿಗೇನು ತಾಪತ್ರಯವ್ರೋ ಏನೋ. ನಾಳೆ ಫೀಸು ಕೊಡದಿದ್ದರೆ ಅನ್ಯಾಯವಾಗಿ ಫೈನು ಕೊಡಬೇಕಾಗುತ್ತೆ."

"ಈಸಲ ಊರಿಗೆ ಹೋಗಿದ್ದೆಯಲ್ಲಾ. ನಿಮ್ಮ ತಂದೆಯವರು ಏನೂ ಕೊಡಲಿಲ್ಲವೇನಯ್ಯಾ ಶ್ರೀಧರಾ?"

"ಅಯ್ಯೋ ನಾನಷ್ಟು ಪುಣ್ಯ ಕೇಳಿಕೊಂಡು ಬರಲಿಲ್ಲ ಅನಂತರಾಮೈಯ್ಯ. ಅಣ್ಣ ಸದ್ಯ ನನಗೆ ದುಡ್ಡು ಕೊಡೋ ಸ್ಥಿತೀಲಿದ್ದಾನೆಯೇ! ಮೊದಲೇ ಸರಿ ಅಣ್ಣಾ ಕೊಡೋದು. ಈಗಂತೂ ಹೇಳಬೇಕಾದ್ದೇ ಇಲ್ಲ."

"ಅದೇಕಯ್ಯಾ ಹಾಗಂತೀ. ಮನೇಲೇನಾದರೂ ಜಗಳಾಕಾದು ಬಂದಿದ್ದೀಯೇನಯ್ಯಾ!"

"......................"

"ಏನೋ ಸಮಾಚಾರವಿದೆ. ಸಂಕೋಚಪಡಬೇಡ ಹೇಳಯ್ಯ. ನನ್ನ ಹತ್ತಿರ ನಿನಗೇನು ಮುಚ್ಚುಮರೆ."

" ಅದೆಲ್ಲಾ ಹೇಳಬೇಕಾದರೆ ದೊಡ್ಡ ರಾಮಾಯಣ ಆಗುತ್ತೆ ಅನಂತ ರಾಮೈಯ್ಯ. ನಮ್ಮ ಮನೆ ತಾಪತ್ರಯವನ್ನೆಲ್ಲಾ ಹೇಳಿಕೊಂಡು ಏನು ಪ್ರಯೋಜನವೂ ಇಲ್ಲ. ಈಗ ತಾನೇ ಸೊಗಸಾದ ಸಂಗೀತ ಕೇಳಿಕೊಂಡು ಬಂದಿದ್ದೇವೆ. ಎಲ್ಲಾ ತಾಪತ್ರಯಗಳನ್ನೂ ಮರೆತುಬಿಟ್ಟು ಮನಸ್ಸು ಪ್ರಸನ್ನವಾಗಿದೆ. ಹೀಗೆ ಮನಸ್ಸು ಉಲ್ಲಾಸವಾಗಿರೋದು ನನ್ನಂತಹ ನಿರ್ಭಾಗ್ಯನಿಗೆ ಬಹಳ ಅಪರೂಪ. ನಾನೀಗ ಆ ಹಳೇ ರಾಮಾಯಣವೆಲ್ಲಾ ಕೆದಕಿಕೊಂಡು ನನ್ನ ಮನಸ್ಸಿನ ಹರ್ಷವನ್ನು ಕೆಡಿಸಿಕೊಳ್ಳಲಾರೆ. ಐ ಡು ನಾಟ್ ವಾಂಟ್ ಟು ಸ್ಪಾಯಿಲ್ ಮೈ ಮೆಂಟಲ್ ಬ್ಲಿಸ್ !"

" ಹೋಗಲಿ ಬಿಡಯ್ಯ ನಿನಗಿಷ್ಟವಿಲ್ಲದಿದ್ರೆ. ನಾನು ಹೆಚ್ಚು ಬಲವಂತ ಮಾಡೊಲ್ಲ."

" ಚಪಾತಿ ಆಗಿದೆ ಬನ್ನೀ ಸಾರ್." ಐಯ್ಯರ್ ಕೂಗಿ ಹೇಳಿದ. ಕೂಡಲೇ ಇಬ್ಬರೂ ಹಸಿದ ಹುಲ್ಲಿಗಳಂತೆ ಛಂಗನೆ ಡೈನಿಂಗ್ ಹಾಲಿಗೆ ಓಡಿದರು. ಐಯ್ಯರ್ ಎರಡು ಮಣೆಗಳನ್ನು ಹಾಕಿ ಅದರ ಮುಂದೆ ಎರಡು ಬಾಳೇ ಎಲೆಗಳನ್ನೂ ಹಾಸಿದ್ದ. ಇಬ್ಬರೂ ಬಂದಮೇಲೆ ತಲಾ ಎರಡೆರಡು ಚಪಾತಿಗಳನ್ನು ಹಾಕಿದ. ಅದರ ಮೇಲೇ ಆಲೂಗಡ್ಡೆ ಪಲ್ಯ ಬಡಿಸಿದ. ಒಂದು ನಿಮಿಷದಲ್ಲಿ ಅದನ್ನು ತಿಂದು ಮುಗಿಸಿಬಿಟ್ಟರು.

" ಇನ್ನೂ ಚಪಾತಿ ಇದೇ ತಾನೇ ಐಯ್ಯರ್" ಶ್ರೀಧರ ಕೇಳಿದ.

" ಓಹೋ ಇದೇ ಸಾರ್. ಎಷ್ಟು ಬೇಕಾದರೂ ತಿನ್ನಿ ಹಾಕ್ತೇನೆ." ಐಯ್ಯರ್ ಮತ್ತೆ ಎರಡೆರಡು ಚಪಾತಿ ತಂದು ಹಾಕಿದ. ಗೆಳೆಯರಿಬ್ಬರೂ ತಿಂದು ತೇಗಿದರು. ಐಯ್ಯರ್ ತಂದುಕೊಟ್ಟ ರಸಾಯನವನ್ನೂ ತಿಂದರು.

" ನಿಮಗೆ ಬಹಳ ತೊಂದರೆಯಾಯ್ತು ಐಯ್ಯರ್" ಎಂದ ಅನಂತ ರಾಮೈಯ್ಯ."

" ತೊಂದರೆಯೇನುಬಂತು ಸಾರ್. ಅದು ನಮ್ಮ ಕಸುಬು ತಾನೇ" ಎನ್ನುತ್ತಾ ಐಯ್ಯರ್ ನಶ್ಯವೇರಿಸಿದ. ಗೆಳೆಯರಿಬ್ಬರೂ ಕೊಠಡಿಗೆ ತೆರಳಿದರು.

## ೭

"ಏಕ್ ಪರೋಟಾ........ಏಕ್ ಪರೋಟಾ" ಇಂದ್ರಭವನದ ಮಾಣಿ ಯೊಬ್ಬ ಗಟ್ಟಿಯಾಗಿ ಕಿರಿಚಿಕೊಂಡ. ಸಂಜೆಯ ಹೊತ್ತು ಶ್ರೀಧರ ಇಂದ್ರ ಭವನದ ಖಾಯಂ ಗಿರಾಕಿಯಾಗಿದ್ದ. ಅವನ ಮುಖ ನೋಡುತ್ತಿದ್ದ ಹಾಗೆಯೇ ಅವನಿಗೆ ತಿಂಡಿಯೊದಗಿಸುತ್ತಿದ್ದ ಮಾಣಿ, "ಏಕ್ ಪರೋಟಾ" ಎಂದು ಕೂಗುವುದು ವಾಡಿಕೆಯಾಗಿ ಹೋಗಿತ್ತು. ಸ್ವಲ್ಪ ಹೊತ್ತಿಗೆಲ್ಲಾ ಮಾಣಿ ಚಪಾತಿ ತಂದಿಟ್ಟ. ಶ್ರೀಧರ ಅದನ್ನು ತಿಂದು ಮುಗಿಸಿದ. "ಕೋಲ್ಡ್ ಬಾದಾಮಿ ಹಾಲು ಒಂದು ಕಪ್ ತಗೊಂಡುಬಾರಯ್ಯ" ಎಂದು ಮಾಣಿಗೆ ಹೇಳಿದ. ಬಾದಾಮಿಹಾಲು ಬಂತು. ಕ್ಷಣಾರ್ಧದಲ್ಲಿ ಅದನ್ನು ಬರಿದು ಮಾಡಿ ಎದ್ದ ಶ್ರೀಧರ. ಹೋಟಲಿನವನಿಗೆ ದುಡ್ಡು ಕೊಟ್ಟು ಟೌನ್ ಹಾಲಿನ ಕಡೆ ನಡೆದ. ಅಷ್ಟು ಹೊತ್ತಿಗಾಗಲೇ ವೆಂಕಟಸುಬ್ಬಯ್ಯನವರ ವ್ಯಾಯಾಮ ಶಾಲೆ ವಿದ್ಯಾರ್ಥಿಗಳಿಂದ ತುಂಬಿ ಹೋಗಿತ್ತು. ಎಲ್ಲ ಕನ್ನಡಿ ಗಳ ಮುಂದೆಯೂ ವ್ಯಾಯಾಮ ಪಟುಗಳು ನಿಂತು ಅಂಗಸಾಧನೆ ನಡೆಸು ತ್ತಿದ್ದರು. ಎಲ್ಲಿಯೂ ಸ್ಥಳ ಬಿಡುವಿರಲಿಲ್ಲ. ಶ್ರೀಧರನ ಪೇಚಾಟವನ್ನು ನೋಡಿ ಮೇಷ್ಟ್ರು ವೆಂಕಟಸುಬ್ಬಯ್ಯ, "ಸ್ವಲ್ಪ ಕೂತ್ಕೊಳ್ಳೀ ಮಿ|| ಶ್ರೀಧರ್. ಇನ್ನು ಸ್ವಲ್ಪ ಹೊತ್ತಿಗೆಲ್ಲಾ ನಿಮಗೆ ಜಾಗಸಿಗುತ್ತೆ" ಎಂದರು. ಶ್ರೀಧರ ತೆಪ್ಪಗೆ ಕೂತುಕೊಂಡ. ಪಕ್ಕದಲ್ಲಿದ್ದ ಹಿಂದೂ ಪತ್ರಿಕೆಯನ್ನು ಕೈಗೆ ತೆಗೆದುಕೊಂಡು ಓದ ತೊಡಗಿದ. ಮೇಷ್ಟ್ರು ಹೇಳಿದ ಹಾಗೆಯೇ ಒಬ್ಬ ವ್ಯಾಯಾಮ ಪಟು ತನ್ನ ಸಾಧನೆಯನ್ನು ಮುಗಿಸಿ ಶ್ರೀಧರನ ಪಕ್ಕದಲ್ಲಿ ಬಂದು ಕುಳಿತ. ಶ್ರೀಧರ ಕೂಡಲೇ ಎದ್ದು ಹೋಗಿ ಆತ ಬಿಟ್ಟು ಹೋಗಿದ್ದ ಸ್ಥಾನವನ್ನಾಕ್ರಮಿಸಿಕೊಂಡ. ಅಂದವನ ಮನಸ್ಸಿಗೇನೋ ಒಂದು ಬಗೆಯ ಉಲ್ಲಾಸವಿತ್ತು. ಅದರ ಕಾರಣ ಅವನಿಗೇ ತಿಳಿಯದು. ಜತೆಗೆ ಇಂದ್ರಭವನದಲ್ಲಿ ಸಾಕಷ್ಟು ತಿಂಡೀ ಹೊಡೆದು ಬಂದಿದ್ದ. ಅದನ್ನೆಲ್ಲಾ ಈಗ ಕರಗಿಸಿಬಿಡಬೇಕೆಂದು ತೀರ್ಮಾನಿಸಿಕೊಂಡು ತನ್ನ ಅಭ್ಯಾಸದಲ್ಲಿ ನಿರತನಾದ. ಮೊದಲು ಬಸ್ಕಿಗಳನ್ನು ಹಾಕುವುದು ಅವನ ಪದ್ಧತಿಯಾ ಗಿತ್ತು. ದಿನವೂ ಐವತ್ತು ದಂಡೆಗಳನ್ನು ಹಾಕುವ ಹೊತ್ತಿಗೆ ಅವನು ಸುಸ್ತಾಗಿ ಹೋಗುತ್ತಿದ್ದ. ಅಂಥವನು ಈವತ್ತು ನೂರು ದಂಡೆಗಳನ್ನು

ಹಾಕಿಬಿಟ್ಟ. ತನ್ನ ಶಕ್ತಿ ಸಾಮರ್ಥ್ಯಗಳನ್ನು ಕಂಡು ಅವನಿಗೇ ಆಶ್ಚರ್ಯ ವೆನಿಸಿತು. 'ಪರವಾಗಿಲ್ಲ. ನಾನು ಮನಸ್ಸು ಮಾಡಿದರೆ ಯಾವ ಕೆಲಸ ವನ್ನಾದರೂ ಸಾಧಿಸಬಲ್ಲೆ' ಎಂಬ ಆತ್ಮವಿಶ್ವಾಸ ಅವನೆದೆಯನ್ನು ಉಬ್ಬಿ ಸಿತು. ಒಂದು ಸಲ ಹಾಗೆಯೇ ನಿಲುಗನ್ನಡಿಯ ಮುಂದೆ ನಿಂತು ತನ್ನ ಪ್ರತಿಬಿಂಬವನ್ನು ನೋಡತೊಡಗಿದ. ಅವನು ವ್ಯಾಯಾಮ ಶಾಲೆಗೆ ಸೇರಿ ಒಂದು ವರ್ಷವಾಗಿತ್ತು. ಈ ಒಂದು ವರ್ಷದಲ್ಲಿ ಅವನಿಗೆ ತಕ್ಕ ಮಟ್ಟಿಗೆ ದೇಹಪುಷ್ಠಿ ಲಭಿಸಿತ್ತು. ವ್ಯಾಯಾಮ ಶಾಲೆಗೆ ಸೇರುವ ಮುಂಚೆ ಬಡಕಲು ಬಡಕಲಾಗಿದ್ದ ಅವನ ಶರೀರ ಈಗ ಮಾಂಸಖಂಡಗಳಿಂದ ಪರಿಪುಷ್ಠಿಗೊಂಡಿ ದ್ದವು. ಅಂಗಸಾಧನೆಯಿಂದ ಬಲಗೊಂಡಿದ್ದ ಮಾಟವಾದ ತನ್ನ ದುಂಡ ನೆಯ ತೋಳುಗಳನ್ನು ನೋಡಿಕೊಂಡು ಮನಸ್ಸಿನಲ್ಲೇ ಹಿಗ್ಗತೊಡಗಿದ. ಅವನ ಉಬ್ಬಿದ ವಿಶಾಲವಾದ ಎದೆ, "ಪ್ರಪಂಚದಲ್ಲಿ ನೀನು ಹೋರಾಡಿ ಗೆಲ್ಲಬಲ್ಲೆ. ನೀನೂ ಗಣ್ಯವ್ಯಕ್ತಿಯೆನಿಸಿಕೊಳ್ಳಬಲ್ಲೆ' ಎಂಬ ಆಶ್ವಾಸನೆ ಯನ್ನವನಿಗೆ ಕೊಂಡುವಂತಿತ್ತು. ತನ್ನ ರೂಪಾರಾಧನೆಯಲ್ಲಿ ಲೀನನಾಗಿ ಹೋಗಿದ್ದ ಶ್ರೀಧರ. ಅದೆಷ್ಟು ಹೊತ್ತಿನವರೆಗೂ ಹಾಗೆ ಮೈಮರೆತು ನಿಂತಿದ್ದನೋ ತಿಳೀದು. ಅಷ್ಟು ಹೊತ್ತಿಗೆ ವೆಂಕಸುಬ್ಬಯ್ಯ ಬಂದು "ಈವತ್ತು ಶನಿವಾರವಲ್ಲವೇ ಮಿ|| ಶ್ರೀಧರ್. ಡಂಬೆಲ್ಸ್ ಬೇಡ. ಮುಸಲ್ಸ್ ಕಂಟ್ರೋಲ್ ಮಾಡಿ ಈವತ್ತು" ಎಂದೆಚ್ಚರಿಸಿದರು. ಶ್ರೀಧರನಿ ಗಾಗ ತುಸು ನಾಚಿಕೆಯೆನಿಸಿತು. ಮೇಷ್ಟ್ರಿಗೆ ತನ್ನ ಗುಟ್ಟು ಗೊತ್ತಾಗಿ ಹೋಯಿತಲ್ಲಾ ಎಂದು ಪೇಚಾಡತೊಡಗಿದ. 'ಆಗಲೀ ಸಾರ್ ಅದನ್ನೇ ಮಾಡ್ತೇನೆ' ಎಂದು ಹೇಳಿ ಅವರನ್ನು ಕಳಿಸಿಕೊಟ್ಟ. ಅವನ ವ್ಯಾಯಾಮ ಮುಗಿಯುವ ಹೊತ್ತಿಗೆ ಟೌನ್ ಹಾಲಿನೆದುರಿಗಿದ್ದ ದೊಡ್ಡ ಗಡಿಯಾರದಲ್ಲಿ ಏಳು ಗಂಟೆ ಹೊಡೆಯಿತು. ಸುಮಾರು ಒಂದು ಗಂಟೆಯ ಹೊತ್ತು ವ್ಯಾಯಾಮ ಮಾಡಿದ್ದನಾದ್ದರಿಂದ ಅವನ ಮೈಯ್ಯಲ್ಲಿ ಬೆವರು ಸುರಿದುಹೋಗುತ್ತಿತ್ತು. ಪಕ್ಕದಲ್ಲಿದ್ದ ಮಣ್ಣಿನ ಕೂಜಾದಿಂದ ಗ್ಲಾಸಿನಲ್ಲಿ ನೀರು ಬಗ್ಗಿಸಿ, ಕಿಟಕಿಯಲ್ಲಿ ಚೆನ್ನಾಗಿ ಮುಖ ತೊಳೆದುಕೊಂಡ. ತೆಗೆದಿಟ್ಟಿದ್ದ ಬಟ್ಟೇಹಾಕಿಕೊಂಡು ಕನ್ನಡಿಯ ಮುಂದೆ ನಿಂತು ಲಕ್ಷಣವಾಗಿ ಕ್ರಾಪು ಬಾಚಿಕೊಂಡ. ಸ್ವಲ್ಪ ದಣಿವಾರಿಸಿಕೊಂಡು ಹೋಗೋಣವೆಂದು ಕೊಂಡು ಹಾಲಿನಲ್ಲಿ ಬಂದು ಕುಳಿತ.

"ಕಂಗ್ರಾಚ್ಯುಲೇಷನ್ಸ್ ಶ್ರೀಧರ್........!" ಈ ಕೂಗು ಕೇಳಿ ಶ್ರೀಧರ ಬೆಚ್ಚಿಬಿದ್ದ. ತಲೆಯೆತ್ತಿನೋಡಿದ. ಅವನ ಕ್ಲಾಸ್‌ಮೇಟ್ ವೆಂಕಟಾದ್ರಿ ಅವನ ಹತ್ತಿರ ಕೈನೀಡಿ ನಿಂತಿದ್ದ.

"ಏನೋ ಅದು ವೆಂಕಟಾದ್ರಿ. ನೀನು ಹೇಳೋದು ನನಗರ್ಥವಾಗೋಲ್ಲವಲ್ಲೋ" ಎಂದು ಇಷ್ಟಗಲ ಬಾಯಿಕಿಸಿದ ಶ್ರೀಧರ.

"ಇದೇನೋ ಬೆಪ್ಪೇ. ಹೀಗೆ ಕೇಳುತ್ತೀ. ನಿನಗೆ ಗೊತ್ತಿಲ್ಲವೇನೋ ಸಮಾಚಾರ"!

"ಅದೇಕಣೋ ನನಗೆ ಗೊತ್ತಿಲ್ಲಾನ್ನೋದು. ಏನದು ಸ್ವಲ್ಪ ಬಾಯಿಬಿಟ್ಟು ಹೇಳೋ."

"ನನಗೆ ಕಾಫೀ ಕೊಡಿಸಿದರೆ ಹೇಳ್ತೀನಿ ನೋಡಪ್ಪ."

"ಅಯ್ಯೋ ನಿನ್ನ ಕಾಫೀಗಿಷ್ಟು ಬೆಂಕೀಹಾಕ. ಕಾಫೀಯೇಕೆ, ಬಾದಾಮಿ ಹಾಲೇ ಕೊಡಿಸ್ತೀನಿ. ಬೊಗಳೋಬೇಗ. ಯಾಕಿಷ್ಟು ಸತಾಯಿಸ್ತೀಯು."

"ನಿನಗೆ ಈ ವರ್ಷದ ಮೆರಿಟ್ ಸ್ಕಾಲರ್‌ಷಿಪ್ ಸಿಕ್ಕಿದೇಕಣೋ. ಅದರ ಬಾಬ್ತು ತಿಂಗಳಿಗೆ ಹದಿನೈದು ರೂಪಾಯಿ ಬಂದುಬಿಡುತ್ತೆ. ಅದಲ್ಲದೆ ನಿನಗೆ ಫ್ರೀಷಿಪ್ಪೂ ಆಗಿದೆ. ಯು ಆರ್ ಎ ಲಕಿಚ್ಯಾಪ್! ಇನ್ನು ನೀನು ಗೆದ್ದೇಕಣೋ ಶ್ರೀಧರಾ. ಈವತ್ತು ಸಾಯಂಕಾಲ ಕಾಲೇಜ್ ನೋಟೀಸ್‌ಬೋರ್ಡಿನಲ್ಲಿ ಲಿಸ್ಟ್ ನೋಡಿದೆ. ಎರಡು ಲಿಸ್ಟಿನಲ್ಲೂ ನಿನ್ನ ಹೆಸರಿದೆ.

"ನಿಜವೇನೋ ವೆಂಕಟಾದ್ರಿ ನಿನ್ನಮಾತು!"

"ಹೋಗೋಹುಚ್ಚಾ. ನಿಜವಲ್ಲ ಹಾಗಾದರೆ ಸುಳ್ಳೂಂತಲೇ ತಿಳ್ಕೋಬೇಕಾದರೆ."

"ಕೋಪಿಸ್ಕೋಬೇಡೋ ವೆಂಕಟಾದ್ರಿ. ನಾನು ಸ್ವಲ್ಪ ಅನುಮಾನ ಪ್ರಕೃತಿನೋಡು. ಯಾವುದನ್ನೂ ಸುಲಭವಾಗಿ ನಂಬೋಲ್ಲ. ಆದ್ದರಿಂದ ಕೇಳಿದೆಕಣೋ ಹೋಗಲಿ. ನಿನಗೇನಾಯಿತು ಹೇಳಲೇ ಇಲ್ಲವಲ್ಲೋ."

"ನನಗೂ ಫ್ರೀಷಿಪ್ ಸಿಕ್ಕಿದೆ ಕಣೋ"

"ಗುಡ್ ! ಗಾಡ್ ಈಸ್ ಗ್ರೇಟ್ ! !

''ಹೋಗಲಿ ಏಳು. ಈಗ ತಾನೇ ಎಕ್ಸರ್‌ಸೈಸ್‌ಮಾಡಿ ಸುಸ್ತಾಗಿದ್ದೀಯ. ಹೋಟ್ಲಗೆ ಹೋಗಿ ಬಾದಾಮಿಹಾಲು ಕುಡುಕೊಂಡು ಬರೋಣ."

ಗೆಳೆಯರಿಬ್ಬರಿಗೂ ನಡೆಯುತ್ತಿದ್ದ ಸಂಭಾಷಣೆಯನ್ನು ಕೇಳಿ ವೆಂಕಟಸುಬ್ಬಯ್ಯನವರೂ ಅಲ್ಲಿಗೆ ಬಂದರು.

"ಏನು ಮಿ|| ಶ್ರೀಧರ್ ಸಮಾಚಾರ. ಏನೋ ಬಹಳ ಖುಷಿಯಾಗಿರೋ ಹಾಗೆ ಕಾಣುತ್ತಲ್ಲಾ ನೀವಿಬ್ಬರೂ" ಎಂದರು.

ಶ್ರೀಧರ ನಡೆದ ಸಂಗತಿಗಳನ್ನೆಲ್ಲಾ ಸಾದ್ಯಂತವಾಗಿ ಅವರಿಗೆ ವರದಿಯೊಪ್ಪಿಸಿದ. ಅವರೂ ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು. "ಐ ವಿಷ್ ಯು ಗುಡ್ ಲಕ್" ಎಂದರು.

"ನಾವಿನ್ನು ಬರ್ತೀವೀ ಸಾರ್" ಎಂದು ಹೇಳಿ ಗೆಳೆಯರಿಬ್ಬರೂ ಉಡುಪೀ ಹೋಟಲಿನ ಕಡೆ ಕಾಲುಹಾಕಿದರು.

## ೮

ಮಧ್ಯಾಹ್ನ ಮೂರು ಗಂಟೆಯಾಗಿತ್ತು. ಆಗ ನಡೆಯುತ್ತಿರುವ ಪಾಠ ಮುಗಿಯಿತೆಂದು ಸೂಚಿಸುವ ಗಂಟೆ ಹೊಡೆಯಿತು. ಸೀನಿಯರ್ ಬಿ. ಎ. ಹಾಲಿನಲ್ಲಿ ಸುಮಾರು ನೂರೈವತ್ತು-ಇನ್ನೂರು ವಿದ್ಯಾರ್ಥಿಗಳು ನೆರೆದಿದ್ದರು. ವೇದಿಕೆಯ ಸಮೀಪದಲ್ಲಿ ನಾಲ್ಕೈದು ಬೆಂಚುಗಳನ್ನೂ ಅವಕ್ಕೆದುರಾಗಿ ಟೇಬಲ್ಲುಗಳನ್ನೂ ಹಾಕಲಾಗಿತ್ತು. ಲೆಕ್ಚರ್ ಹಾಲಿನಲ್ಲಿ ಸಂತೆಯಂತೆ ವಿದ್ಯಾರ್ಥಿಗಳು ಬೊಬ್ಬೆ ಹಾಕುತ್ತಿದ್ದರು. ಕನ್ನಡ ಪ್ರೊಫೆಸರು ಆಗ ತರಗತಿಯನ್ನು ತೆಗೆದುಕೊಳ್ಳಬೇಕಾಗಿತ್ತು. ಪ್ರೊಫೆಸರಿನ್ನೂ ತರಗತಿಗೆ ಬಂದಿರಲಿಲ್ಲವಾದ್ದರಿಂದ ವಿದ್ಯಾರ್ಥಿನಿಯರು ಹೊರಗಡೆಯೇ ನಿಂತಿದ್ದರು. ಉಪಾಧ್ಯಾಯರಿಲ್ಲದಿರುವಾಗ ಲೆಕ್ಚರ್ ಹಾಲಿನಲ್ಲಿ ಹೋಗಿ ಕುಳಿತರೆ ತಮ್ಮವಸ್ಥೆಯೇನಾಗುತ್ತದೆಂಬುದರ ಅನುಭವ ಅವರಿಗೆ ಸಾಕಷ್ಟಿದ್ದುದರಿಂದ ಅವರು ಹೊರಗೇ ನಿಂತಿದ್ದರು. ಕನ್ನಡ ಪ್ರೊಫೆಸರು ಲೆಕ್ಚರ್ ಹಾಲನ್ನು ಪ್ರವೇಶಿಸಿದರು. ಅವರ ಮುಖ ಸಂತೋಷದಿಂದ ಪ್ರಫುಲ್ಲವಾಗಿತ್ತು. ಕುರ್ಚಿಯ ಮೇಲೆ ಕೂತನಂತರ ತಲೆಯೆತ್ತಿ ಹಾಗೆಯೇ ಗ್ಯಾಲರಿಯ ಕಡೆ

ದೃಷ್ಟಿಬೀರಿದರು. ಪ್ರೊಫೆಸರೇಕೆ ಹೀಗೆ ನೋಡುತ್ತಿದಾರೆಂದು ಎಲ್ಲರಿಗೂ ಸೋಜಿಗವೆನಿಸಿತು. ಅವರ ದೃಷ್ಟಿ ಪ್ರತಿಯೊಬ್ಬ ವಿದ್ಯಾರ್ಥಿಯ ಮೇಲೂ ಹಾಯಿತು. ನಾನು ಹುಡುಕುತ್ತಿರುವ ಹುಡುಗ ಇವನಲ್ಲ-ಇವನಲ್ಲ ಎಂದು ಕೊಂಡು ಅವರು ತಮ್ಮ ದೃಷ್ಟಿಯನ್ನು ವಿದ್ಯಾರ್ಥಿಯಿಂದ ವಿದ್ಯಾರ್ಥಿಗೆ ಬದಲಿಸುತ್ತಿದ್ದರು. ಕಡೆಗೆ ಅವರು ಹುಡುಕುತ್ತಿದ್ದ ವಿದ್ಯಾರ್ಥಿ ಅವರ ಕಣ್ಣಿಗೆಬಿದ್ದ. ಅವನೊಂದು ಮೂಲೆಯಲ್ಲಿ ಮುದುರಿಕೊಂಡು ಕೂತಿದ್ದ. ಅವನನ್ನು ನೋಡಿದ ಕೂಡಲೇ ಪ್ರೊಫೆಸರು ಹಸನ್ಮುಖರಾಗಿ "ಕಂಗ್ರಾಚು ಲೇಷನ್ಸ್ ಶ್ರೀಧರ್" ಎಂದರು. ನೆರೆದಿದ್ದ ವಿದ್ಯಾರ್ಥಿವೃಂದ ಬೆಕ್ಕಸ ಬೆರಗಾಯಿತು. ವಿದ್ಯಾರ್ಥಿನಿಯರ ಪೈಕಿ ಸ್ವಲ್ಪದಾಷ್ಟೀಕ ಸ್ವಭಾವದವರು ಒಬ್ಬಿಬ್ಬರು ಗ್ಯಾಲರಿಯ ಕಡೆ ತಲೆಯೆತ್ತಿ ನೋಡಿದರು.

ಪ್ರೊಫೆಸರು ವ್ಯಕ್ತಪಡಿಸಿದ ಅಭಿನಂದನೆಗಳಿಗಾಗಿ ಶ್ರೀಧರನಿಗೆ ಸಂತೋಷವೆನಿಸಿತಾದರೂ, ಕಾರಣವೇನೆಂಬುದು ತಿಳಿಯದೆ ಅವನ ಮನಸ್ಸು ಅಲ್ಲಕಲ್ಲೋಲವಾಯಿತು. ಅವನ ಮನಸ್ಸಿನಲ್ಲುಂಟಾಗಿರುವ ತಳಮಳ ವನ್ನು ಚೆನ್ನಾಗಿ ಬಲ್ಲ ಪ್ರೊಫೆಸರು ಹೆಚ್ಚು ಸಾವಕಾಶ ಮಾಡಲಿಲ್ಲ. "ಯೂನಿವರ್ಸಿಟಿಯವರು ಏರ್ಪಡಿಸಿದ್ದ ಕವಿತಾ ಸ್ಪರ್ಧೆಯಲ್ಲಿ ನಿನಗೆ ಬಹುಮಾನ ದೊರೆತಿದೆಯಪ್ಪ ಶ್ರೀಧರಾ. ಈಗ ತಾನೇ ತಿಳೀತು ನನಗೆ ಸಮಾಚಾರ" ಎಂದರು.

ಶ್ರೀಧರನಾಗ ಆನಂದದಿಂದ ಉಬ್ಬಿಹೋದ. ತನ್ನ ಕಿವಿಗಳನ್ನು ತಾನೆ ನಂಬಲಾರದಾದ. "ಇದು ನಿಜವೇ ಸಾರ್" ಎಂದು ಪ್ರೊಫೆಸರನ್ನೇ ಪ್ರಶ್ನಿಸಿದ. "ನಿಜವಯ್ಯಾ ಶ್ರೀಧರಾ. ಈ ವರ್ಷದ ಬಹುಮಾನ ನಿನಗೇ ದೊರೆತಿದೆ" ಎಂದರು ಪ್ರೊಫೆಸರು ನಗುತ್ತಾ. ಶ್ರೀಧರನಿಗೆ ತನ್ನತಲೆಯ ಮೇಲಿದ್ದ ದೊಡ್ಡ ಭಾರವನ್ನು ಇಳಿಸಿದ ಹಾಗಾಯಿತು ಪ್ರೊಫೆಸರ ಮಾತು ಕೇಳಿ. ಬಹುಮಾನ ಪಡೆದಿರುವ ಕವಿತೆಯನ್ನು ಬರೆಯಲು ಒಂದು ತಿಂಗಳ ಹಿಂದೆ ತಾನು ಪಟ್ಟಿದ್ದ ಶ್ರಮವೆಲ್ಲಾ ಅಂದಿಗೆ ಸಾರ್ಥಕವಾಯಿತೆಂದು ಮನಸಾರೆ ಹಿಗ್ಗಿದ. ಕನ್ನಡ ತಾಯಿಯ ಆಶೀರ್ವಾದ-ಅಭಯ ಹಸ್ತ ತನ್ನ ಮೇಲಿದೆ, ಆದರಿಂದಲೇ ತನಗೆ ಮೇಲಿಂದ ಮೇಲೆ ಯಶಸ್ಸು ದೊರೆ ಯುತ್ತಿದೆಯೆಂದು ಯೋಚಿಸ ತೊಡಗಿದ. ಪ್ರೊಫೆಸರು ಅಂದಿನ ಪಾಠ

ವನ್ನು ಸಾಂಗವಾಗಿ ನೆರವೇರಿಸಲಾಗಲಿಲ್ಲ. ಮೊದಲೇ ಅವರು ಕಾಲು ಗಂಟೆ ಹೊತ್ತಾಗಿ ಬಂದಿದ್ದರು. ಅದರ ಮೇಲೆ ಶ್ರೀಧರನಿಗೆ ಬಹುಮಾನ ಬಂದ ಪ್ರಸ್ತಾಪದ ಮೇಲೆ ಒಂದರ್ಧ ಗಂಟೆ ಮಾತು ಬೆಳೆಸಿದರು. ಶ್ರೀಧರನ ಮೇಲ್ಪಂಕ್ತಿಯನ್ನೇ ಇತರ ವಿದ್ಯಾರ್ಥಿಗಳೂ ಅನುಸರಿಸ ಬೇಕೆಂದೂ, ಅವನ ಹಾಗೆಯೇ ಎಲ್ಲರೂ ಕನ್ನಡ ಸಾಹಿತ್ಯಾಭ್ಯಾಸವನ್ನು ಕೈಗೊಳ್ಳಬೇಕೆಂದೂ ಅವರು ವಿದ್ಯಾರ್ಥಿಗಳಿಗೆ ಹಿತೋಪದೇಶ ಮಾಡಿದರು. ಪ್ರೊಫೆಸರೇನೋ ತಮಗೆ ತೋರಿದುದನ್ನು ಹೇಳಿದರು. ತಮ್ಮ ಕರ್ತವ್ಯ ವನ್ನವರು ನೆರವೇರಿಸಿದರು. ಆದರೆ ಅವರು ಹೇಳಿದ ಬುದ್ಧಿವಾದ ಅದೆಷ್ಟು ವಿದ್ಯಾರ್ಥಿಗಳ ತಲೆ ಹೊಕ್ಕಿತೋ ತಿಳಿಯದು. ಪೀರಿಯಡ್ಡು ಮುಗಿದುದರ ಸೂಚಕವಾಗಿ ಗಂಟೆ ಬಾರಿಸಿತು. ಪ್ರೊಫೆಸರು ತರಗತಿಯಿಂದ ಹೊರಟರು.

ಅಷ್ಟುಹೊತ್ತಿಗಾಗಲೇ ಶ್ರೀಧರನಿಗೆ ಬಹುಮಾನ ದೊರೆತಿರುವ ಸುದ್ದಿ ಕಾಲೇಜಿನಲ್ಲೆಲ್ಲಾ ಹಬ್ಬಿಹೋಗಿತ್ತು. ಅವನ ಗೆಳೆಯರೆಲ್ಲರೂ ಅವನಲ್ಲಿಗೆ ಬಂದು ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು. ಅವನ ಉಪಾಧ್ಯಾಯ ವೃಂದವೂ ಅವನನ್ನು ಬಹಳವಾಗಿ ಶ್ಲಾಘಿಸಿತು. ಇಷ್ಟೆಲ್ಲಾ ಸಂತೋಷ ಸಮಾರಂಭಗಳನ್ನು ಮುಗಿಸಿಕೊಂಡು ಶ್ರೀಧರ ಕಾಲೇಜಿಂದ ಹೊರಡುವ ಹೊತ್ತಿಗೆ ಆರುಗಂಟೆ ಹೊಡೆಯಿತು.

"ಎಲ್ಲಾ ಮುಗೀತಲ್ಲಾ. ಇನ್ನು ಹೊರಡೋಣವೇನ್ರಯ್ಯ" ಶ್ರೀಧರ ತನ್ನ ಮಿತ್ರವೃಂದವನ್ನು ಪ್ರಶ್ನಿಸಿದ.

"ಓಹೋ. ಎಲ್ಲಾ ಸಮಾರಂಭಗಳೂ ಮುಗಿದ ಹಾಗಾಯಿತಲ್ಲ. ಇನ್ನು ಹೊರಡೋದೇ" ಎಂದ ಮೂರ್ತಿ.

"ಮೊದಲು ರಾಮೈಯ್ಯರ್ ರೆಸ್ಟೂರೆಂಟಿಗೆ ನಡೀರಿ. ಅಲ್ಲಿ ಕಾಫೀ ಸಮಾರಾಧನೆ ನಡೀಲಿ" ದೇವನಾಥ್ ಹೇಳಿದ.

"ಅನಂತರಾಮೈಯ್ಯ ಎಲ್ಲಿ ಕಾಣಿಸೋದೇ ಇಲ್ಲವಲ್ಲಾ" ಶ್ರೀಧರ ಕಾತುರನಾಗಿ ಕೇಳಿದ

"ಅವನಿಗೇನೋ ಮಧ್ಯಾಹ್ನದಿಂದ ತಲೇನೋಯುತ್ತಿದೆಯಂತೆ. ಕಾಲೇಜಿಗೆ ಬಂದಿದ್ದವನು ವಾಪಸು ಹೊರಟುಹೋದ. ಈಗ ರೂಮಿನಲ್ಲೇ ಇರಬೇಕು" ಮೂರ್ತಿ ನುಡಿದ.

"ಹಾಗಾದರೆ ಮೊದಲು ರೂಮಿಗೆ ನಡೀರಿ. ಅವನೇನು ಅವಸ್ಥೆ ಪಡುತ್ತಿದಾನೆಯೋ ಏನೋ" ಎಂದ ಶ್ರೀಧರ.

ಅಷ್ಟುಹೊತ್ತಿಗೆ ಕಾಲೇಜು ದಫೇದಾರ ತಿಮ್ಮಯ್ಯ ಬಂದು ಶ್ರೀಧರನ ಕೈಗೊಂದು ಕಾಗದವನ್ನಿತ್ತ. ಅದೇನಿರಬಹುದೆಂದು ಎಲ್ಲರ ಕುತೂಹಲವೂ ಕೆರಳಿತು. ಶ್ರೀಧರ ಆಶ್ಚರ್ಯದಿಂದ ಮಡಿಸಿದ್ದ ಕಾಗದವನ್ನು ಬಿಚ್ಚಿ ಓದ ತೊಡಗಿದ ಅದರ ಒಕ್ಕಣೆ ಹೀಗಿತ್ತು ;



ಶ್ರೀಮಾನ್ ಶ್ರೀಧರರವರಿಗೆ,

ತಮಗೆ ಈ ವರ್ಷ ಶ್ರೀಯವರ ರಜತೋತ್ಸವ ಸ್ವರ್ಣಪದಕ ದೊರೆತಿರುವ ಸಂತೋಷದ ಸುದ್ದಿ ತಿಳಿದು ನಮಗೆಲ್ಲರಿಗೂ ಬಹಳ ಆನಂದವುಂಟಾಗಿದೆ. ನಿಮಗಿರುವ ಭಾಷಾಪ್ರೇಮ-ಸಾಹಿತ್ಯಾಭಿರುಚಿ ಇವುಗಳ ಸಾಕಷ್ಟು ಪರಿಚಯ ನಮಗಿದ್ದರೂ, ತಾವೊಬ್ಬ ವರ್ಧಿಷ್ಣುಗಳಾದ ತರುಣ ಕವಿಗಳೆಂದು ತಿಳಿದುದು ಇದೇ ಮೊದಲು. ಅಂತೆಯೇ ನಮಗೆ ಮಹದಾನಂದವುಂಟಾಗಿದೆ. ತಮಗೆ ಇತೋಪ್ಯತಿಶಯವಾದ ಯಶಸ್ಸು ಲಭಿಸಲಿ. ತಮ್ಮಿಂದ ಇನ್ನೂ ಹೆಚ್ಚುಹೆಚ್ಚಾಗಿ ಸಾಹಿತ್ಯಸೇವೆ ನಡೆಯುವಂತೆ ಕನ್ನಡ ಮಾತೆ ಅನುಗ್ರಹಿಸಲೆಂಬುದೇ ನಮ್ಮ ಹೃತ್ಪೂರ್ವಕವಾದ ಹಾರೈಕೆಯಾಗಿದೆ.

ಮಾನ್ಯ ಮಿತ್ರರೇ, ನಮಗುಂಟಾಗಿರುವ ಸಂತೋಷವನ್ನು ತಮ್ಮಲ್ಲಿ ಪ್ರತ್ಯಕ್ಷವಾಗಿ ವ್ಯಕ್ತಪಡಿಸಿ, ನಮಗೆ ತಮ್ಮ ಮೇಲಿರುವ ಆದರಾಭಿಮಾನಗಳನ್ನು ಸೂಚಿಸಲು ನಾವೆಲ್ಲರೂ ಉತ್ಕಂಠಿತರಾಗಿದ್ದೇವೆ. ನಾಳೆ ಭಾನುವಾರ ಕಾಲೇಜಿಗೆ ರಜವಿದೆಯಷ್ಟೆ. ನಿಮಗೊಂದು ಸಣ್ಣ ಸತ್ಕಾರ ಕೂಟವನ್ನೇರ್ಪಡಿಸಿಕೊಂಡಿದ್ದೇವೆ. ತಾವು ನಮ್ಮ ಆಹ್ವಾನವನ್ನು ಮನ್ನಿಸಿ, ನಾಳೆ ಮಧ್ಯಾಹ್ನ ನಾಲ್ಕು ಗಂಟೆಗೆ ಸರಸ್ವತೀಪುರದಲ್ಲಿರುವ 'ಬೃಂದಾವನ' ಬಂಗಲೆಗೆ ತಮ್ಮ ಮಿತ್ರರೊಂದಿಗೆ ದಯಮಾಡಿಸಿ, ನಮ್ಮ ಅಲ್ಪ ಕಲಾ ಕಾಣಿಕೆಯನ್ನು ಸ್ವೀಕರಿಸುವುದರ ಮೂಲಕ ನಮ್ಮ ಮನಸ್ಸಂತೋಷಪಡಿಸಬೇಕಾಗಿ ಕೋರುವ,

ನಿಮ್ಮ ಸಹಪಾಠಿಗಳಾದ,
(ಸಹಿ) ಚಂದ್ರವದನಾ, ಸುಮಿತ್ರ,
ಜಯಲಕ್ಷಮ್ಮ, ಲಲಿತಮ್ಮ.
(ಸೀನಿಯರ್ ಬಿ. ಎ. ವಿದ್ಯಾರ್ಥಿನಿಯರು.)

ಶ್ರೀಧರ ಕಾಗದವನ್ನೋದಿಕೊಂಡು ಪಕ್ಕದಲ್ಲಿದ್ದ ಮೂರ್ತಿಯ ಕೈಗಿತ್ತ.

"ಲೇಡೀಸ್ ರೂಮಿನಲ್ಲೇ ಇದ್ದಾರೇನೋ ಅಮ್ಮಾವ್ರು? ನನ್ನಿಂದೇನಾದ್ರೂ ಜವಾಬು ಬರಿಸಿಕೊಂಡು ಬಾಂತ ಹೇಳಿದ್ರೇನೋ" ಎಂದು ಕೇಳಿದ ದಫೇದಾರ್ ತಿಮ್ಮಯ್ಯನ್ನ.

"ಇಲ್ಲಾ ಬುದ್ಧಿ. ಅಮ್ಮಾವ್ರೆಲ್ಲಾ ಆಗಲೇ ಹೊಂಟೋದ್ರು. ನಿಮಗೆ ಖುದ್ದಾಗಿ ಕಾಜಗಾ ಕೊಡಬೇಕೂಂತ ಹೇಳವ್ರೆ. ಈಗ ಕೊಟ್ಟೆನ್ನಿ. ಇನ್ನೇನೂ ಹೇಳ್ಲಿಲ್ಲ ಅಮ್ಮಾವ್ರು."

"ಸರಿ ಹಾಗಾದರೆ."

ತಿಮ್ಮಯ್ಯ ಹೊರಟುಹೋದ. "ಮೊದಲು ರೂಮಿಗೆ ಹೋಗೋಣ ಮೂರ್ತಿ. ಅನಂತರಾಮೈಯ್ಯ ಹೇಗಿದ್ದಾನೋ ಏನೋ"

"ನಿನ್ನ ಅನಂತರಾಮೈಯ್ಯ ಏನೂ ಆಗಿರೋಲ್ಲ. ಕಲ್ಲುಗುಂಡಿನ ಹಾಗಿರ್ತಾನೆ. ಒಂದಿಷ್ಟು ಕಾಫೀ ಕುಡಿದು ಹೋಗೋಣ ಬಾರಯ್ಯ." ಮೂರ್ತೀ-ದೇವನಾಥರಿಬ್ಬರೂ ಶ್ರೀಧರನನ್ನು ಕೈಹಿಡಿದು ಕರೆದೊಯ್ದರು. ಗೆಳೆಯರ ಬಲವಂತಕ್ಕೆ ಸಿಕ್ಕಬಿದ್ದಿದ್ದ ಶ್ರೀಧರ ಅವರೊಂದಿಗೆ ನಡೆದ. ಎಂದಿನಂತೆಯೇ ರಾಮೈಯರ್ ರೆಸ್ಟೋರೆಂಟು ವಿದ್ಯಾರ್ಥಿಗಳಿಂದ ಕಿಕ್ಕಿರಿದು ಹೋಗಿತ್ತು. ಶ್ರೀಧರನ ಮಿತ್ರಮಂಡಲಿ ಒಂದು ದುಂಡು ಮೇಜನ್ನಾಕ್ರಮಿಸಿಕೊಂಡಿತು. ಅವರ ಯೋಗಕ್ಷೇಮವನ್ನು ಪ್ರತಿದಿನವೂ ವಿಚಾರಿಸಿಕೊಳ್ಳುತ್ತಿದ್ದ ಮಾಮೂಲು ಮಾಣಿಯೇ ಅವರ ಮುಂದೆ ಬಂದು ನಿಂತ.

"ಟುಡೇಸ್ ಸ್ಪೆಷಲ್ ಏನಿದೆಯಯ್ಯಾ" ದೇವನಾಥ್ ಕೇಳಿದ.

"ಬಾದಾಂ ಹಲ್ವ, ಸೋರ್ಹಪೂರಿ, ಗುಲಾಬ್ ಜಾಮೂನ್, ತೈರೊಡೆ, ಮೈಸೂರು ಬೋಂಡಾ, ಬಜ್ಜಿ..........."

"ನನಗದೆಲ್ಲಾ ಬೇಡಯ್ಯ. ಹೊಟ್ಟೆಯಲ್ಲಿ ತಾಳಾಹಾಕ್ತಿದೆ. ನನಗೆ ಸಬ್‌ಸ್ಟಾಂಷಿಯಲ್ ಫುಡ್ ಬೇಕು. ಮಸಾಲೆದೋಸೆ ಇದೆಯೇನಯ್ಯಾ".

"ಇದೇ ಸಾರ್".

"ಹಾಗಾದರೆ ಮೂರು ಸ್ಪೆಷಲ್ ಮಸಾಲೆ ಹೇಳ್ಳು. ಹಾಗೇ ಮೂರು ಬಾದಾಂ ಹಲ್ವಾ, ತೈರೊಡೆ ತಗೊಂಬಾ".

"ರೈಟ್........................." ಎನ್ನುತ್ತಾ ಮಾಣಿ ತಿಂಡೀ ತರಲು ಹೊರಟುಹೋದ.

ಹೋಟಲಿನಲ್ಲಿ ತಿಂಡಿ ತಿನ್ನುತ್ತಿದ್ದವರ ಪೈಕಿ ಶ್ರೀಧರನ ಸಹಪಾಠಿಗಳೂ ಕೆಲವರಿದ್ದರು. ಶ್ರೀಧರನ ಪರಿಚಯವಿದ್ದವರು ತಮ್ಮ ಮಿತ್ರರಿಗೆ ಅವನ ಪರಿಚಯವನ್ನು ಮಾಡಿಕೊಡಹತ್ತಿದರು. "ಅವರಿಗೇ ಬಿ.ಎಮ್.ಎಸ್. ಪ್ರೈಸ್ ಬಂದಿರೋದು. ಮಿ|| ಶ್ರೀಧರ್ ಎಂದವರ ಹೆಸರು. ಪಾಲಿಟಿಕ್ಸ್ ಆನರ್ಸ್ ಸ್ಟೂಡೆಂಟ್. ಸೆಕೆಂಡ್ ಆನರ್ಸ್‌ನಲ್ಲಿದ್ದಾರೆ" ಎಂದು ಅವನ ಕಡೆ ಬೆರಳು ತೋರಿಸಿ ಅವನ ಪರಿಚಯವನ್ನು ಮಾಡಿಕೊಡುತ್ತಿದ್ದರು. ಶ್ರೀಧರ ನಿಗಿದೆಲ್ಲಾ ನೋಡಿ ಬಹಳ ಸಂಕೋಚವೆನಿಸಿತು. 'ನನ್ನಷ್ಟಕ್ಕೆ ನಾನು ಎಲ್ಲೋ ಮೂಲೆಯಲ್ಲಿ ಕೂತಿದ್ದು ಮೂರು ವರ್ಷಗಳನ್ನ ದಬ್ಬಿ ಕಾಲೇಜಿಂದ ಪಾರಾಗಬೇಕೆಂದಿದ್ದೆ. ಆದರೆ ಈಗ ನಡೀತಿರೋದೆಲ್ಲಾ ನೋಡಿದರೆ ನನ್ನ ಮನೋಭಿಲಾಷೆಗೆ ವಿರುದ್ಧವಾಗಿಯೇ ಇವೆ. ಆದಷ್ಟು ತೆರೆಯಮರೆಯಲ್ಲಿದ್ದು, ಯಾವ ಆಡಂಬರ, ಪ್ರದರ್ಶನ, ಗದ್ದಲವೂ ಇಲ್ಲದೆ ಕೆಲಸ ಮಾಡಿಕೊಂಡು ಹೋಗಬೇಕೆನ್ನುವವನು ನಾನು. ಈ ಜನಜಂಗುಳಿ—ಇವರ ಹೊಗಳಿಕೆ ತೆಗಳಿಕೆ ಇವು ಯಾವುದೂ ನನಗೆ ಬೇಕಿಲ್ಲ. ಯಾರೊಬ್ಬರ ಮೆಚ್ಚಿಕೆಗೆ ಪಾತ್ರ ನಾನಬೇಕೆಂದೂ ನಾನು ದುಡಿಯುತ್ತಿಲ್ಲ. ದೇವರು ನನಗೆ ಕೊಟ್ಟಿರೋ ಯೋಗ್ಯತೆಯನ್ನು ನಾಲ್ಕು ಜನರಿಗೆ ಉಪಯುಕ್ತವಾಗುವ ರೀತಿಯಲ್ಲಿ ವಿನಿಯೋಗಿಸಬೇಕೆಂಬುದೇ ನನ್ನ ಧ್ಯೇಯವಾಗಿದೆ. ನನ್ನ ಕರ್ತವ್ಯವನ್ನ ನಾನು ಮಾಡುತ್ತಿದೇನೆ. ಇದರಲ್ಲೇನು ದೊಡ್ಡಸ್ತಿಕೆ ಬಂತೋ ನನಗೆ ತಿಳೀದು. ಜನ ಏಕೆ ಹೀಗೆ ನನ್ನನ್ನ ಎತ್ತಿಕಟ್ಟುತ್ತಾರೋ ನನಗರ್ಥವಾಗೋಲ್ಲ.' ಹೀಗೆಲ್ಲಾ ಶ್ರೀಧರನ ವಿಚಾರಸರಣಿ ಗೊತ್ತುಗುರಿಯಿಲ್ಲದೆ ಹರಿಯುತ್ತಿತ್ತು. ಶ್ರೀಧರನ ಮೌನಮುದ್ರೆಯನ್ನು ನೋಡಿ ಅವನ ಉತ್ಸಾಹೀ ಗೆಳೆಯರಿಗೆ ತುಸು ಕೋಪವೇ ಬಂತು.

"ಅದೇಕಯ್ಯಾ ಶ್ರೀಧರಾ ಹಾಗೆ ಬೆಪ್ಪುಬಡಿದು ಕೂತುಬಿಟ್ಟಿದ್ದೀಯ! ಏಕೆ ಮಾತಾಡೋಲ್ಲ. ನಮ್ಮ ಕಂಪೆನಿ ನಿನಗೆ ಸರಿಹೋಗಲಿಲ್ಲವೇನೋ ಪಾಪ" ದೇವನಾಥ್ ಚುಚ್ಚು ಮಾತಾಡಿದ.

" ಅವನೊಬ್ಬ ಫಿಲಾಸಫರ್ ಪ್ರೊಫೆಟ್ ಕಣೋ! ಒಂಟಿಯಾಗಿ ಎಲ್ಲಾದರೂ ನದೀ, ಬೆಟ್ಟ, ಕಾಡೂ, ಪೊದೆ, ಹೊಳೇ, ಹಳ್ಳ ಇವುಗಳ ಹತ್ತಿರ ಸಂಚರಿಸತಕ್ಕ ವ್ಯಕ್ತಿ ಈತನು. ಅವನಿಗೆ ಯಾವ ಕಂಪೆನಿಯೂ ಬೇಡ" ಎಂದ ಮೂರ್ತಿ ನಗುತ್ತಾ. ಇಷ್ಟು ಹೊತ್ತೂ ಅಂತರ್ಮುಖಿಯಾಗಿದ್ದ ಶ್ರೀಧರ ಗೆಳೆಯರ ಚುಚ್ಚುಮಾತುಗಳನ್ನು ಕೇಳಿ ಎಚ್ಚರಗೊಂಡ. ತನ್ನ ಗೆಳೆಯರ ಆಕ್ಷೇಪಗಳನ್ನು ಕೇಳಿ ಅವನಿಗೇನೂ ಕೋಪ ಬರಲಿಲ್ಲ. ಬದಲಾಗಿ ತನ್ನನ್ನು ಕುರಿತು ಹೇಳಿದ್ದೆಲ್ಲವೂ ಅಕ್ಷರಶಃ ನಿಜವೆಂಬ ಅರ್ಥಬರುವಂತೆ ಸಹಾನುಭೂತಿ ಸೂಚಕವಾಗಿ ಮೃದುವಾಗಿ ನಕ್ಕ.

ಅಷ್ಟುಹೊತ್ತಿಗೆ ಮಾಣಿ ದೊಡ್ಡದೊಂದು ತಟ್ಟೆಯನ್ನು ತಂದು ಅವರ ಟೇಬಲ್ಲಿನ ಮೇಲಿಟ್ಟ. ತನ್ನ ಮುಂದಿದ್ದ ಬಗೆಬಗೆಯ ತಿನಿಸುಗಳನ್ನು ನೋಡಿ ದೇವನಾಥನ ಬಾಯಲ್ಲಿ ನೀರೊಡೆಯಿತು. " ತಗೊಳ್ಳಯ್ಯಾ ಶ್ರೀಧರ ತಿಂಡೀನ. ಆಮೇಲೆ ಬೇಕಾದಷ್ಟು ಯೋಚಿಸುವೆಯಂತೆ. ಆಲೋಚನೆ ನಿನ್ನನ್ನು ಬಿಟ್ಟು ಎಲ್ಲಿಗೂ ಓಡಿಹೋಗೊಲ್ಲ. ಅದಕ್ಕೂ ನಿನಗೂ ಜನ್ಮ ಜನ್ಮಾಂತರದ ನಂಟು!"ಎಂದು ಹಾಸ್ಯಮಾಡುತ್ತಾ ತೈರೊಡೆಯನ್ನು ಚಮಚ ದಿಂದ ಚುಕ್ಕುಚೂರುಮಾಡಲಾರಂಭಿಸಿದ. ಮೂರ್ತಿಯಾಗಲೇ ಪ್ಲೇಟಿಗೆ ಕೈಹಚ್ಚಿದ್ದ. ಶ್ರೀಧರ ತಿನ್ನಲೋ ಬೇಡವೋ ಎನ್ನುವಂತೆ ತಟ್ಟೆಯನ್ನೆಳೆದು ಕೊಂಡ.

ಏನು ಕಾರಣವೋ ತಿಳೀದು ಅವನ ಗಂಟಲಲ್ಲಿ ತಿಂಡಿ ಸರಾಗವಾಗಿ ಇಳೀಲಿಲ್ಲ. ಹೇಳಲಾರದ ದುಗುಡವೊಂದು ಅವನ ಹೃದಯವನ್ನು ಹಿಂಡು ತ್ತಿತ್ತು. ಆದರ ಕಾರಣ ಅವನಿಗೇ ತಿಳಿಯದು. ಹೇಗೋ ಮಿತ್ರರ ಒತ್ತಾಯ ಕ್ಕೋಸ್ಕರ ಆವರು ಕೊಡಿಸಿದ ತಿಂಡಿ ತಿಂದಶಾಸ್ತ್ರಮಾಡಿ ಎದ್ದ. ದೇವ ನಾಥನೇ ತಿಂಡಿಯ ದುಡ್ಡು ಕೊಟ್ಟ. "ನಾವಿನ್ನು ಬರ್ತೇವಯ್ಯಾ ಶ್ರೀಧರ್. ಬಹಳ ಥ್ಯಾಂಕ್ಸ್ ನಮಗೆ ಕಂಪೆನಿ ಕೊಟ್ಟಿದ್ದಕ್ಕೆ" ಎನ್ನುತ್ತಾ ದೇವನಾಥ್ ಶ್ರೀಧರನ ಕೈಕುಲುಕಿದ.

"ನಾಳೆ ಮಧ್ಯಾಹ್ನ ಮೂರು ಗಂಟೆಗೆ ಸರಿಯಾಗಿ ನನ್ನ ರೂಮಿನ ಹತ್ರ ಬನ್ರಯ್ಯ. ಮರೆತು ಹೋಗಬೇಡಿ. ಎಲ್ಲಾದ್ರು ಪಿಕ್ಚರ್ರು-ಗಿಕ್ಚರಿ ಗೆದ್ದುಬಿಡಬೇಡಿ. ನಾಳಿನ ಎಂಗೇಜ್‌ಮೆಂಟ್ ನಿಮಗೆ ಗೊತ್ತಿದೇ ತಾನೆ."

"ಹೌದಯ್ಯಾ ಮರೆತೇ ಹೋಯಿತಲ್ಲಾ. ಅಂದ ಹಾಗೆ ನಾವೂ ನಿನ್ನ ಜತೇಲಿ ಗೆಸ್ಟ್ಸ್ ಅನ್ನು!"

"ಹೌದು........".

"ಏನೋಪ್ಪ ನನಗೆ ಸಂಕೋಚವಾಗತ್ತೆ. ಎಲ್ಲಾ ಹೆಂಗಸರ ಪಾಳ್ಯ. ನಾವು ಹೀಗೆ ಪಾರ್ಟೀಗೆ ಹೋಗೋದು ಇದೇ ಮೊದಲು." ಮೂರ್ತಿ ಹಿಂದೇಟು ಹಾಕಿದ.

"ಅವರೇನು ಮಾಡ್ತಾರೋ ನಿನ್ನ! ಅವರೇನು ನಿನಗೆ ಹೊಸಬರೇ! ದಿನವೂ ಅವರ ಮುಖಗಳನ್ನ ಕಾಲೇಜಲ್ಲಿ ನೋಡ್ತಾನೇ ಇದೀಯಲ್ಲಾ. ಎಲ್ಲೋ ಹೆನ್ ಪೆಕ್ಡ್ ಕಣೋ ನೀನು" ದೇವನಾಥ್ ನಕ್ಕು ನುಡಿದ. "ಹೌದ್ಹೌದು. ಪಾಪ ಸಂಕೋಚವಾಗುತ್ತೇ ಅಲ್ವೇ. ದಿನಾಗ್ಲೂ ಲೆಕ್ಚರ್ ಹಾಲಿನ ಲಾಸ್ಟ್ ಗ್ಯಾಲರೀಲಿ ಕೂತು ಆ ಹುಡುಗೀ ಕಡೆ ಗುರಿಯಿಟ್ಟು ಪೇಪರ್ ಬಾಲ್ಸ್ ಎಸೆಯೋಕೆ ಮಾತ್ರ ನಿನಗೆ ಸಂಕೋಚ ವಿಲ್ಲ. ಈಗವರು ಕರೆದಿರೋ ಪಾರ್ಟೀಗೆ ಹೋಗೋಕ್ಕೆ ಮಾತ್ರ ಎಲ್ಲೂ ಇಲ್ಲದ ಸಂಕೋಚ ಬಂದುಬಿಡ್ತೋ! ಸಾಕು ಬಾರೋ ಕಂಡಿದ್ದೀನಿ. ತಲೆಯೆಲ್ಲಾ ಹರಟಬೇಡಾ" ಶ್ರೀಧರ ತನ್ನ ಗೆಳೆಯನ ಭರ್ತ್ಸನೆ ಮಾಡಿದ.

ಪಾಪ ಆಗ ಮೂರ್ತಿ ಉಸಿರೆತ್ತುವ ಹಾಗಿರಲಿಲ್ಲ. ಇನ್ನೇನಾದರೂ ಹೆಚ್ಚು ಮಾತಾಡಿದರೆ ಶ್ರೀಧರ ಸರಿಯಾಗಿಯೇ ತರಾಟೆಗೆ ತೆಗೆದುಕೊಳ್ಳು ತ್ತಾನೆಂದು ಅವನಿಗೆ ತಿಳಿದಿದ್ದುದರಿಂದ ಅವನು ತುಟಿಯೆರಡು ಮಾಡಲಿಲ್ಲ. ಗೆಳೆಯರಿಬ್ಬರೂ ಶ್ರೀಧರನಿಗೆ ಸಮ್ಮತಿ ಹೊಡೆದು "ಆಗಲೀ ಶ್ರೀಧರಾ ಬರ್ತೇವೆ" ಎಂದು ಹೇಳಿ ತಮ್ಮ ತಮ್ಮ ಮನೆಯ ದಾರಿ ಹಿಡಿದರು. ಶ್ರೀಧರನೂ ಬೇಗ ಬೇಗ ಕೊಠಡಿಯ ಕಡೆ ಕಾಲು ಹಾಕಿದ.

೬

ಶ್ರೀಧರ ಕೊಠಡಿಯನ್ನು ಪ್ರವೇಶಿಸಿದಾಗ ಅನಂತರಾಮೈಯ್ಯ ಹಾಸಿಗೆ ಹಾಸಿ ಮಲಗಿಬಿಟ್ಟಿದ್ದ. ದೀಪ ಉರಿಯುತ್ತಿತ್ತು. ಶ್ರೀಧರ ನೆಟ್ಟಗೆ ಹೋಗಿ ಅನಂತರಾಮೈಯ್ಯನ ಹಣೇ ಮುಟ್ಟಿ ನೋಡಿದ. ಕೂಡಲೇ ತುಸು ಬೆಚ್ಚಿ

ಬಿದ್ದ. ಅನಂತರಾಮೈಯ್ಯನಿಗೆ ಜ್ವರ ಕಾಯುತ್ತಿತ್ತು. ಹಣೆಯ ಮೇಲೆ ಬೆವರಿನ ಹನಿಗಳು ಮೂಡಿದ್ದವು. ಜ್ವರದ ತಾಪದಿಂದ ನರಳುತ್ತಿದ್ದ.

"ಯಾವಾಗಿನಿಂದ ಜ್ವರ ಬರುತ್ತಿದೆ ಅನಂತರಾಮೈಯ್ಯ" ಶ್ರೀಧರ ಅವನ ಮೈ ಅಲುಗಾಡಿಸಿ ಕೇಳಿದ. ಅನಂತರಾಮೈಯ್ಯ ಕಣ್ಣು ಬಿಟ್ಟು ನೋಡಿದ.

"ಏನು ಶ್ರೀಧರಾ ಯಾವಾಗ ಬಂದೆ?"

"ಇದೇ ತಾನೇ ಬಂದೆ. ಜ್ವರ ಸುಡ್ತಿದೆಯಲ್ಲಯ್ಯಾ. ಷಾಪಿಗೆ ಹೋಗಿ ಔಷಧಿ ತರ್ತೀನಿ."

"ಔಷಧಿಯೂ ಬೇಡ ಏನೂ ಬೇಡ. ಅಲಮಾರಿನಲ್ಲಿ ಸಿಬೇಜಾಲ್ ಪಿಲ್ಸಿದೆ. ಒಂದು ತೆಗೆದುಕೊಡು, ನುಂಗ್ತೀನಿ".

"ಕೊಡ್ತೀನಿ. ಹೊಟ್ಟೆಗೇನು ತಗೊಳ್ತೀಯ. ಬೇಕಾದರೆ ಗಂಜೀ ಕಾಸಿ ಕೊಡ್ತೀನಿ, ಹಾಲು ಕುಡಿಯೋಹಾಗಿದ್ರೆ ಹಾಲು ತಂದು ಕೊಡ್ತೀನಿ".

"ನೀನೇನೂ ತೊಂದರೆ ತಗೋ ಬೇಡಾ ಶ್ರೀಧರಾ. ಆಗಲೇ ನಾಗೇಶರಾಯರು ಬಂದು ವಿಚಾರಿಸಿಕೊಂಡು ಹೋದ್ರು. ಅವರಿಗೇ ಹೇಳಿದ್ದೀನಿ ಒಂದು ಲೋಟಾ ಗಂಜೀ ಕಾಯಿಸಿ ಕೊಡೀಂತ. ಆದೇಕೆ ಇಷ್ಟು ಹೊತ್ತು ಮಾಡಿದೆ ಈವತ್ತು. ನಾಲ್ಕು ಗಂಟೆಗೆಲ್ಲಾ ನಿನ್ನ ಕ್ಲಾಸು ಮುಗಿದುಹೋಗಿರಬೇಕಲ್ಲ."

"ಕ್ಲಾಸೇನೋ ಮುಗೀತಯ್ಯ. ಆದರೆ ಕೂಡ್ಲೇ ಬರೋಕಾಗಲಿಲ್ಲ.

"ಏನಯ್ಯಾ ಅಂಥಾ ರಾಜಕಾರಣ ನಿನಗಿದ್ದದ್ದು!"

"ಒಂದು ವಿಧದಲ್ಲಿ ರಾಜಕಾರಣವೇ ಅನ್ನು. ನನಗೀವರ್ಷ ಬಿ. ಎಂ. ಎಸ್. ಗೋಲ್ಡ್ ಮೆಡಲ್ ಬಂದಿದೆ ಕಣಯ್ಯ. ನಮ್ಮ ಕನ್ನಡ ಪ್ರೊಫೆಸರು ಈವತ್ತು ಕ್ಲಾಸಿನಲ್ಲಿ ತಿಳಿಸಿದರು. ಎಲ್ಲರೂ ನನ್ನ ಮುತ್ತಿ ಬಿಟ್ಟರು. ಬಂದವರಿಗೆ ಒಂದು ಒಳ್ಳೇ ಮಾತಾಡಿ ಕಳಿಸದಿದ್ದರೆ ಹೇಗೆ. ಸ್ವಲ್ಪ ಮುಖ ಸೊಟ್ಟಗೆ ಮಾಡಿದರೆ ಆಗಲೇ ಬಂದು ಬಿಡ್ತಲ್ಲಾ ಇವನಿಗೆ ಜಂಭ ಅಂದುಕೊಳ್ತಾರೆ. ಜನರ ಹತ್ತಿರ ಹೇಗೆ ಹೋದರೂ ಕಷ್ಟ. ಎಲ್ಲರನ್ನೂ ಮಾತಾಡಿಸಿ ಕಾಲೇಜಿಂದ ಹೊರಡೋ ಹೊತ್ತಿಗೆ ಸಾಕಾಗಿ ಹೋಯಿತು."

"ಬಹಳ ಸಂತೋಷಕಣಯ್ಯ! ಅಂತೂ ಹೊಡೆದೆಯಲ್ಲಾ ಪ್ರೈಸ್ನ!! ಹೋಗಲಿ ಬಿಡು. ನಿನ್ನ ದೈವ ತೆರೆಯಿತು. ಕೂಡಲೇ ಊರಿಗೊಂದು ಕಾಗದಾ ಬರೆದು ಹಾಕು. ನಿನಗೆ ಗೋಲ್ಡ್ ಮೆಡಲ್ ಬಂದಿರೋ ಸುದ್ದಿ ತಿಳಿದರೆ ನಿನ್ನ ತಂದೇತಾಯಿಗಳು ಅದೆಷ್ಟು ಹಿಗ್ಗಿಹೋಗುತ್ತಾರೋ!"

"ಆಗಲಿ. ನಾಳೆ ಬೆಳಿಗ್ಗೆ ಮೊದಲು ಅದೇ ಕೆಲಸ ಮಾಡ್ತೀನಿ. ಸಮಾಚಾರ ತಿಳಿದ ಕೂಡಲೇ ತಕ್ಷಣ ಓಡಿ ಬಂದು ನಿನಗೆ ತಿಳಿಸಬೇಕೂಂತ ನನ್ನ ಮನಸ್ಸು. ಆದರೇನು ಮಾಡಲೀ ಹೇಳು. ನನ್ನ ಯತ್ನ ನಡೀಲಿಲ್ಲ. ದೇವನಾಥ್, ಮೂರ್ತಿ, ನನ್ನನ್ನ ಹೋಟಲಿಗೆಳೆದುಕೊಂಡು ಹೋದರು. ನನಗೆ ನಿನ್ನನ್ನ ಬಿಟ್ಟು ತಿಂಡೀ ತಿನ್ನಲು ಮನಸ್ಸಿಲ್ಲ. ಅದೂ ಅಲ್ಲದೆ ನೀನು ಮಲಗಿ ಬಿಟ್ಟಿದ್ದೀಯೆಂದೂ ತಿಳಿದ ಮೇಲಂತೂ ನನ್ನ ಜಂಘಾಬಲವೇ ಉಡುಗಿಹೋಯಿತು."

ಅಷ್ಟು ಹೊತ್ತಿಗೆ ನಾಗೇಶರಾಯರ ಕಡೆಯ ಮಗಳು ಸುಧಾ ಒಂದು ಸಣ್ಣ ಹೂಜಿ ತೆಗೆದುಕೊಂಡು ಬಂದಳು. ಶ್ರೀಧರ ಅದನ್ನು ತೆಗೆದುಕೊಂಡ.

"ಬಿಸಿನೀರು ಬೇಕಾಗಿದ್ರೆ ಕೊಡ್ತಾರಂತೆ ನಮ್ಮಮ್ಮ" ಎಂದಳು ಸುಧಾ.

"ಸ್ವಲ್ಪಬೇಕಮ್ಮ ತಂದುಕೊಡ್ತೀಯಾ" ಎಂದ ಅನಂತರಾಮಯ್ಯ.

"ಹ್ಞಾಂ............" ಎನ್ನುತ್ತಾ ಸುಧಾ ಛಂಗನೆ ಜಿಂಕೆಯ ಮರಿಯಂತೆ ಕೊಟಡಿಯಿಂದ ಓಟಕಿತ್ತಳು.

"ಎಷ್ಟು ಒಳ್ಳೆಯ ಹುಡುಗಿ. ಎಲ್ಲಾ ಅವರ ತಂದೆಯೇ ತದ್ರೂಪು" ಎಂದ ಶ್ರೀಧರ. ಸ್ವಲ್ಪ ಹೊತ್ತಿಗೆಲ್ಲಾ ಬೇರೊಂದು ಹೂಜಾದಲ್ಲಿ ಬಿಸಿ ನೀರನ್ನು ತಂದಳು ಸುಧಾ.

"ಇನ್ನೇನಾದ್ರೂ ಬೇಕಾಗಿದ್ರೆ ಹೇಳಿ, ತರ್ತೀನಿ" ಎನ್ನುತ್ತಾ ಬಿಚ್ಚಿ ಹೋಗಿದ್ದ ಹೆರಳನ್ನು ಹೆಣೆದುಕೊಳ್ಳತೊಡಗಿದಳು ಸುಧಾ.

"ಇನ್ನೇನೂ ಬೇಡಮ್ಮ" ಶ್ರೀಧರ ನುಡಿದ.

"ಹಾಗಾದ್ರೆ ಬರ್ತೀನಿ" ಸುಧಾ ಹೊರಟುಹೋಗುವುದರಲ್ಲಿದ್ದಳು.

"ಸ್ವಲ್ಪ ತಡೀಮ್ಮ, ಹೋಗುವಿಯಂತೆ" ಎಂದ ಅನಂತರಾಮಯ್ಯ. ಹುಡುಗಿ ನಿಂತುಕೊಂಡಳು. "ಅಲ್ಮಾರಿನಲ್ಲಿ ಬಿಸ್ಕತ್ತಿನ ಪೊಟ್ಟಣವಿದೆ. ಆ ಮಗೂ ಕೈಲಿ ನಾಲ್ಕು ಬಿಸ್ಕತ್ತು ಹಾಕಯ್ಯ ಶ್ರೀಧರ" ಎಂದ ಅನಂತ

ರಾವ್ಮೈಯ್ಯ. ಶ್ರೀಧರ ಹಾಗೆಯೇಮಾಡಿದ. ಹುಡುಗಿ ಸಂತೋಷದಿಂದ ಮನೆಯೊಳಕ್ಕೆ ಓಡಿದಳು.

"ಗಂಜೀ ಲೋಟಾದಲ್ಲಿ ಹಾಕಿಕೊಡಲೇ ಅನಂತರಾವ್ಮೈಯ್ಯ."

"ಗಂಜೀ ಬೇಡಯ್ಯ. ಸ್ವಲ್ಪ ಬಿಸಿನೀರು ಬಗ್ಗಿಸಿಕೊಡು. ಬಾಯೊಣಗಿಕೊಂಡು ಹೋಗಿದೆ. ಯಾಕೋ ಚಳಿಚಳಿಯಾಗ್ತಿದೆ. ಹೊಟ್ಟೆಯೆಲ್ಲಾ ತೊಳಸಿಕೊಂಡು ಬರ್ತಿದೆ."

"ಅದಕ್ಕೇಕಣಯ್ಯ ನಾನು ಹೇಳಿದ್ದು. ಷಾಪಿಗೆ ಹೋಗಿ ಔಷಧೀ ತರ್ತೀನೀಂತ. ಆ ಸಿಬೆಜಾಲ್ ಪಿಲ್ಲಿನಲ್ಲೇನಾದೀತು ಹೇಳು. ಈಗಲೂ ಮಿಾರಿಹೋಗಿಲ್ಲ. ಇನ್ನೂ ಒಂಭತ್ತು ಗಂಟೆ. ಇಲ್ಲೇ ಸೂರಡೀರಸ್ತೇಲೇ ಇಪಾರೆ ಡಾಕ್ಟ್ರು."

"ನಿನಗೆ ತೊಂದರೆಯಾಗುತ್ತೆ."

"ತೊಂದರೆಯೇನು ಬಂತಯ್ಯ. ನನ್ನಿಂದ ನಿನಗುಂಟಾಗಿರುವ ತೊಂದರೆಗಿಂತಲೇ."

ಶ್ರೀಧರ ಅನಂತರಾವ್ಮೈಯ್ಯನ ಪ್ರತ್ಯುತ್ತರಕ್ಕೆ ಕಾಯಲೇ ಇಲ್ಲ. ಕೈಲೊಂದು ಶೀಸೇ ಹಿಡಿದುಕೊಂಡು ಧನ್ವಂತರೀ ಔಷಧಾಲಯಕ್ಕೆ ಧಾವಿಸಿದ. ಡಾಕ್ಟರು ಷಾಪಿನಲ್ಲೇ ಇದ್ದರು. ಅನಂತರಾವ್ಮೈಯ್ಯನ ಸ್ಥಿತೀ ಹೇಳಿ ಮೂರು ಹೊತ್ತು ಔಷಧಿ ತೆಗೆದುಕೊಂಡು ನೆಟ್ಟಗೆ ರೂಮಿಗೆ ಬಂದ.

"ಇಷ್ಟು ಬೇಗ ಬಂದು ಬಿಟ್ಟೆಯಲ್ಲಯ್ಯ, ಡಾಕ್ಟರಿದ್ದರೆ ಷಾಪಿನಲ್ಲಿ."

"ಇದ್ದರು. ನಿನ್ನ ಕಂಡೀಷನ್ನೆಲ್ಲಾ ಹೇಳಿದೆ. ರಾತ್ರಿ ಎರಡು ಹೊತ್ತು ಔಷಧೀ ಕೊಡೀಂತ ಹೇಳಿದ್ದಾರೆ. ಜತೆಗೆ ಒಂದೆರಡು ಮಾತ್ರೇನೂ ಕೊಟ್ಟಿದ್ದಾರೆ."

"ಈಗ ತಾನೇ ಸ್ವಲ್ಪ ಗಂಜೀ ಕುಡಿದಿದ್ದೇನೆ. ಸ್ವಲ್ಪ ಹೊತ್ತುಬಿಟ್ಟು ಔಷಧಿ ತಗೊಳ್ತೇನೆ."

"ಹಾಗೇ ಮಾಡಯ್ಯ."

"ನೀನು ಊಟಕ್ಕೆ ಹೋಗೋಲ್ಲವೇ."

"ನನಗೇಕೋ ಹಸಿವಿಲ್ಲಕಣಯ್ಯ. ಸಾಯುಂಕಾಲ ತಿಂದ ತಿಂಡೀ ಹಾಗೇ ಕೂತಿದೆ ಹೊಟ್ಟೇಲಿ."

"ಒಂದು ತುತ್ತು ಊಟಮಾಡಿ ಬಾರಯ್ಯ ಶ್ರೀಧರ. ರಾತ್ರಿಹೊತ್ತು ಉಪವಾಸವೇಕೆ ಮಲಗ್ತೀಯ."

"ಸುತರಾಂ ಹಸಿವಿಲ್ಲ ಅನಂತರಾಮೈಯ್ಯ."

"ಸರಿ ನಿನ್ನಿಷ್ಟವಪ್ಪ. ನಿನ್ನನ್ನ ಹೆಚ್ಚಿಗೆ ಬಲವಂತಪಡಿಸೋಹಾಗಿಲ್ಲ."

"ಅದ್ಯೇಕಯ್ಯ ಹಾಗೇ ಹೇಳ್ತೀ !"

"ಹೌದು ನಿನ್ನ ಸ್ವಭಾವ ನನಗೆ ತಿಳೀದೇ. ಎರಡು ವರ್ಷಗಳಿಂದ ನಿನ್ನ ಜತೇಲಿದ್ದ ಮೇಲೆ ಅಷ್ಟೂ ತಿಳೀದಿದ್ದರೆ ಹೇಗೆ."

"ನೀನು ಮನಸ್ಸಿಗೆ ಬೇಜಾರು ಪಟ್ಕೊಳ್ಳೋಹಾಗಿದ್ದರೆ ಊಟಕ್ಕೆ ಹೋಗಿಬರ್ತೀನಯ್ಯಾ."

"ಹಾಗೆ ಬಾ ದಾರೀಗೆ. ಬೇಗಹೋಗು. ಆಗಲೇ ಒಂಭತ್ತು ಹೊಡೆದು ಹೋಯಿತು."

ಶ್ರೀಧರ ಭುಜದಮೇಲೊಂದು ಟವಲ್ಲು ಹಾಕಿಕೊಂಡು ರೂಮು ಬಾಗಿಲು ಸ್ವಲ್ಪ ವಾರೆಮಾಡಿಕೊಂಡು ಹೊರಟ. 'ಉಶ್ಯಪ್ಪಾ' ಎನ್ನುತ್ತಾ ಅನಂತರಾಮೈಯ್ಯ ಪಕ್ಕಕ್ಕೆ ತಿರುಗಿ ಮಲಗಿಕೊಂಡ.

## ೧೦

ಮರುದಿನ ಬೆಳಿಗ್ಗೆ ಅಷ್ಟು ಹೊತ್ತಿಗೇ ಎದ್ದುಬಿಟ್ಟ ಶ್ರೀಧರ. ಅನಂತ ರಾಮೈಯ್ಯ ಇನ್ನೂ ಮಲಗಿದ್ದ. ರಾತ್ರಿಯೆಲ್ಲಾ ಜ್ವರದತಾಪದಿಂದ ನರಳಿ ಬಹಳ ದಣಿದಿದ್ದ. ಬೆಳಗಿನ ಜಾವದಲ್ಲಿ ಅವನಿಗೆ ಜೊಂಪು ಹತ್ತಿತ್ತು. ಶ್ರೀಧರ ನೆಟ್ಟಗೆ ಹೆಲ್ತ್ ಕಿಚನ್ನಿಗೆ ಹೋಗಿ ತನ್ನ ಸ್ನಾನ ಮುಂತಾದ ಪ್ರಾತ ರ್ವಿಧಿಗಳನ್ನು ತೀರಿಸಿಕೊಂಡ. ಅವನು ಲೌಂಜಿನಲ್ಲಿ ಬಂದು ಕೂತಾಗ ಆಗತಾನೇ ಸೂರ್ಯೋದಯವಾಗುತ್ತಿತ್ತು. ಬಾಲರವಿಯು ಮೂಡು ದೆಸೆಯಂಚಿನಿಂದ ಮೆಲ್ಲ ಮೆಲ್ಲನೇರಿ ಬರುತ್ತಿದ್ದ. ಅವನ ಸುತ್ತ ಹರಡಿದ್ದ ಕೆಂಬಣ್ಣ ಬಹಳ ಮೋಹಕವಾಗಿತ್ತು. ಸ್ವಲ್ಪ ಹೊತ್ತಿಗೆಲ್ಲಾ ಅರುಣೋ ದಯದ ಕೆಂಪು ಮಾಸಿಹೋಗಿ ಅದರ ಜಾಗದಲ್ಲಿ ಹೊನ್ನಿನ ಹೊನಲು ಹರಿಯ ತೊಡಗಿತು. ಅದರಲ್ಲಿ ಮಿಂದೆದ್ದ ದಿವಾಕರನು ಬಂಗಾ ರದ ಚೆಂಡಿನಂತೆ ಥಳಥಳಿಸುತ್ತಿದ್ದ. ತನ್ನ ಸುತ್ತಣ ಪ್ರಕೃತಿಯಲ್ಲಿದ್ದ

ನವಚೈತನ್ಯ—ಅದೊಂದು ಬಗೆಯ ನಾವೀನ್ಯತೆ ಶ್ರೀಧರನ ಹೃದಯವನ್ನು ಅರಳಿಸಿತು. ಕೂಡಲೇ ಕವಿ 'ಕುವೆಂಪು' ಅವರ 'ಇಂತಹ ಸುಂದರ ಪ್ರಾತಃ ಕಾಲದಿ" ಎಂಬ ಕವಿತೆಯೊಂದು ಅವನ ಸ್ಮರಣೆಗೆ ಬಂತು. ಅದನ್ನು ತನ್ನಲ್ಲಿಯೇ ಮೆಲುದನಿಯಲ್ಲಿ ಗುಣಿಗುಣಿಸತೊಡಗಿದ.

ಅಷ್ಟುಹೊತ್ತಿಗೆ ಮಾಣಿಯೊಬ್ಬ ಎರಡಿಡ್ಲೀಬೆಣ್ಣೆ, ಒಂದು ಲೋಟಾ ನೀರು ಅವನ ಮುಂದೆ ತಂದಿಟ್ಟು ಹೋದ. ಶ್ರೀಧರ ಉಪಹಾರವನ್ನು ಸ್ವೀಕರಿಸಿ ಕಾಫಿಕುಡಿದು ಎದ್ದ. ನೆಟ್ಟಗೆ ರೂಮಿಗೆ ಹೋದ. ಅನಂತ ರಾಮೈಯ್ಯ ಪಿಳಪಿಳನೆ ಕಣ್ಣುಬಿಟ್ಟುಕೊಂಡು ಹಾಸಿಗೆಯಲ್ಲೇ ಮಲಗಿದ್ದ. ಶ್ರೀಧರನನ್ನು ನೋಡಿ ಅವನಿಗಾಶ್ಚರ್ಯವಾಯಿತು.

"ಆಗಲೇ ಕಾಫೀಕುಡಿದು ಬಂದುಬಿಟ್ಟೆಯಾ ಶ್ರೀಧರಾ."

"ಹ್ಞೂ. ಈವತ್ತು ಬೇಗ ಎಚ್ಚರವಾಗಿಹೋಯಿತು. ಏನು ಮಾಡೋಕ್ಕೂ ತೋಚಲಿಲ್ಲ. ಹೋಗಿ ಸ್ನಾನ, ತಿಂಡಿ ಕಾಫಿ ಮುಗಿಸಿ ಕೊಂಡು ಬಂದೆ. ಈಗ ನಿನ್ನಪಾಡೇನು ಹೇಳು."

"ನನ್ನಪಾಡೇನು. ಈಗ ಜ್ವರ ಇಳಿದಿರೋ ಹಾಗೆ ಕಾಣುತ್ತೆ. ಮನೇವರನ್ನ ಕೇಳಿ ಒಂದಿಷ್ಟು ಬಿಸಿನೀರು ತೆಗೆದುಕೊಂಡು ಬಾ. ಮೊದಲು ಮುಖಾತೊಳೆದುಕೊಳ್ತೀನೆ. ನಿನ್ನೆ ಒಂದು ದಿನ ರಾತ್ರಿ ಜ್ವರ ಹೊಡೆ ದಿದ್ದಕ್ಕೇ ಬಾಯೆಲ್ಲಾ ದುರ್ವಾಸನೆ ಬಡೀತಿದೆ."

ಶ್ರೀಧರ ಹೋಗಿ ಒಂದು ಚೆಂಬಿನಲ್ಲಿ ಬಿಸಿನೀರು, ಒಂದಿಷ್ಟು ಹಲ್ಲು ಪುಡಿ ತಂದ. ಅನಂತರಾಮೈಯ್ಯ ಮುಖತೊಳೆದುಕೊಂಡು ಬಂದ. ಅಷ್ಟು ಹೊತ್ತಿಗೆ ನಾಗೇಶರಾಯರು ಒಂದು ಲೋಟಾದಲ್ಲಿ ಕಾಫಿ ಹಿಡಿದು ಕೊಂಡು ಬಂದರು. "ನೀವ್ಯಾಕೆ ತಂದ್ರೀಸಾರ್ ಕಾಫೀ, ನಾನು ಹೋಟ ಲಿಂದ ತರಿಸುತ್ತಿದ್ದೆನಲ್ಲಾ." ಬಹಳ ಸಂಕೋಚದಿಂದ ನುಡಿದ ಅನಂತ ರಾಮೈಯ್ಯ.

"ಪರವಾಗಿಲ್ಲ ತಗೊಳ್ಳಿ. ಏನೋ ಸಮಯಾಂದ್ರೆ ಅಷ್ಟೂ ಬೇಡವೇ. ದಿನವೂ ಹೋಟೆಲಿಗೆ ಹೋಗ್ಗೋದು ಇದ್ದೇಇದೆ." ಎಂದರು ನಾಗೇಶ ರಾಯರು.

ಅನಂತರಾಮೈಯ್ಯ ನಿರ್ವಾಹವಿಲ್ಲದೆ ಕಾಫಿಕುಡಿದ. ಪುನಃ ಏನೋ ಜ್ಞಾಪಿಸಿಕೊಂಡು ಹೇಳಿದ. "ನಿಮಗೊಂದು ಸಂತೋಷದ ಸುದ್ದೀ ಹೇಳಲೇಇಲ್ಲ ನಾಗೇಶರಾಯರೇ. ನಮ್ಮ ಶ್ರೀಧರನಿಗೆ ಅವನು ಬರೆದ ಪದ್ಯಕ್ಕೆ ಗೋಲ್ಡ್‌ಮೆಡಲೊಂದು ಬಹುಮಾನ ಬಂದಿದೆ."

"ಹೌದೇನು ! ಬಹಳ ಸಂತೋಷ. ನನಗೆ ಗೊತ್ತೇಇಲ್ಲವಲ್ಲಾ !"

"ನಿನ್ನೆ ಸಾಯಂಕಾಲ ತಾನೇ ತಿಳೀತು. ಮುಖ್ಯ ಅವನ ಭಾಗಕ್ಕೆ ದೇವರಿದ್ದಾನೆ. ಏನೋ ಬಡಹುಡುಗ. ಮನೇಸ್ಥಿತಿ ಅನುಕೂಲವಾಗಿಲ್ಲ. ಬುದ್ಧಿವಂತ. ಓದಿ ಮುಂದಕ್ಕೆ ಬಂದರೆ ಅವರ ಕುಟುಂಬಕ್ಕೊಂದು ಊರುಗೋಲಾಗಿ ನಿಲ್ತಾನೆ."

"ಹೌದು. ಅದರಲ್ಲೇನೂ ಅನುಮಾನವಿಲ್ಲ. ಮುಖ್ಯ ನಿಮ್ಮ ಸಹಾಯ ಅವನಿಗೆ ಬಹಳ. ನೀವು ನಮ್ಮನೇಗೆ ಬಂದಾಗಿನಿಂದಲೂ ನೋಡ್ತಿದೇನಲ್ಲಾ ನಿಮ್ಮಿಬ್ಬರ ಸ್ನೇಹ ಬಹಳ ಅಪೂರ್ವವಾದ್ದು. ಒಬ್ಬರಿಗೊಬ್ಬರು ಅದೆಷ್ಟು ಅನ್ಯೋನ್ಯವಾಗಿದ್ದೀರಿ ಏನುಕತೆ ! ಒಡಹುಟ್ಟಿದ ಅಣ್ಣ ತಮ್ಮಂದಿರೂ ಇಷ್ಟುಮಟ್ಟಿಗಿರೋಲ್ಲ ಈ ಕಾಲದಲ್ಲಿ. ದಾಯಾದಿಮತ್ಸರಾ ಸಾಧಿಸ್ತ ಇರುತ್ತಾರೆ. ಕಾಲಸ್ಥಿತಿ ಹೀಗಿರೋವಾಗ ನಿಮ್ಮಿಬ್ಬರನ್ನ ನೋಡಿದರೆ ನನಗೆ ತುಂಬಾ ಸಂತೋಷವಾಗುತ್ತೆ. ನಾನಿನ್ನು ಬರ್‍ತೇನೆ ರಾಯರೇ. ಸ್ವಲ್ಪ ಪೇಟೇಕಡೆಹೋಗಿ ಬರಬೇಕು." ನಾಗೇಶರಾಯರು ಹೊರಟು ಹೋದರು.

ಅನಂತರಾಮೈಯ್ಯ ಮುಖಕ್ಷೌರಮಾಡಿಕೊಳ್ಳಲು ಅಣಿಮಾಡ ತೊಡಗಿದ. ಕನ್ನಡಿಯ ಮುಂದೆ ಕೂತು ಗಡ್ಡಕ್ಕೆ ಸೋಪು ತಿಕ್ಕುತ್ತಿದ್ದಾಗ ಶ್ರೀಧರ ಮೆಲ್ಲನೆ ಅವನ ಪಕ್ಕದಲ್ಲಿ ಬಂದು ಕೂತ.

"ಈವತ್ತು ಮಧ್ಯಾಹ್ನ ಒಂದು ಪಾರ್ಟಿಯಿದೆಕಣಯ್ಯ. ನೀನೂ ಬರಬೇಕು."

"ಅದೆಂಥಾ ಪಾರ್ಟಿಯಯ್ಯಾ ನಿನ್ನದು. ಏನು ರಾಜಕೀಯದ ಗಾಳಿ ನಿನಗೂ ಬೀಸಿತೋ ! ಈ ಹುಚ್ಚು ಯಾವಾಗಿಂದ ! ಯಾವ ಪಾರ್ಟೀ ಕಟ್ಟಬೇಕೆಂದಿದ್ದೀಯ !"

'ಸದ್ಯ ರಾಜಕೀಯದ ಗೀಳು ನನಗೆ ಹಿಡಿದಿಲ್ಲಾ ಪುಣ್ಯಾತ್ಮಾ. ಸದ್ಯ ಯಾವ ಪಾರ್ಟಿಕಟ್ಟೋಕೂ ನಾನು ನಿಂತಿಲ್ಲ. ನಾನು ಹೇಳಿದ್ದು ಟೀಪಾರ್ಟಿ. ಈವತ್ತು ಮಧ್ಯಾಹ್ನ ನನಗೊಂದು ಸತ್ಕಾರಕೂಟವೇರ್ಪಟ್ಟಿದೆ. ಅದರ ಮಾನ್ಯ ಅತಿಥಿಗಳ ಪೈಕಿ ನೀನೂ ಒಬ್ಬ. ಖಂಡಿತ ಬರಬೇಕು.'

"ಎಲ್ಲಯ್ಯಾ ಪಾರ್ಟಿ! ಕಾಲೇಜಲ್ಲೋ ಅಥವಾ ನಿಮ್ಮ ಕರ್ಣಾಟಕ ಸಂಘದಲ್ಲೋ."

"ಅಲ್ಲೆಲ್ಲಾ ಅಲ್ಲಯ್ಯ. ಸರಸ್ವತೀಪುರದಲ್ಲಿ."

"ಸರಸ್ವತೀಪುರದಲ್ಲಿ! ಅಲ್ಯಾರಿದ್ದಾರಯ್ಯಾ ನಿನ್ನ ಬಳಗ!"

"ಅದೇ ನನಗೂ ಗೊತ್ತಿಲ್ಲಯ್ಯ. ಈವತ್ತು ಮಧ್ಯಾಹ್ನ ನೋಡ ಬೇಕು."

"ಒಳ್ಳೇ ಚೆನ್ನಾಗಿದೆಯಯ್ಯಾ ನೀನು ಹೇಳೋದು. ಹೋಸ್ಟು ಯಾರೂಂತ ತಿಳೀದೆ ಅದೆಂತಹ ಘೋಸ್ಟು ಅಲ್ಲಾ ಗೆಸ್ಟಯ್ಯಾ ನೀನು!"

ಹೋಸ್ಟೆಸ್ ಯಾರೂಂತ ಗೊತ್ತಿದೆಯಯ್ಯ. ಇಗೋ' ಎನ್ನುತ್ತಾ ಶ್ರೀಧರ ಹಿಂದಿನ ದಿನ ತಿಮ್ಮಯ್ಯ ತನಗೆ ತಂದುಕೊಟ್ಟಿದ್ದ ಪತ್ರವನ್ನು ತನ್ನ ಗೆಳೆಯನ ಮುಂದೆ ಹಿಡಿದ. ಅನಂತರಾಮೈಯ್ಯ ಅತ್ಯಾಶ್ಚರ್ಯದಿಂದ ಅದನ್ನು ಕಸಿದುಕೊಂಡು ಓದತೊಡಗಿದ. ಓದುತ್ತಿದ್ದ ಹಾಗೆಯೇ ಅವನ ಮುಖ ಆಶ್ಚರ್ಯದಿಂದ ಅರಳಿಬಿಟ್ಟಿತು. "ಓ ಮೈ ಗಾಡ್! ಇವರೆಲ್ಲಯ್ಯಾ ನಿನಗೆ ಗಂಟುಬಿದ್ರು ಈ ಕಿರಾತಕೀರು!" ಎಂಬ ಉದ್ಗಾರ ಅವನಿಂದ ಹೊರಬಿತ್ತು.

"ಆಯಾಮ್ ರಿಯಲಿ ಸಾರೀ ಅನಂತರಾಮೈಯ್ಯ! ನಿನ್ನ ಬಾಯಲ್ಲಿ ಇಂತಹ ಮಾತುಗಳು ಬರುತ್ತೇಂತ ನಾನು ತಿಳಿದಿರಲಿಲ್ಲ. ಅವರೇನು ಕಿರಾತಕೀರಲ್ಲ. ಅವರೂ ನಮ್ಮಹಾಗೇ ಮನುಷ್ಯರು. ಅವರಿಗೂ ನಮ್ಮ ಹಾಗೆಯೇ ಹೃದಯವಿದೆ; ಬುದ್ಧಿಯಿದೆ. ದೇವರು ನಮಗೆ ಕೊಟ್ಟಿರೋ ಹಾಗೇ ಅವರಿಗೂ ಎಲ್ಲಾ ಶಕ್ತಿಗಳನ್ನೂ ದಯಪಾಲಿಸಿದ್ದಾನೆ. ಬುದ್ಧಿ, ವಿದ್ಯೆ, ಸಂಸ್ಕೃತಿ, ಇವು ಕೇವಲ ಗಂಡಸಿನ ಸೊತ್ತು ಮಾತ್ರವಲ್ಲ. Culture is not the monopoly of man only! ಅವುಗಳಲ್ಲಿ ಹೆಣ್ಣಿಗೂ ಸಮಪಾಲಿದೆ. ಆದರೆ ಈ ಸಮಾನತೆಯನ್ನು ಈ ಸ್ವಾತಂತ್ರ್ಯವನ್ನು ಅವರಿಗೆ ಕೊಡಲಿಚ್ಛಿಸದೆ ಅವರನ್ನು ಅಧಃಪಾತಾಳಕ್ಕೆ ತಳ್ಳಿಬಿಟ್ಟಿದ್ದೇವೆ

ಅಷ್ಟೆ. ತಾನು ಸುಸಂಸ್ಕೃತನೆಂಬ ಸೋಗುಹಾಕಿಕೊಂಡು ತಿರುಗುತ್ತಿರುವ ಈ ಮನುಷ್ಯನ ಸ್ವಾರ್ಥಪಿಶಾಚವೇ ಈ ವಿಪರ್ಯಾಸಕ್ಕೆ ಮುಖ್ಯ ಕಾರಣ."

"ಎಕ್ಸ್‌ಕ್ಯೂಸ್‌ಮಿ ಶ್ರೀಧರ್. ಏಕೋ ಬಾಯಿತಪ್ಪಿ ಬಂದು ಬಿಡ್ತಯ್ಯ. ಅದನ್ನಿಷ್ಟು ಸೀರಿಯಸ್ಸಾಗಿ ತಗೊಳ್ತೀಯಂತ ನಾನೆಣಿ ಸಿರಲಿಲ್ಲ."

"ಸೀರಿಯಸ್ಸೇನು ಬಂತಯ್ಯಾ ಇದ್ರಲ್ಲಿ! ಕಾಲೇಜುಗಳಲ್ಲಿ ಓದು ತ್ತಿರುವ, ಮುಂದೆ ಪದವೀಧರರೆನಿಸಿಕೊಂಡು ಸಮಾಜದಲ್ಲಿ ಗಣ್ಯವ್ಯಕ್ತಿ ಗಳೆಂದು ತಲೆಯೆತ್ತಿಕೊಂಡು ತಿರುಗಬೇಕೆಂದಿರುವ ನಾವೇ ಆ ಹೆಣ್ಣು ಮಕ್ಕಳ ವಿಷಯದಲ್ಲಿ ಇಷ್ಟು ತಾತ್ಸಾರ ಭಾವನೆ ಹೊಂದಿದ್ದರೆ—ಅವರ ಬಗ್ಗೆ ಇಷ್ಟು ಲಾಘವವಾಗಿ ಮಾತಾಡಹತ್ತಿದರೆ, ಇನ್ನು "ಇಲ್ಲಿಟರೇಟ್ಸ್," "ಅನ್‌ಎಜ್ಯುಕೇಟೆಡ್" ಅಂತನ್ನಿಸಿಕೊಂಡಿರೋ ಕೋಟ್ಯಾನುಕೋಟಿ ಜನರ ಪಾಡೇನು ಹೇಳು!! ಹೆಣ್ಣು ಮಕ್ಕಳಮೇಲೆ ಈ ರೀತಿ ವಕ್ರದೃಷ್ಟಿ ಬೀರಿ ಇಡೀ ಸ್ತ್ರೀಜಾತಿಗೇ ಅಪಮಾನಕರವಾದ ರೀತಿಯಲ್ಲಿ ನಾವು ವರ್ತಿಸಿ ದರೆ, ಅವರಿನ್ನು ಹೆಂಗಸರ ಬಗ್ಗೆ ಹೇಗೆತಾನೇ ನಡೆದುಕೊಂಡಾರೆಂಬುದನ್ನು ನೀನೇ ಯೋಚಿಸಿ ನೋಡು. ಅದಕ್ಕೇ ನೋಡು ನಮ್ಮ ಸಮಾಜ ಇಷ್ಟು ಹೀನಸ್ಥಿತಿಯಲ್ಲಿರೋದು: ಸಮಾಜ ರಥಕ್ಕೆ ಗಂಡು ಹೆಣ್ಣುಗಳೆರಡೂ ಎರಡು ಚಕ್ರಗಳಿದ್ದ ಹಾಗೆ! ಎತ್ತು ಏರಿಗೆಳೀತು, ಕೋಣ ನೀರಿಗೆಳೀತು. ಅನ್ನೋಹಾಗೆ ಇವೆರಡರಲ್ಲಿ ಯಾವ ಚಕ್ರ ದಾರಿತಪ್ಪಿದರೂ ಅಪಘಾತ ಖಂಡಿತ. ಸಮಾಜ ಮುಂದುವರಿಯಬೇಕಾದರೆ ಹೆಣ್ಣುಗಂಡುಗಳೆರಡೂ ಸರಿಸಮವಾಗಿ ಸಹಕರಿಸಬೇಕು. ಸಮಾಜದ ಎಲ್ಲ ಕಾರ್ಯಕ್ಷೇತ್ರಗಳಲ್ಲೂ ಅವರಿಬ್ಬರೂ ಸಮಪಾಲು ತೆಗೆದುಕೊಳ್ಳಬೇಕು. ಅವರಿಬ್ಬರ ಸಹಕಾರ, ಸಮಾಲೋಚನೆ, ಸಮದರ್ಶಿತ್ವದಿಂದಲೇ ಒಂದು ಸಮಾಜ 'ಸಮಾಜ' ವೆನಿಸಿಕೊಳ್ಳುವುದಾದರೂ."

ಅನಂತರಾಮೈಯ್ಯ ಉಸಿರೆತ್ತುವ ಹಾಗಿರಲಿಲ್ಲ. ಸದ್ಯ ಈ ಪುಣ್ಯಾತ್ಮನ ಮಾತಿಗೇಕೆ ಹೋದನೋ ನಾನು ಸುಮ್ಮನಿರಲಾರದೆ ಈವತ್ತು ಎಂದು ಕೊಂಡ ಮನಸ್ಸಿನಲ್ಲಿ. ಕಡೆಗೆ ಬಿಸಿಯೇರಿದ್ದ ವಾತಾವರಣವನ್ನು ತಿಳಿಯಾ ಗಿಸಬೇಕೆಂದು ಯೋಚಿಸಿ "ಹೋಗಲೀ. ಪ್ಲೀಸ್ ಡ್ರಾಪ್ ದಟ್ ಮ್ಯಾಟರ್

ಶ್ರೀಧರ್. ಮಧ್ಯಾಹ್ನದ ಟೀಪಾರ್ಟಿ ವಿಷಯ ಮಾತಾಡಯ್ಯ" ಎಂದ. ಶ್ರೀಧರನಿಗೆ ನಗು ಬಂತು ತನ್ನ ಸ್ನೇಹಿತನ ದೈನಾಸವನ್ನು ನೋಡಿ. "ಅದೇ ಹೇಳೋಕ್ಕೆ ಬಂದೆ ನಾನು. ಅಷ್ಟರಲ್ಲಿ ನಿನ್ನ ವಕ್ರಬುದ್ಧಿ ತೆಗೆದುಬಿಟ್ಟೆಯಲ್ಲ" ಎಂದ ಶ್ರೀಧರ ನಗುತ್ತಾ.

ಹೋಗಲಿ ಬಿಡಯ್ಯ. ಪ್ಲೀಸ್ ಫರ್‌ಗೆಟ್ ಇಟ್. ಆ ಕಾಗದಕ್ಕೆ ಅಷ್ಟು ಜನ ಸಹಿ ಹಾಕಿದ್ದಾರಲ್ಲಾ. ಅವರೆಲ್ಲಾ ಸೀನಿಯರ್ ಬಿ. ಎ. ಸ್ಟೂಡೆಂಟ್ಸೇನೋ".

"ಅದ್ಯಾರಾರು ಸಹಿ ಹಾಕಿದ್ದಾರೋ ನಾನು ಸರಿಯಾಗಿ ನೋಡ್ಲಿಲ್ಲ ಕಣಯ್ಯ. ಅಂತೂ ಆಹ್ವಾನ ಬಂದಿದೆ. ಹೋಗಬಹುದೋ ಇಲ್ಲವೋ ಎಂಬುದನ್ನೀಗ ಇತ್ಯರ್ಥಮಾಡಬೇಕಾಗಿದೆ."

"ಹಾಗೆಂದರೇನಯ್ಯ. ಅಗತ್ಯವಾಗಿ ಹೋಗಲೇಬೇಕು. ಇಷ್ಟು ಹೊತ್ತೂ ನಿನ್ನ ಲೆಕ್ಚರ್ ಕೇಳಿದಮೇಲೆ ಹೋಗೋದು ಬೇಡಾಂತ ಹೇಳೋಕ್ಕೆ ನನಗೆ ಬಾಯಿ ಬರುತ್ತೇನಯ್ಯಾ."

"ಭೇಷ್. ನಾನು ಲೆಕ್ಚರ್ ಕೊಟ್ಟಿದ್ದಕ್ಕೆ ಸಾರ್ಥಕವಾಯಿತಯ್ಯ. ಅಷ್ಟುಮಾತ್ರ ರಿಯಲೈಸೇಷನ್ ನಮ್ಮ ಕಾಲೇಜಿನಲ್ಲಿರೋ ಹುಡುಗರಿಗೆಲ್ಲಾ ಬಂದುಬಿಟ್ರೆ ನಾವೆಷ್ಟೋ ಉದ್ಧಾರವಾಗಿಬಿಡ್ತೇವೆ."

"ಕಾಲೇಜ್ ಯೂನಿಯನ್ನಿನ ಆಶ್ರಯದಲ್ಲಿ ಒಂದು ಲೆಕ್ಚರ್ ಬೇಕಾದರೆ ಇಡಿಸೋಣಯ್ಯ. "Present day College Students and their behaviour" ಎಂಬ ಸಬ್ಜೆಕ್ಟಿನ ಮೇಲೆ ಮಾತಾಡು. ಚೆನ್ನಾಗಿರುತ್ತೆ."

"ಏನು ಸೀರಿಯಸ್ಸಾಗಿ ಹೇಳ್ತಿದೀಯಾ ಅನಂತರಾಮೈಯ್ಯ!"

"ಹೌದಯ್ಯ. ಇನ್ನುಮೇಲೆ ನಿನ್ಹತ್ರ ತಮಾಷೆ ಮಾಡೋಲ್ಲಪ್ಪ. ಗ್ರಹಚಾರ ಬಿಡಿಸಿಬಿಡ್ತೀಯ."

"ಇಲ್ಲಯ್ಯ. ನಿನಗೊಬ್ಬನಿಗೇ ಅಲ್ಲ ನಾನು ಹೇಳಿದ್ದು. ನಮ್ಮ ಕಾಲೇಜು ಹುಡುಗರೆಲ್ಲರಿಗೂ ಅನ್ವಯಿಸುತ್ತೆ ಈ ಮಾತು. ಆ ಹೆಣ್ಣು

ಹುಡುಗಿಯರ ಬಗ್ಗೆ ನಮ್ಮ ಕಾಲೇಜು ಹುಡುಗರು ತಳೆದಿರುವ ಮನೋಭಾವನೆ, ಅವರ ಅಸಭ್ಯ ವರ್ತನೆ, ಹೊಲಸು ಮಾತುಗಳು, ಅವರ ಪೊಳ್ಳು ಷೋಕಿಗಳು—ಇವೆಲ್ಲಾ ನೆನೆಸಿಕೊಂಡರೆ ನನ್ನ ಮೈ ಉರಿದು ಹೋಗುತ್ತೆ. ಇವರಿಗೆಲ್ಲಾ ಒಂದು ದಿನ ಗ್ರಹಚಾರ ಬಿಡಿಸಿಬಿಡ್ತೀನಿ. ಇಷ್ಟರಲ್ಲೇ."

"ಬಿಡಿಸಿದರೂ ಬಿಡ್ಸೀಯಪ್ಪಾ ನೀನು! ನಿನಗಾಸಾಮರ್ಥ್ಯವಿದೆ!! ಯು ಆರ್ ರಿಯಲೀ ಕೇಪಬಲ್ ಆಫ್ ಇಟ್! ಅದು ಹೋಗ್ಲಿ. ಮಧ್ಯಾಹ್ನ ಎಷ್ಟೊತ್ತಿಗೆ ಹೊರಡೋದೂಂತ ಏರ್ಪಾಡು?"

"ಮೂರು ಗಂಟೆಗೇಂತ ತಿಳಿಸಿದ್ದಾರಲ್ಲ."

"ಸರಿ ಹಾಗಾದರೆ. ಈವತ್ತು ನೀನು ಮುಖ್ಯ ಅತಿಥಿ. ಅದರಲ್ಲೂ ಕವಿಯಾಗಿ ಆಹ್ವಾನಿತನಾಗಿದ್ದೀಯ! ಆದ್ದರಿಂದ ಸ್ವಲ್ಪ ನೀಟಾಗಿ ಡ್ರೆಸ್ ಮಾಡ್ಕೊಂಡು ಹೋಗಬೇಕು. ಸಮ್ಮರ್ ಸೀಸನ್ನಿಗೇಂತ ಹೊಲಿಸಿರೋ ನನ್ನ ಮಲ್ ಜುಬ್ಬಾ ಇದೆ. ನಿನ್ನೆತಾನೇ ಅಗಸಾ ಒಟ್ಟೀ ಕೊಟ್ಟು ಹೋಗಿದ್ದಾನೆ. ಸೊಗಸಾಗಿ ಇಸ್ತ್ರಿ ಮಾಡಿರುವ ಫಿನ್ಲೇ ಪಂಚೇ ಕೊಡ್ತೇನೆ. ಕಚ್ಚೇ ಹಾಕಿ ಉಟ್ಕೋ. ನೀನು ಹ್ಯಾಗಿದ್ದರೂ ಫಿಸಿಕಲ್ ಕಲ್ಚರಿಸ್ಟ್ ತಾನೇ. ನಿನ್ನ ಸ್ಯಾಂಡೋ ಬನಿಯನ್ ಇದ್ದೇ ಇದೆ. ಮಲ್ ಜುಬ್ಬಾ ಹಾಕ್ಕೊಂಡು, ಕಚ್ಚೇ ಪಂಚೇ ಉಟ್ಕೊಂಡು, ಕ್ರಾಪು ಬಾಚಿಕೊಂಡು ನೀಟಾಗಿ ಹೊರಟರೆ ನಿನ್ನನ್ನು ನೋಡಿ ದಂಗಾಗಿಬಿಡ್ತಾರೆ ಆ ಹುಡುಗೀರು."

"ಸಾಕಯ್ಯ ನಿನ್ನ ಹಾಸ್ಯ. ಸ್ವಲ್ಪ ಪುರುಸತ್ತುಕೊಡು. ಒಂದು ನಾಲ್ಕು ಮಾತು ಗುರುತುಹಾಕ್ಕೊಳ್ತೀನಿ. ಎಕ್ಸ್‌ಟೆಂಪೋರಾಗಿ ಎಷ್ಟೋ ಸಲ ಮಾತಾಡಿದ್ದೇನೆ. ಆದರೆ ಈವತ್ತು ಒಂದು ವಿಶೇಷ. ಎಲ್ಲಾ ಫೀಮೇಲ್ ಆಡಿಯನ್ಸ್! ಏನಾದರೂ ಸಭಾಕಂಪ, ಗಿಭಾಕಂಪವಾದೀತೇನೋಂತ ಭಯ"

"ನಾನ್ಸೆನ್ಸ್. ನಿನಗೆಂಥಾ ಸಭಾಕಂಪವಯ್ಯ! ಪ್ಲಾಟ್‌ಫಾರಮ್ಮಿನ ಮೇಲೆ ನಿಂತಕೂಡಲೇ ಗಂಗಾವತರಣದಂತೆ ನಿರರ್ಗಳವಾಗಿ ಹರಿಯುತ್ತೆ ನಿನ್ನ ವಾಗ್ಝರಿ! ಸಾವಿರಾರು ಆಡಿಯನ್ಸನ್ನು ಫೇಸ್ ಮಾಡಿದ್ದೀಯ. ನಿನಗ್ಯಾವಾಗಲೋ ಆ ಛಳೀ ಬಿಟ್ಟುಹೋಗಿದೆ. ನಿನಗೇನಯ್ಯಾ ಧಾಡಿ."

" ಅದೆಲ್ಲಾ ಸರಿಯೇ ಅನಂತರಾಮೈಯ್ಯ. ಹೆಂಗಸರೆಂದರೆ ನನಗೆ ಸಂಕೋಚ ಜಾಸ್ತಿ. ಅವರ ಮುಂದೆ ಎದ್ದುನಿಂತಾಗ ಬಾಯಲ್ಲಿ ಮಾತು ಹೊರಡುತ್ತೋ ಇಲ್ಲೋಂತ ಅನುಮಾನ."

" ಯು ಆರ್ ಎ ವಂಡರ್‌ಫುಲ್ ಮ್ಯಾನ್ ಐಸೇ ! ನಿನ್ನ ಸಂದೇಹ ನಿವೃತ್ತಿ ಮಾಡೋಕ್ಕೆ ಆ ಬ್ರಹ್ಮನಿಂದಲೂ ಸಾಧ್ಯವಿಲ್ಲಪ್ಪ ! ಇನ್ನು ನನ್ನ ಪಾಡೇನು ! "

" ಹೋಗಲೀ ಬಿಡಯ್ಯ. ಏನೇನಾಗಬೇಕೆಂದಿದೆಯೋ ಆಗಿಹೋಗಲಿ. ಈಗಿಂದ ಏಕದರಯೋಚ್ನೆ."

ಶ್ರೀಧರ ಟೇಬಲ್ಲಿನಮುಂದೆ ಕೂತು ಏನನ್ನೋ ಕುರುಕತೊಡಗಿದ. ಅನಂತರಾಮೈಯ್ಯ ತನ್ನ ಮುಖಕ್ಷೌರ ಮುಂದುವರಿಸಿದ. ಶ್ರೀಧರನ ಬರವಣಿಗೆ ಮುಗಿಯುವ ಹೊತ್ತಿಗೆ ಅನಂತರಾಮೈಯ್ಯನ ಮುಖಕ್ಷೌರ ಪೂರೈಸಿತು. " ಗಂಟೇ ಎಷ್ಟಯ್ಯಾ " ಎಂದು ಕೇಳಿದ ಶ್ರೀಧರ.

" ಹನ್ನೊಂದೂವರೆ ಗಂಟೆ." ಅನಂತರಾಮೈಯ್ಯ ತನ್ನ ಕೈಗಡಿಯಾರದ ಕಡೆ ನೋಡುತ್ತಾ ಹೇಳಿದ.

" ಹಾಗಾದರೆ ನಡೀ. ಹೋಗಿ ಊಟಾ ಮಾಡಿಕೊಂಡು ಬರೋಣ."

" ಅಗತ್ಯವಾಗಿ ಆಗಬಹುದು."

ಗೆಳೆಯರಿಬ್ಬರೂ ಭುಜಗಳಮೇಲೆ ಟವಲ್ಲು ಹಾಕಿಕೊಂಡು ಕಾಲೇಜಿನ ಕಡೆ ಕಾಲುಹಾಕಿದರು.

## ೧೧

ಮಧ್ಯಾಹ್ನ ಮೂರೂವರೆ ಗಂಟೆಯಾಗಿತ್ತು. ಬಿಸಿಲು ಜಾಸ್ತಿಯಾಗಿತ್ತು. ಗೆಳೆಯರಿಬ್ಬರೂ ಸರಸ್ವತೀಪುರದಲ್ಲಿರುವ ಬಂಗಲೆಯೊಂದರ ಮುಂದೆ ನಿಂತರು. ಶ್ರೀಧರ ಮನೆಯ ಮುಂದೆ ಬರೆದಿರುವ 'ಬೃಂದಾವನ' ಎಂಬುದನ್ನು ಓದಿಕೊಂಡ. ಅದೇ ಮನೆಯೆಂದು ನಿರ್ಧರವಾದ ಹಾಗಾಯಿತು. ಆ ಮನೆಗೆ 'ಬೃಂದಾವನ'ವೆಂಬ ಹೆಸರು ಅನ್ವರ್ಥವಾಗಿತ್ತು. ಮನೆಯ ಮುಂಭಾಗದಲ್ಲಿರುವ ಸುಂದರವಾದ ಹೂದೋಟ ಯಾರ ಮನಸ್ಸನ್ನಾದರೂ ಆಕರ್ಷಿಸದಿರದು. ಎರಡು ಬದಿಗಳಲ್ಲಿಯೂ ಬಗೆಬಗೆಯ

ಹೂವಿನ ಗಿಡಗಳು. ಇನ್ನೂ ಸ್ವಲ್ಪ ಮುಂದೆ ಹಲವಾರು ಹಣ್ಣಿನ ಗಿಡಗಳು. ಮನೆಯ ಮುಂಭಾಗದಲ್ಲಿ ಸೊಗಸಾದ ಚಪ್ಪರ ಹಾಕಿಸಿ ಅದರಮೇಲೆ ಮಲ್ಲಿಗೆಯ ಬಳ್ಳಿಯನ್ನು ಹಬ್ಬಿಸಿದ್ದರು. ಈ ಮನೋಹರವಾದ ತೋಟ ವನ್ನು ನೋಡಿ ಗೆಳೆಯರಿಬ್ಬರೂ ಹರ್ಷಿತರಾದರು. ಅಷ್ಟು ಹೊತ್ತಿಗೆ ಮನೆಯೊಳಗಿಂದ ಯುವತಿಯೊಬ್ಬಳು ಬಂದು ಹಸನ್ಮುಖದಿಂದ ಅತಿಥಿ ಗಳನ್ನು ಸ್ವಾಗತಿಸಿದಳು. ಮುಚ್ಚಿದ್ದ ಗೇಟನ್ನು ತಾನೇ ತೆಗೆದು, "ಬನ್ನಿ. ಬಹಳ ಹೊತ್ತಾಯಿತೇ ಬಂದು" ಎಂದು ಮೃದುಮಧುರವಾಣಿಯಲ್ಲಿ ಕೇಳಿದಳು.

"ಈಗತಾನೇ ಬಂದೆವು" ಎನ್ನುತ್ತಾ ಶ್ರೀಧರನೇ ಮೊದಲು ಮನೆ ಯೊಳಕ್ಕೆ ಅಡಿಯಿಟ್ಟ. ಬಸವನ ಹಿಂದೆ ಬಾಲಾ ಅನ್ನೋ ಹಾಗೆ ಅನಂತ ರಾಮೈಯ್ಯನೂ ಅವನನ್ನು ಹಿಂಬಾಲಿಸಿದ.

ಮನೆಯಾಕೆ ಅವರನ್ನು ಕರೆದುಕೊಂಡುಹೋಗಿ ಒಂದು ವಿಶಾಲವಾದ ಕೊಠಡಿಯಲ್ಲಿ ಕೂಡಿಸಿದಳು. ಕೊಠಡಿ ಸುವ್ಯವಸ್ಥಿತವಾಗಿತ್ತು. ನೆಲಕ್ಕೆ ರತ್ನಗಂಬಳಿ ಹಾಸಲಾಗಿತ್ತು. ಕೊಠಡಿಯ ಮಧ್ಯದಲ್ಲೊಂದು ದುಂಡನೆಯ ಮೇಜು. ಅದರ ಮೇಲೆ ಸೊಗಸಾದ ಎಂಬ್ರಾಯ್ಡರೀ ಕೆಲಸಮಾಡಿರುವ ವಸ್ತ್ರವನ್ನು ಹೊದಿಸಲಾಗಿತ್ತು. ಅದರ ಮೇಲೆ ಕಾಗದದಲ್ಲಿ ಅಂದವಾಗಿ ಕತ್ತರಿಸಿದ್ದ ಬಗೆಬಗೆಯ ಬಣ್ಣದ ಹೂಗಿಡಗಳಿದ್ದವು. ಮೇಜಿನ ಸುತ್ತಲು ನಾಲ್ಕಾರು ಬೆತ್ತದ ಕುರ್ಚಿಗಳು. ಸ್ವಲ್ಪ ದೂರದಲ್ಲಿ ಒಂದು ಸೋಫಾ. ಅದರ ಸಮೀಪದಲ್ಲಿಯೇ ಒಂದು ಗಾಜಿನ ಬೀರು. ಕೊಠಡಿಯ ನಾಲ್ಕು ಗೋಡೆಗಳೂ ಚಿತ್ರವಿಚಿತ್ರವಾದ ಫೋಟೋಗಳಿಂದಲಂಕೃತವಾಗಿದ್ದವು. ಅವೆಲ್ಲವೂ ಮನೆಯವರ ಕಲಾಕೌಶಲ್ಯವನ್ನು ಪ್ರದರ್ಶಿಸುತ್ತಿದ್ದವು. ಮೇಜಿನ ಮೇಲೆ ಅಂದಿನ ಹಿಂದೂ ಪತ್ರಿಕೆಯೂ, ಒಂದೆರಡು ಕನ್ನಡ ಪತ್ರಿಕೆಗಳೂ ಇದ್ದವು.

ಗೆಳೆಯರಿಬ್ಬರೂ ಕೊಠಡಿಯಲ್ಲಿದ್ದ ಪ್ರತಿಯೊಂದು ವಸ್ತುವಿನ ಮೇಲೂ ದೃಷ್ಟಿಹೊರಳಿಸಿದರು. ಕೊಠಡಿಯ ವ್ಯವಸ್ಥಿತ ರೀತಿಯನ್ನೂ ಅಚ್ಚುಕಟ್ಟು ತನವನ್ನೂ ನೋಡಿ, ಮನೆಯವರ ಬಗ್ಗೆ ಒಂದು ವಿಧವಾದ ಗೌರವವನ್ನು ತಾಳಿದರು.

"ಟ್ರಣ್! ಟ್ರಣ್ !!" ಎಂದು ಹೊರಗಡೆ ಯಾರೋ ಬೈಸಿಕಲ್ ಬೆಲ್ ಬಾರಿಸುತ್ತಿದ್ದುದು ಕೇಳಿಸಿತು. ಶ್ರೀಧರ ಎದ್ದು ಕಿಟಕಿಯಲ್ಲಿ ತಲೆಹಾಕಿ ನೋಡಿದ. "ಬನ್ರಯ್ಯಾ" ಎಂದು ಅವನು ಕಿಟಕಿಯಿಂದಲೇ ಕೂಗಿಕೊಂಡ. ಅವನ ಗೆಳೆಯರು ಮೂರ್ತಿ ಮತ್ತು ದೇವನಾಥ್ ಗೇಟಿನ ಹೊರಗಡೆ ನಿಂತಿದ್ದರು. ಶ್ರೀಧರನ ಧ್ವನಿ ಕೇಳಿ ಅವರಿಗೆ ಸದ್ಯ ಉಸಿರು ಬಂದ ಹಾಗಾಯಿತು. ಶ್ರೀಧರ ಓಡಿಬಂದು ಗೇಟು ತೆಗೆದ.

"ಯಾಕ್ರಯ್ಯಾ ಇಷ್ಟು ಲೇಟ್ ಮಾಡಿದಿರಿ" ಎಂದು ಕೇಳಿದ.

ಮನೇ ಹುಡುಕೀ ಹುಡುಕೀ ಸಾಕಾಗಿ ಹೋಯ್ತು ಮಹರಾಯಾ! ನಿನ್ನೇ ಗಲಾಟೇಲಿ ಮನೇ ಎಲ್ಲೀಂತ ವಿಚಾರಿಸ್ಕೊಳ್ಳೋದೇ ಮರೆತು ಹೋಯಿತು. ಎಲ್ಲೀಂತ ಹುಡುಕಾಡೋದು! ಮನೇ ಹೆಸರು ಗೊತ್ತಿಲ್ಲ. ನಂಬರು ಮೊದಲೇ ತಿಳಿದಿಲ್ಲ. ಸರಸ್ವತೀಪುರವೆಲ್ಲಾ ನಾಲ್ಕು ರೌಂಡು ಹಾಕಿ ಬಂದೆವು" ಎನ್ನುತ್ತಾ ದೇವನಾಥ್ ತನ್ನ ಕೈಚೌಕದಲ್ಲಿ ಹಣೆಯ ಬೆವರನ್ನೊರಸಿಕೊಂಡ.

"ಬಹಳ ಬುದ್ಧಿವಂತ್ರು ಕಣ್ರೋ! ನಿನ್ನೇ ನಿಮ್ಮ ಕೈಗೇ ಕಾಗದಾ ಕೊಟ್ಟೆನಲ್ಲಾ! ನೀವು ಓದಿಕೊಂಡಿದ್ದು ಏನು ಮಣ್ಣು!"

"ಅದ್ಯೇನು ಓದಿದೆವೋ ಏನು ಮಾಡಿದೆವೋ. ನಡೀ ಸದ್ಯ ಮನೆಯಂತೂ ಸಿಕ್ಕಿತಲ್ಲ."

ಮೂರ್ತಿಯೂ ದೇವನಾಥನೂ ತಮ್ಮ ತಮ್ಮ ಸೈಕಲ್ಲುಗಳನ್ನು ತಳ್ಳಿಕೊಂಡು ಬಂಗಲೆಯೊಳಕ್ಕೆ ಹೋದರು. ಒಂದು ಕಡೆ ತಮ್ಮ ವಾಹನಗಳನ್ನು ನಿಲ್ಲಿಸಿದರು. ಶ್ರೀಧರ ತನ್ನ ಗೆಳೆಯರನ್ನು ತನಗಾಗಿ ಮೀಸಲಾಗಿದ್ದ ಕೋಣೆಗೇ ಕರೆದೊಯ್ದ.

"ಸ್ವಲ್ಪ ಸುಧಾರಿಸಿಕೊಳ್ರಯ್ಯ. ಬಿಸಿಲಿನಲ್ಲಿ ಬೈಸಿಕಲ್ ತುಳಿದಿದ್ದೀರಿ."

"ಸದ್ಯ ಮೊದಲು ಒಂದು ಲೋಟಾ ಷರಬತ್ತು ತರಿಸಿಕೊಡು ಪುಣ್ಯಾತ್ಮಾ, ಹೋದ ಪ್ರಾಣ ಮತ್ತೆ ಬರುತ್ತೆ." ದೇವನಾಥ್ ಹೇಳಿದ.

"ಇದೇನು ನಿನ್ನ ಮಾವನ ಮನೆಯೆಂದು ತಿಳಿದುಕೊಂಡ್ಯೇನೋ!" ಶ್ರೀಧರ ನಕ್ಕು ನುಡಿದ.

"ನನಗೇನೋ ಮಾವನಮನೆ ಅಲ್ಲದಿರಬಹುದು. ಸದ್ಯಕ್ಕಂತೂ ನಿನಗೆ ಮಾವನಮನೇ ತಾನೇ ಇದು!"

ಎಲ್ಲರೂ ದೇವನಾಥನ ಮಾತು ಕೇಳಿ ಘೊಳ್ಳೆಂದು ನಕ್ಕರು. ಹಠಾತ್ತನೆ ಇಬ್ಬರು ಹುಡುಗಿಯರು ಕೊಠಡಿಯನ್ನು ಪ್ರವೇಶಿಸಿದುದರಿಂದ ಗೆಳೆಯರ ಹಾಸ್ಯಲಹರಿಗೆ ಅಷ್ಟಕ್ಕೇ ತುಂಡುಬಿತ್ತು. ಎಲ್ಲರೂ ಗಂಭೀರ ಮುದ್ರೆಯನ್ನುತಾಳಿ ಕೂತರು.

ಹುಡುಗಿಯರಿಬ್ಬರೂ ತಾವು ತಂದಿದ್ದ ತಿಂಡೀತಟ್ಟೆಗಳನೊತ್ತಟ್ಟೆ ಗಿಟ್ಟರು. ಅವರ ಹಿಂದೆ ಮತ್ತೆ ನಾಲ್ಕು ಹುಡುಗಿಯರು ಬಂದರು. ಸಾಲಾಗಿ ಬಂದು ನಿಂತ ಹುಡುಗಿಯರನ್ನೇ ರೆಪ್ಪೆಬಡಿಯದಂತೆ ನೋಡತೊಡಗಿದರು ಬಂದಿದ್ದ ಅತಿಥಿಗಳು. ಅವರಲ್ಲಿ ಯಾರೊಬ್ಬರೂ ಹೊಸಬರಿರಲಿಲ್ಲ. ಎಲ್ಲವೂ ಬಳಕೆಯ ಮುಖಗಳೇ ಆಗಿದ್ದವು.

ಮನೆಯಾಕೆ ಚಂದ್ರವದನೆ ಎಲ್ಲರ ಮುಂದೆಯೂ ಒಂದೊಂದು ತಟ್ಟೆಯನ್ನಿಟ್ಟುಕೊಂಡು ಹೋದಳು. ಅವಳ ಛಾಯಾನುವರ್ತಿಯಾಗಿದ್ದ ಸುಮಿತ್ರೆ ಒಂದೊಂದು ಗ್ಲಾಸು ನೀರಿಟ್ಟುಕೊಂಡು ಹೋದಳು. ಗೆಳೆಯರು ತಟ್ಟೆಯಲ್ಲಿದ್ದ ತಿಂಡಿಯನ್ನೀಕ್ಷಿಸಿದರು. ಅದೆಷ್ಟು ಬಗೆಯ ತಿಂಡಿತಿನಿಸುಗಳು! ಘಮುಘಮಿಸುತ್ತಿರುವ ತಿಂಡಿಯವಾಸನೆ ಎಲ್ಲರ ಬಾಯಲ್ಲೂ ನೀರುಬರಿಸಿತು. ಸೊಗಸಾದ ಈರನಗೆರೆ ಬದನೇಕಾಯಿಹಾಕಿ ಮಾಡಿರುವ ವಾಂಗೀಭಾತು. ಆಲೂಗೆಡ್ಡೆ ಉಪ್ಪೇರಿ. ಎರಡೆರಡು ಬೊಂಬಾಯಿ ಬೋಂಡಾ, ಒಂದೊಂದು ಮೈಸೂರುಪಾಕು ತುಂಡು. ಇವಿಷ್ಟು ಆ ತಟ್ಟೆಗಳಲ್ಲಿದ್ದ ಪದಾರ್ಥಗಳು. ಸಭಾಗೌರವಕ್ಕೆಲ್ಲಿ ಭಂಗಬಂದೀತೋ ಎಂದು ಯಾರೊಬ್ಬರೂ ತಟ್ಟೆಗೆ ಕೈಹಾಕದೆ ಒಬ್ಬರ ಮುಖವನ್ನೊಬ್ಬರು ನೋಡುತ್ತ ಕುಳಿತರು. ಶ್ರೀಧರನೇ ಗೆಳೆಯರ ಕಡೆ ನೋಡಿ "ಇನ್ನು ಷುರುಮಾಡ್ರಯ್ಯ" ಎಂದ ನಗುತ್ತಾ. ಅವನಪ್ಪಣೆಯನ್ನೇ ನಿರೀಕ್ಷಿಸುತ್ತಿದ್ದ ಮಿತ್ರರೆಲ್ಲರೂ ಕೂಡಲೇ ತಟ್ಟೆಗಳಿಗೆ ಕೈಹಚ್ಚಿದರು. ಒಂದುಕಡೇ ಕೈಕಟ್ಟಿಕೊಂಡು ನಿಂತಿದ್ದ ಹುಡುಗಿಯರನ್ನು ನೋಡಿ ಶ್ರೀಧರ "ನೀವೂ ಬನ್ನಿ. ಕೂತ್ಕೊಳ್ಳಿ" ಎಂದ. ಅವರು ತುಸು ನಾಚಿಕೆಯಿಂದ ಮುಖಗಳನ್ನು ಓರೆಮಾಡಿಕೊಂಡರು. 'ನಿಮ್ಮದಾಗಲೀ ಮೊದಲು. ಆಮೇಲೆ ನಾವೆಲ್ಲಾ ಒಟ್ಟಿಗೆ ತಿನ್ನುತ್ತೇವೆ' ಎಂದಳು ಚಂದ್ರವದನೆ.

"ಅಲ್ಲೇ ನೀವು ತಪ್ಪುಮಾಡೋದು. ಎಲ್ಲಾ ತಮಾಷೆಯಾಗಿ ಒಟ್ಟಿಗೆ ಸ್ವಲ್ಪ ಹೊತ್ತುಕಳೆಯಬೇಕೆಂಬುದು ತಾನೇ ನಿಮ್ಮ ಈ ಪಾರ್ಟಿಯ ಉದ್ದೇಶ. ಈ ಫಾರ್ಮಾಲಿಟೀಸೆಲ್ಲಾ ಯಾಕೆ. ಎಲ್ಲರೂ ಸೋಷಿಯಲ್ಲಾಗಿರೋಣ ಬನ್ನಿ" ಶ್ರೀಧರ ನುಡಿದ.

"ಯು ಆರ್ ರೈಟ್ ಮಿ|| ಶ್ರೀಧರ್. ನನ್ನ ಗೆಳತಿಯರಿಗೂ ಅದನ್ನೇ ಹೇಳಿದೆ. ಅವರೇನೋ ಸಂಕೋಚಪಡ್ತಾರೆ ಪಾಪ. ಏನೋ ಒಂದು ಇನ್‌ಫೀರಿಯಾರಿಟಿ ಕಾಂಪ್ಲೆಕ್ಸ್!"

"ಯಾವ ಕಾಂಪ್ಲೆಕ್ಸೂ ಇಲ್ಲ. ಅದರ ಕಾಲವೆಲ್ಲಾ ಆಗ್ಹೋಯ್ತು. ನೀವೂ ನಮ್ಮ ಜತೆಯಲ್ಲಿ ನಿಂತು ನಮ್ಮ ಭುಜಕ್ಕೆ ಭುಜಾ ಕೊಟ್ಟು ಸಮಾಜಕ್ಕಾಗಿ ದುಡಿಯುವ ಕಾಲವೀಗ ಪ್ರಾಪ್ತವಾಗಿದೆ. ನಾವೀಗಿರೋದು ಇಪ್ಪತ್ತನೇ ಶತಮಾನದಲ್ಲಿ."

ಶ್ರೀಧರನಾಡಿದ ಪ್ರತಿಯೊಂದು ಮಾತುಗಳೂ ಆ ಹುಡುಗಿಯರ ಮನಸ್ಸಿನ ಮೇಲೆ ಮಹತ್ತರ ಪರಿಣಾಮವನ್ನುಂಟುಮಾಡಿದವು. ಅವನ ನುಡಿಗಳು ಅವರನ್ನು ಹುರಿದುಂಬಿಸಿದುದು ಮಾತ್ರವಲ್ಲದೆ ಅದೊಂದು ಬಗೆಯ ಅಲೌಕಿಕವಾದ ಆನಂದವನ್ನುಂಟುಮಾಡಿದವು. ಹೆಣ್ಣು ಹೆಣ್ಣೆಂದು ಬೀಳುಗಳೆಯುತ್ತಿರುವ, ಇಡೀ ಸ್ತ್ರೀ ಜಾತಿಯನ್ನೇ ತುಚ್ಛೀಕರಿಸಿ ನೋಡುತ್ತಿರುವ ಈ ಸ್ವಾರ್ಥಪೂರ್ಣ ಸಮಾಜದಲ್ಲಿ, ತಮ್ಮ ಪರವಾಗಿ ನಿಂತು ಮಾತಾಡುತ್ತಿರುವ ಅಲ್ಲದೆ ತಮಗೆ ರಕ್ತಗತವಾಗಿ ಬಂದಿರುವ ಹಲವಾರು ಮನೋದೌರ್ಬಲ್ಯಗಳನ್ನು ತೊಡೆದುಹಾಕಿ ಮುಂದೆಬನ್ನಿರೆಂದು ಆಗ್ರಹಪೂರ್ವಕವಾಗಿ ಬಿನ್ನೈಸಿಕೊಳ್ಳುತ್ತಿರುವ ಈ ವ್ಯಕ್ತಿ ಸಾಮಾನ್ಯ ವ್ಯಕ್ತಿಯೇನಲ್ಲ ಎಂಬುದಾಗಿ ಅಲ್ಲಿದ್ದ ಪ್ರತಿಯೊಬ್ಬ ಹುಡುಗಿಯೂ ಯೋಚಿಸತೊಡಗಿದಳು. ಅಂತೆಯೇ ಇಡೀ ಸ್ತ್ರೀ ಜಾತಿಯ ಪರವಾಗಿ ಹೊಡೆದಾಡುತ್ತಿರುವ ಆ ವ್ಯಕ್ತಿಯ ಬಗ್ಗೆ ಅಲೌಕಿಕವಾದ ಪೂಜ್ಯತೆ ಮತ್ತು ಆತ್ಮೀಯತೆಗಳಿಗೆ ತಮ್ಮ ಹೃದಯಗಳಲ್ಲಿ ಎಡೆಮಾಡಿಕೊಟ್ಟರು.

"ಬಾರೇ ಸುಮಿತ್ರಾ, ನಳಿನೀ, ರಾಜಲಕ್ಷ್ಮೀ ಎಲ್ಲಾ ಬನ್ರೇ" ಎಂದಳು ಚಂದ್ರವದನೆ. ಅಷ್ಟು ಹೊತ್ತಿನವರೆಗೂ ನಿಂತುಕೊಂಡಿದ್ದವರು ಸೋಫಾದ ಮೇಲೆ ಕೂತುಕೊಂಡರು. ಚಂದ್ರವದನೆಯೇ ತನ್ನ ಗೆಳತಿಯರಿಗೆ

ಉಪಾಹಾರವನ್ನು ಕೊಟ್ಟಳು. ಶ್ರೀಧರನ ಗೆಳೆಯರ ತಟ್ಟೆಗಳು ಖಾಲಿಯಾ ಗಿದ್ದುದನ್ನು ನೋಡಿ ಚಂದ್ರವದನೆ, ತಲಾ ಎರಡೆರಡು ರಸಬಾಳೇಹಣ್ಣು, ಒಂದೊಂದು ಕಿತ್ತಳೇಹಣ್ಣು, ಎರಡೆರಡು ಬಿಸ್ಕತ್ತುಗಳನ್ನು ಹಾಕಿಕೊಂಡು ಹೋದಳು.

ಹಣ್ಣುಗಳ ವಿನಿಯೋಗವಾದ ನಂತರ ಶ್ರೀಧರ "ನಮಗೆ ಹೊಟ್ಟೆ ತುಂಬಿಹೋಗಿದೆ. ಇದಕ್ಕೆ ಬೇರೇ ಸ್ಥಳವೆಲ್ಲಿದೆ" ಎಂದ.

"ಪರವಾಗಿಲ್ಲ ತಗೊಳ್ಳಿ. ಹಣ್ಣುತಾನೇ" ನಕ್ಕು ನುಡಿದಳು ಚಂದ್ರ ವದನೆ.

"ನಾವ್ಯೇನೂ ರಾತ್ರಿ ಊಟಾಬೇರೆ ಮಾಡಬೇಕಾಗಿಲ್ಲ, ಭರ್ಜರಿ ತಿಂಡೀ ಕೊಟ್ಟುಬಿಟ್ಟಿರಿ" ಎನ್ನುತ್ತಾ ಹೊಟ್ಟೇ ನೀವಿಕೊಂಡ ಅನಂತ ರಾಮೈಯ್ಯ.

"ಅವರು ಬಹಳ ಸೂಕ್ಷ್ಮ ತಿಂಡೀ ತಿನ್ನೋದರಲ್ಲಿ. ಅವರ ಭಾಗಾ ಇಲ್ಲಿ ಕೊಡಿ. ಫ್ರೂಟ್ಸ್ ಅಂದರೆ ನನಗೆ ಪ್ರಾಣ. ನನ್ನ ಗಂಟಲಿನಲ್ಲಿ ಸಲೀಸಾಗಿ ಇಳಿಯುತ್ತೆ" ಹಾಸ್ಯದ ಚಟಾಕಿ ಹಾರಿಸಿದ ದೇವನಾಥ. ಅವನ ಮಾತು ಕೇಳಿ ಎಲ್ಲರೂ ಘೊಳ್ಳೆಂದು ನಕ್ಕರು.

"ನೋಡಿದಿರಾ ಹಾಗಿರಬೇಕು. ಅತಿಥಿಗಳು ಕೇಳಿಹಾಕಿಸಿಕೊಂಡರೆ ಸಂತೋಷ. ಮಿ|| ದೇವನಾಥ್ ನೀವು ಸರಿ!" ಎಂದಳು ಚಂದ್ರವದನೆ. ಬಳಿಕ ಎಲ್ಲರಿಗೂ ಕಾಫೀ ಟ್ರೇಗಳ ವಿನಿಯೋಗವಾಯಿತು. ಎಲ್ಲರ ಉಪಾಹಾರ ವಾದ ನಂತರ ಚಂದ್ರವದನೆಯೂ ಸುಮಿತ್ರೆಯೂ ತಿಂಡಿ ತಿಂದರು. ಮನೆಯ ಆಳು ಬಂದು ತಟ್ಟೇ ಗ್ಲಾಸುಗಳನ್ನು ತೆಗೆದುಕೊಂಡು ಹೋದ. ಚಂದ್ರವದನೆ ಒಳಕ್ಕೆ ಹೋಗಿ ಒಂದು ಬೆಳ್ಳಿಯ ತಟ್ಟೆಯಲ್ಲಿ ಸೊಗಸಾದ ಮೈಸೂರು ಚಿಗುರು ವೀಳೇದೆಲೆ, ಘಮಘಮಿಸುವ ಅಡಿಕೇಪುಡಿ, ಸುಣ್ಣ ತಂದು ಅತಿಥಿಗಳ ಮುಂದಿಟ್ಟಳು. ಮತ್ತೊಂದು ಬೆಳ್ಳಿಯ ತಟ್ಟೆಯಲ್ಲಿ ತಾಂಬೂಲವನ್ನು ತನ್ನ ಗೆಳತಿಯರಿಗೆ ಸರಬರಾಜು ಮಾಡಿದಳು. ಎಲ್ಲರೂ ತಾಂಬೂಲ ಹಾಕಿಕೊಂಡರು.

ಚಂದ್ರವದನೆ ಶ್ರೀಧರನನ್ನು ಕುರಿತು "ನನ್ನ ಅತಿಥಿ ಸತ್ಕಾರ ಮುಗಿ ಯಿತು. ಇನ್ನು ನೀವು ನಿಮ್ಮ ಕಾವ್ಯಗಾಯನದಿಂದ ನಮ್ಮ ಮನಸ್ಸಂತೋಷ

ಪಡಿಸಬೇಕು" ಎಂದಳು. "ಓಹೋ ಅಗತ್ಯವಾಗಿ" ಎಂದು ಶ್ರೀಧರ ತನ್ನ ಜೇಬಿಗೆ ಕೈಹಾಕಿ ಹಸ್ತಪ್ರತಿಯೊಂದನ್ನು ಹೊರತೆಗೆದ. ಅದೇನಿರಬಹು ದೆಂದು ಅವನ ಗೆಳೆಯರಿಗೆ ಕುತೂಹಲವುಂಟಾಯಿತು. ಚಂದ್ರವದನೆ ಒಳಗಿಂದ ಬೆಳ್ಳಿಯ ಚುಚ್ಚುಬಟ್ಟಲಿನಲ್ಲಿ ಚಂಚಲಾ ಅಗರಬತ್ತಿಗಳನ್ನು ಹಚ್ಚಿ ತಂದಿಟ್ಟಳು. ಕೋಣೆಯಲ್ಲೆಲ್ಲಾ ಸುವಾಸನೆ ತುಂಬಿಕೊಂಡಿತು.

ಶ್ರೀಧರ ಅನಂತರಾಮೈಯ್ಯನ ಕಡೇ ನೋಡಿ 'ಗಂಟೆಯೆಷ್ಟಯ್ಯಾ' ಎಂದ. 'ಐದೂವರೆ ಗಂಟೆ' ಎಂದ ಅನಂತರಾಮೈಯ್ಯ. ಶ್ರೀಧರ ನಗು ನಗುತ್ತಾ ಎದ್ದು ನಿಂತ. ಅವನ ಮುಖದಲ್ಲಿ ಉತ್ಸಾಹದ ಕಿರುನಗೆ ಮೂಡಿತ್ತು. ಆಕರ್ಷಣೀಯವಾದ ವ್ಯಕ್ತಿತ್ವ ಅವನದು. ಅನಂತರಾಮೈಯ್ಯ ಅಂದು ಬೆಳಿಗ್ಗೆ ಅವನಿಗೆ ವಿಧಿಸಿದ್ದ ಉಡುಪನ್ನೇ ಧರಿಸಿಕೊಂಡಿದ್ದ. ಆ ಉಡುಪು ಶ್ರೀಧರನ ವ್ಯಕ್ತಿತ್ವಕ್ಕೆ ವಿಶೇಷ ಕಳೆಕೊಟ್ಟಿತ್ತು. ಸೊಗಸಾದ ಕ್ರಾಪು ತಲೆ. ವಿಶಾಲವಾದ ದುಂಡನೆಯ ಮುಖ. ಅವನ ಹೃದಯ ವೈಶಾಲ್ಯವನ್ನೂ ಬುದ್ಧಿಯ ಆಳವನ್ನೂ ಹೊರಸೂಸುತ್ತಿರುವ ತುಸು ಉಬ್ಬಿದ ಹಣೆ. ಸ್ವಲ್ಪವೂ ಕಪಟ--ಕುಟಿಲ ಇವುಗಳನ್ನರಿಯದ ಅವನ ಋಜು ಸ್ವಭಾವದ್ಯೋತಕವಾದ ತೇಜಸ್ವೀ ಕಣ್ಣುಗಳು. ಅನ್ಯಾಯ, ಅನೀತಿ, ಅವಹೇಳನ ಇವುಗಳನ್ನು ಪ್ರತಿಭಟಿಸಿಯೇ ತೀರುತ್ತೇನೆನ್ನುವ ದೃಢನಿಶ್ಚಯ ವನ್ನು ಪ್ರತಿಬಿಂಬಿಸುವ ಮುಖಭಂಗಿ—ಇವುಗಳು ಯಾರ ನೋಟವನ್ನಾ ದರೂ ಕ್ಷಣಕಾಲ ಸೆರೆಹಾಕದಿರದು!!

ಇಂಥ ವ್ಯಕ್ತಿ ಎದ್ದು ನಿಂತಮೇಲೆ ಯಾರಿಗೆ ತಾನೇ ಸುಮ್ಮನಿರಲಾ ದೀತು. ಎಲ್ಲರ ಮುಖಗಳೂ ಉಲ್ಲಾಸದಿಂದ ಅರಳಿದವು. ಮೈಯೆಲ್ಲಾ ಕಿವಿಯಾಗಿ ಕೂತು ಶ್ರೀಧರನ ವಾಣಿಯನ್ನಾಲಿಸತೊಡಗಿದರು. ಶ್ರೀಧರ ಗಂಭೀರವಾಗಿ ಹೇಳತೊಡಗಿದ. "ಮಾನ್ಯ ಗೆಳೆಯ ಗೆಳತಿಯರೇ, ನನ್ನ ಜೀವನದಲ್ಲಿ ಇದೊಂದು ಮಹಾಸುದಿನ! ಹೀಗೆ ಹೇಳಿದರೆ ಯಾರೂ ಉತ್ಪ್ರೇಕ್ಷೆಯೆಂದು ಭಾವಿಸಲಾರಿರೆಂದು ನನ್ನ ನಂಬಿಕೆ. ನನ್ನ ಹೃದಯವನ್ನು ನಿಮ್ಮ ಮುಂದೆ ಬಿಚ್ಚಿಟ್ಟು ಹೇಳುತ್ತಿದ್ದೇನೆ. ನೀವೆಲ್ಲಾ ನನಗೆ ಬಹಳ ಆತ್ಮೀಯರು. ಎಂತಲೇ ನಿಮ್ಮಲ್ಲಿ ನನಗೆ ಯಾವ ಸಂಕೋಚಕ್ಕೂ

ಎಡೆಯಿಲ್ಲ. ಯಾವ ಮುಚ್ಚುಮರೆಯೂ ಇಲ್ಲ. ನನ್ನನ್ನು ಇಂದಿನ ಸಮಾರಂಭದ ಮುಖ್ಯ ಅತಿಥಿಯಾಗಿ ಆಹ್ವಾನಿಸಿರುವುದರಿಂದ ನಾನು ವೈಯಕ್ತಿಕವಾಗಿ ನಾಲ್ಕು ಮಾತುಗಳನ್ನು ಹೇಳಿದಲ್ಲಿ ಯಾರೂ ಅನ್ಯಥಾ ಭಾವಿಸಲಾರರೆಂದು ನಂಬಿದ್ದೇನೆ.

ನನ್ನ ಕವಿಜೀವನ ನನ್ನ ಹನ್ನೆರಡನೆಯ ವರ್ಷದಲ್ಲೇ ಆರಂಭವಾಯಿತು. ಆಗ ನಾನಿನ್ನೂ ಲೋವರ್ ಸೆಕೆಂಡರೀ ತರಗತಿಯಲ್ಲಿ ಓದುತ್ತಿದ್ದೆ. ಮೊದಲಿಂದಲೂ ಪದ್ಯಗಳೆಂದರೆ ಬಹಳ ಹುಚ್ಚು ನನಗೆ. ಪಠ್ಯಪುಸ್ತಕಗಳಲ್ಲಿಟ್ಟದ್ದ ನಳಚರಿತ್ರೆ, ಸೋಮೇಶ್ವರಶತಕ, ಕನಕದಾಸರ ಪದಗಳು, ಸರ್ವಜ್ಞನ ವಚನಗಳು ಇವುಗಳನ್ನೆಲ್ಲಾ ಬಾಯಿಪಾಠಮಾಡಿ ರಾಗವಾಗಿ ಹೇಳುತ್ತಿದ್ದೆ. ಆಟವಾಡುತ್ತಿರಲಿ, ಪಾಠಕಲಿಯುತ್ತಿರಲಿ, ಯಾವ ಕೆಲಸದಲ್ಲಿದ್ದರೂ ನನ್ನಬಾಯಿ ಮಾತ್ರ ಸುಮ್ಮನಿರುತ್ತಿರಲಿಲ್ಲ. ಯಾವುದಾದರೊಂದು ಪದ್ಯವನ್ನು ಗುಣುಗುಣಿಸುತ್ತಿರುವುದೇ ನನ್ನ ಚಟವಾಗಿ ಹೋಗಿತ್ತು. ನಮ್ಮ ಕನ್ನಡ ಪಂಡಿತರು ನಾನು ರಾಗವಾಗಿ ಪದ್ಯ ಹೇಳುವುದನ್ನು ಕಂಡು ಬಹಳವಾಗಿ ಸಂತೋಷಪಡುತ್ತಿದ್ದರು. ತರಗತಿಗೆ ಯಾರು ಬಂದರೂ ಸರಿ, "ಶ್ರೀಧರಾ ಪದ್ಯಹೇಳು" ಎಂದು ನನಗೆ ಆಜ್ಞೆ ಮಾಡುತ್ತಿದ್ದರು. ನನಗೂ ಹೆಮ್ಮೆಯಿರುತ್ತಿತ್ತು. ಸಂತೋಷವಾಗಿ ನನಗೆ ಬರುತ್ತಿದ್ದ ಪದ್ಯಗಳನ್ನು ಹೇಳುತ್ತಿದ್ದೆ. ಆಗಾಗ್ಗೆ ನಾನೂ ಪದ್ಯ ಬರೆಯಬಾರದೇಕೆಂಬ ಹುಚ್ಚು ಹಿಡಿಯುತ್ತಿತ್ತು. ನನಗೆ ತೋರಿದಹಾಗೆ ಪದ್ಯಗಳನ್ನು ಬರೆಯತೊಡಗಿದೆ. ನನಗಾಗ ಛಂದಸ್ಸಾಗಲೀ ಮತ್ತೊಂದಾಗಲೀ ಯಾವುದೂ ತಿಳಿಯದು. ಅಂತೂ ಪದ್ಯ ಬರೆಯಬೇಕೆಂಬ ಉತ್ಸಾಹ ಮಾತ್ರ ಬಹಳವಿತ್ತು. ನನ್ನ ಮೊದಲನೆಯ ಕವಿತೆ "ಯಾವುದೆನಗೆ ?" ಎಂಬುದು ಕನ್ನಡ ಮಾಸಪತ್ರಿಕೆಯೊಂದರಲ್ಲಿ ಪ್ರಕಟವಾಯಿತು. ನನ್ನ ಪ್ರಥಮ ಕವಿತೆ ಮುದ್ರಿತವಾದುದನ್ನು ಕಂಡು ನನಗುಂಟಾದ ಸಂತೋಷವನ್ನು ಕೇಳಬೇಕೇ ! ನನ್ನ ಕವಿತೆಯೊಂದು ಅಚ್ಚಾದುದಕ್ಕೆ ಆಗಲೇ ನಾನೊಬ್ಬ ಕವಿಯಾದನೆಂದು ಉಬ್ಬಿಹೋದೆ. ನನಗೆ ದೊರೆತ ಉತ್ತೇಜನದಿಂದ ಕವಿತೆಗಳನ್ನು ಬರೆಯುವ ಅಭ್ಯಾಸವನ್ನು ಬೆಳೆಸಿಕೊಂಡೆ. ನನ್ನ ಹಲವಾರು ಕವಿತೆಗಳು ಕನ್ನಡನಾಡಿನ ಮಾಸಪತ್ರಿಕೆಗಳಲ್ಲಿ ಪ್ರಕಟವಾದುವು.

ಹೈಸ್ಕೂಲು ವಿದ್ಯಾರ್ಥಿಯಾಗಿದ್ದಾಗಲೂ ಕವಿತೆ ಬರೆಯುವ ಪರಿಪಾಠ ವನ್ನಿಟ್ಟುಕೊಂಡಿದ್ದೆ.

ಆಮೇಲೆ ಕಾಲೇಜು ಸೇರಿದೆ. ನಮ್ಮ ಗೃಹಕೃತ್ಯದ ಪರಿಸ್ಥಿತಿ ಬಹಳ ಬಿಗಡಾಯಿಸಿಕೊಂಡಿತು. ನಮ್ಮ ತಂದೆಯವರು ಪ್ರಬಲವಾದ ಖಾಯಿಲೆ ಯಿಂದ ಹಾಸಿಗೇಹಿಡಿದು ಮಲಗಿಬಿಟ್ಟರು. ನಮ್ಮ ಸಂಸಾರ ದೊಡ್ಡದು. ದುಡಿದು ತಂದುಹಾಕುವವರು ಯಾರೂ ಇರಲಿಲ್ಲ. ನಾನಿನ್ನೂ ಹದಿನಾರು ವರ್ಷದ ಹುಡುಗ. ಅಷ್ಟು ದೊಡ್ಡ ಸಂಸಾರ ಭಾರವನ್ನು ಹೊರಲು ನಾನಾಗ ತೀರಾ ಅಸಮರ್ಥನಾಗಿದ್ದೆ. ಮನೆಯ ತಾಪತ್ರಯಗಳನ್ನು ನೋಡಿ ನನ್ನ ವಿದ್ಯಾಭ್ಯಾಸಕ್ಕೆ ಶರಣುಹೊಡೆದು ಯಾವುದಾದರೊಂದು ಚಾಕರೀಹಿಡಿಯಬೇಕೆಂದು ತೀರ್ಮಾನಿಸಿಕೊಂಡೆ. ಆದರೆ ನನ್ನ ತಂದೆ ತಾಯಿಗಳಿಬ್ಬರೂ ನನ್ನ ಅಪೇಕ್ಷೆಯನ್ನು ಪ್ರಬಲವಾಗಿ ವಿರೋಧಿಸಿದರು. ಹೇಗಾದರೂ ಮಾಡಿ ಹೊಟ್ಟೇ ಬಟ್ಟೆಗಳನ್ನು ಕಟ್ಟಿ ನನ್ನ ವಿದ್ಯಾಭ್ಯಾಸವನ್ನು ಮುಂದುವರಿಸುವುದಾಗಿ ಅವರು ಆಶ್ವಾಸನೆಯನ್ನಿತ್ತರು.

ನಾನು ಅವರ ಮಾತಿನಂತೆಯೇ ಕಾಲೇಜು ಸೇರಿಕೊಂಡೆ. ಪರಸ್ಥಳದಲ್ಲಿ ನನ್ನನ್ನು ಕೇಳುವವರ್ಯಾರು! ಬಹಳ ಕಷ್ಟಪಟ್ಟು ಅವರಿವರ ಕಾಲುಹಿಡಿದು ಕೆಲವು ವಾರಾನ್ನಗಳನ್ನು ಸಂಪಾದಿಸಿಕೊಂಡೆ. ನನ್ನ ಮಿತ್ರರು ಕೆಲವರು ತಮ್ಮ ಮನೆಗಳಲ್ಲಿ ನನಗೆ ಒಂದೆರಡು ವಾರಗಳನ್ನು ದೊರಕಿಸಿಕೊಟ್ಟರು. ಕಷ್ಟಪಟ್ಟು ವಿದ್ಯಾರ್ಜನೆಮಾಡಿ ಕಾಲೇಜಿನಲ್ಲಿ ಫೀಸು ಮಾಫಿಮಾಡಿಸಿಕೊಂಡೆ. ಹೀಗೆ ನನ್ನ ಕಾಲೇಜು ವಿದ್ಯಾರ್ಥಿ ದೆಶೆಯಲ್ಲಿ ಜೀವನಮರಣಗಳ ತುಮುಲ ಯುದ್ಧದಲ್ಲಿ ಸಿಕ್ಕಿಬಿದ್ದು ನಾನು ಜರ್ಝರಿತನಾಗಹತ್ತಿದೆ. ಆಗ ನನ್ನ ಕಣ್ಣಮುಂದೆ ಇದ್ದ ಗುರಿ ಒಂದೇ. ಓದಬೇಕು—ಓದಿ ಮುಂದಕ್ಕೆ ಬರಬೇಕು. ನಾನೂ ಒಬ್ಬ ವ್ಯಕ್ತಿಯಾಗಿ ನನ್ನ ಕಾಲ ಮೇಲೆ ನಾನು ನಿಲ್ಲುವಂತಾಗಬೇಕು. ಇದೇ ನನ್ನ ಗಾಯತ್ರಿ ಯಾಗಿತ್ತು. ಈ ರೀತಿಯ ಹೊಟ್ಟೆಯ ಹೋರಾಟದಲ್ಲಿ, ಆರ್ಥಿಕ ಮುಗ್ಗಟ್ಟಿನಲ್ಲಿ ಸಿಕ್ಕಿಬಿದ್ದು ನುಚ್ಚುನುರಿಯಾಗುತ್ತಿದ್ದ ನನ್ನ ಜೀವನದಲ್ಲಿ ಕವಿತೆಗೆ ಸ್ಥಾನವೆಲ್ಲಿ!! ನನ್ನ ಬಾಳಿನ ಬೆಂಗಾಡಿನಲ್ಲಿ ಕಾವ್ಯದ ಹೊನಲನ್ನು

ಹರಿಸುತ್ತಿದ್ದ ನನ್ನ ಹೃದಯಸರಸಿ ಬತ್ತಿಹೋಯಿತು !! ಅಂದಿಗೆ ಮುಗಿದು ಹೋಯಿತು ನನ್ನ ಕವಿಜೀವನ. ಅಂದಿನಿಂದ ನನಗೆ ಬರೆಯುವ ಉತ್ಸಾಹವಿರಲಿಲ್ಲ. ನನ್ನಿಂದ ಬರೆಯಿಸುವ ಸ್ಫೂರ್ತಿಯಂತೂ ಮೊದಲೇ ಇರಲಿಲ್ಲ. ಹೀಗಾಗಿ ಕವಿತೆ ಬರೆಯುವ ಹವ್ಯಾಸವನ್ನೇ ಕೈಬಿಟ್ಟೆ. ಅಂದಿನಿಂದಲೇ ನನ್ನ ಕಾವ್ಯ ಜೀವನದ ಅವನತಿ ಪ್ರಾರಂಭವಾಯಿತೆಂದು ನನ್ನಗ್ರಹಿಕೆ. ಮುಂದೆ ಮೂರು-ನಾಲ್ಕು ವರ್ಷಗಳು ನಾನೊಂದು ಪಂಕ್ತಿಯನ್ನೂ ಬರೆದ ಪಾಪಕ್ಕೆ ಹೋದವನಲ್ಲ. ನನಗೇ ಆಶ್ಚರ್ಯ ವೆನಿಸುತ್ತಿತ್ತು. ಅದು ಹೇಗೆ ನನ್ನ ಕವಿತಾಶಕ್ತಿ ನಿರ್ನಾಮವಾಗಿ ಹೋಯಿತೆಂದು !! ಅದಕ್ಕೆ ಸಮರ್ಪಕವಾದ ಉತ್ತರ ಕೊಡಬಲ್ಲವರಾರು! ಅದಿನ್ನೂ ಸಮಸ್ಯೆಯಾಗಿಯೇ ಉಳಿದಿದೆ ನನ್ನ ಭಾಗಕ್ಕೆ !

ಮಾನ್ಯ ಗೆಳೆಯ ಗೆಳತಿಯರೇ, ನನ್ನ ಕವಿ ಜೀವನದ ಸೂಕ್ಷ್ಮ ಪರಿಚಯವನ್ನು ನಿಮಗೆ ಮಾಡಿಕೊಟ್ಟಿದ್ದೇನೆ. ಇನ್ನು ನನ್ನ ಬಹುಮಾನಿತ ವಾದ ಕವಿತೆಯ ವಿಷಯವಾಗಿ ಎರಡು ಮಾತು ಹೇಳಬಯಸುತ್ತೇನೆ. ನನ್ನ ಈ ನೀಳ್ಗವನಕ್ಕೆ ಮುಖ್ಯ ಸ್ಫೂರ್ತಿಯನ್ನು ಒದಗಿಸಿದವರು ನನ್ನ ವಿದ್ಯಾ ಗುರುಗಳಾದ ನಮ್ಮ ಕನ್ನಡ ಪ್ರೊಫೆಸರು. ಅವರೊಂದು ದಿನ ನನ್ನನ್ನು ಕುರಿತು "ಶ್ರೀಯವರ ಕವಿತಾ ಸ್ಪರ್ಧೆಗೆ ನೀನೂ ಒಂದು ಕವನವನ್ನೇಕೆ ಕಳಿಸಬಾರದು ಶ್ರೀಧರಾ" ಎಂದು ಪ್ರಸ್ತಾಪಿಸಿದರು. ಅಂದಿನಿಂದಲೇ ನೀಳ್ಗವನವೊಂದನ್ನು ಬರೆಯಲುಪಕ್ರಮಿಸಿದೆ. ಕವಿತೆ ಬರೆಯಬೇಕೆಂದು ಸಂಕಲ್ಪಿಸಿದ್ದಾಯಿತು. ಯಾವ ವಿಷಯವನ್ನು ಕುರಿತು ಬರೆಯಬೇಕೆಂದು ಯೋಚಿಸಹತ್ತಿದೆ. ಕಡೆಗೆ ನನ್ನ ಬುದ್ಧಿಗೆ ಹೊಳೆದ ವಿಚಾರ ಇದು. ಕನ್ನಡಕ್ಕಾಗಿ ತಮ್ಮ ತನು ಮನ ಧನಗಳನ್ನೆರೆದು–ತಮ್ಮ ಇಡೀ ಜೀವಮಾನ ವನ್ನೆಲ್ಲಾ ಕನ್ನಡ ಮಾತೆಯ ಸೇವೆಯಲ್ಲಿಯೇ ಸವಿಸಿದ-ಕನ್ನಡದ ಆಚಾರ್ಯ ಪುರುಷರಲ್ಲೊಬ್ಬರೆಂದು ಪ್ರಖ್ಯಾತರಾದ, ಕನ್ನಡ ಮಾತೆಯ ಪ್ರೇಮ ಪುತ್ರ ಶ್ರೀಯವರನ್ನು ಕುರಿತೇ ಕವನವನ್ನು ಬರೆಯೋಣವೆಂದು ನಿರ್ಧರಿಸಿಕೊಂಡೆ. ಅಂತೆಯೇ "ಕನ್ನಡದ ಕಣ್ಣು" ಎಂದು ನನ್ನ ಕವನಕ್ಕೆ ನಾಮಕರಣ ಮಾಡಿದೆ. ಒಂದು ವಾರದಲ್ಲಿ ನನ್ನ ನೀಳ್ಗವನವನ್ನು ಮುಗಿಸಿದೆ. ನಮ್ಮ ಗುರುಗಳಿಗದನ್ನು ತೋರಿಸಿ ಅವರ ಆಶೀರ್ವಾದವನ್ನು ಪಡೆದು ಕವನವನ್ನು ಸ್ಪರ್ಧೆಗೆ

ಕಳಿಸಿಕೊಟ್ಟೆ. ಅದಕ್ಕೇ ಬಹುಮಾನ ಬಂದಿರುವ ಸುದ್ದಿ ನಿಮಗೆಲ್ಲಾ ತಿಳಿದೇ ಇದೆ.

ಮಾನ್ಯ ಗೆಳೆಯ ಗೆಳತಿಯರೇ, ಮುಖ್ಯ ನಾನಿಂದು ನಿಮ್ಮೆಲ್ಲರ ಮುಂದೆ ಹೇಳ ಬಯಸುವುದಿಷ್ಟೆ. ಪ್ರತಿಯೊಬ್ಬ ಕನ್ನಡ ಮಾತೆಯ ಪುತ್ರನೂ, ಪುತ್ರಿಯೂ ನಮ್ಮ ನಾಡು ನುಡಿಗಳ ಏಳ್ಗೆಗಾಗಿ ತ್ರಿಕರಣ ಪೂರ್ವಕವಾಗಿ ದುಡಿಯುತ್ತೇನೆಂಬ ದೃಢ ಪ್ರತಿಜ್ಞೆಯನ್ನು ಕೈಗೊಳ್ಳಬೇಕು. ಅಂತೆಯೇ ತಮ್ಮ ಧ್ಯೇಯ ಸಾಧನೆಗಾಗಿ ಹಲವೊಂದು ಕಾರ್ಯಕ್ರಮಗಳನ್ನು ಗೊತ್ತು ಮಾಡಿಕೊಂಡು ಅವುಗಳನ್ನು ಕಾರ್ಯಗತಮಾಡಲು| ಉತ್ಸಾಹದಿಂದಲೂ, ನಿರಂತರ ಶ್ರದ್ಧೆಯಿಂದಲೂ ಶ್ರಮಿಸಬೇಕು. ನಮ್ಮಲ್ಲಿ ಎಲ್ಲರೂ ಆರಂಭ ಶೂರರು. ಉತ್ಸಾಹದ ಹುಚ್ಚು ಹೊಳೆಯಲ್ಲಿ ಬೇಕು ಬೇಕಾದ ಹಾಗೆ ಶಪಥ ಮಾಡಿಬಿಡುವರು. ಆದರೆ ತಮ್ಮ ಕೃತಿಯಲ್ಲಿ ಮಾತ್ರ ತಮ್ಮ ಉತ್ಸಾಹವನ್ನು ತೋರಿಸರು. ನಮಗೀಗ ಬೇಕಾಗಿರುವುದು ಬರಿಯ ಮಾತಲ್ಲ, ಕೃತಿ. ಆದಷ್ಟು ನಾವು ಮಾತು ಕಮ್ಮಿ ಮಾಡಬೇಕು. ಕೆಲಸ ಹೆಚ್ಚು ಹೆಚ್ಚಾಗಿ ಆಗಬೇಕು. ನಾಡು ನುಡಿಗಳ ಸಲುವಾಗಿ ನಿಸ್ವಾರ್ಥತೆ ಯಿಂದ, ನಿರ್ವಂಚನೆಯಿಂದ ದುಡಿಯಬಲ್ಲ ಹುರಿಯಾಳುಗಳು ಒಬ್ಬಿಬ್ಬರಲ್ಲ —ಸಾವಿರಾರು ಮಂದಿ ಮುಂದೆ ಬರಬೇಕು. ಹಾಗಾದರೆ ಮಾತ್ರ ನಾವು ನಮ್ಮ ನಾಡು ನುಡಿಗಳನ್ನುಳಿಸಿಕೊಂಡೇವು! ನಮ್ಮ ಅಖಂಡ ಕರ್ನಾಟಕದ ಕನಸು ನನಸಾದೀತು!! ಇಲ್ಲದೆ ಹೋದರೆ ಇದೇ ಕ್ಲೈಬ್ಯ, ಇದೇ ತಾತ್ಸಾರ, ಇದೇ ನಿರುತ್ಸಾಹ ಕನ್ನಡಿಗರಲ್ಲಿ ನೆಲೆಯಾಗಿ ನಿಂತಿತೆಂದರೆ, ಈಗಾಗಲೇ ಹರಿದು ಹಂಚಿಹೋಗಿರುವ ಕನ್ನಡನಾಡು ಹೇಳ ಹೆಸರಿಲ್ಲದೇ ಹೋಗಬೇಕಾದೀತು!! ಅಂತಹ ದುಃಸ್ಥಿತಿಯು ನಮ್ಮ ಕನ್ನಡತಾಯಿಗೆ ಎಂದಿಗೂ ಬಾರದೆಂದು ನನ್ನ ಅಂತರಾತ್ಮನು ನನ್ನಲ್ಲಿ ನಿಂತು ನುಡಿಸುತ್ತಿದ್ದಾನೆ! ಕನ್ನಡಿಗರೆಲ್ಲರೂ ಒಂದಾಗೋಣ. ಎರಡು ಕೋಟಿ ಕನ್ನಡ ಜನ—ಈ 'ಕನ್ನಡಕುಲ'ವೆಲ್ಲಾ ಏಕಚಕ್ರಾಧಿಪತ್ಯದಲ್ಲಿ ಸಮಾವೇಶಗೊಂಡು ನಮ್ಮ ಸಾಹಿತ್ಯ, ಸಂಸ್ಕೃತಿ, ಕಲೆ ಇವುಗಳನ್ನು ಇತೋಪ್ಯತಿಶಯವಾಗಿ ಮುನ್ನಡೆಸೋಣ." ಇಷ್ಟು ಹೇಳಿ ಶ್ರೀಧರ ಕುಳಿತ. ಅವನ ಮುಖ ಆವೇಶಪೂರ್ಣವಾಗಿತ್ತು. ಅವನ ದೃಷ್ಟಿಯಲ್ಲಿ ತೀಕ್ಷ್ಣತೆಯಿತ್ತು. ಹಠ ಸಾಧನೆಯ ಛಲವಿತ್ತು. ಅವನಿನ್ನೂ ಭಾವನಾಪರವಶನಾಗಿಯೇ ಇದ್ದ.

ಬಳಿಕ ಅನಂತರಾಮಯ್ಯ ಎದ್ದು ನಿಂತ. “ಗೆಳೆಯ ಗೆಳತಿಯರೇ, ನಾನೆರಡು ಮಾತನಾಡಲು ತಮ್ಮೆಲ್ಲರ ಅನುಜ್ಞೆ ಬೇಡುತ್ತೇನೆ. ಈಗತಾನೇ ನಮ್ಮನಚ್ಚಿನ ಗೆಳೆಯ ಶ್ರೀಧರನ ಬಾಯಿಂದ ಅವನ ಕವಿಜೀವನದ ದಾರುಣ ಕಥೆಯನ್ನು ಕೇಳಿರುತ್ತೀರಿ. ಅವನ ಬಾಳಿನ ಕಥೆಯನ್ನು ಕೇಳಿ ಯಾರಿಗಾದರೂ ಕಣ್ಣೀರು ಬಾರದಿರದು. ಅವನಿಗೆ ದೈವದತ್ತವಾದ ಪ್ರತಿಭೆಯಿದೆ. ಅವನದು ಕವಿಹೃದಯ. ಇಂತಹ ಪ್ರತಿಭಾವಂತ ನಮ್ಮೆಲ್ಲರ ಗೆಳೆಯನಾಗಿರುವುದೇ ನಮಗೊಂದು ಹೆಮ್ಮೆಯ ಸಂಗತಿಯಾಗಿದೆ. ಇಂತಹ ಮೇಧಾವಿಯ ಸಹವಾಸದಲ್ಲಿರಲು ಯಾರುತಾನೇ ಇಷ್ಟಪಡರು! ನನ್ನಮಟ್ಟಿಗೆ ಹೇಳಬಹುದಾದರೆ ಒಂದು ಘಳಿಗೆಯೂ ನಾನು ಶ್ರೀಧರನನ್ನು ಬಿಟ್ಟಿರಲಾರೆ. ನಮ್ಮಿಬ್ಬರ ಸ್ನೇಹ ಪ್ರಾರಂಭವಾಗಿ ಎರಡು ವರ್ಷಗಳಾದವು. ಈ ಅವಧಿಯಲ್ಲಿ ಒಬ್ಬರ ಹೃದಯವನ್ನೊಬ್ಬರು ಚೆನ್ನಾಗಿ ಅರಿತುಕೊಳ್ಳಲು ಪ್ರಯತ್ನಿಸಿದ್ದೇವೆ. ಇಬ್ಬರ ಮನಸ್ಸೂ ಒಂದೇ ಡಿಟ್ಟನಲ್ಲಿ ಓಡುತ್ತಿದೆ. ನಮ್ಮಿಬ್ಬರ ಆಶೆ ಆಕಾಂಕ್ಷೆಗಳೂ, ಗುರಿ-ಸಾಧನೆಗಳೂ ಒಂದೇ ಆಗಿವೆ. ಈ ನನ್ನ ಗೆಳೆಯನ ಸಾನ್ನಿಧ್ಯ ಸಹವಾಸಗಳಿಂದ, ಆತನ ಕವಿಹೃದಯದ ಸಂಪರ್ಕದಿಂದ, ಆತನ ವಿಪುಲವಾದ ವಿಚಾರ ಸಂಪತ್ತಿನಿಂದ ನನ್ನ ಬಾಳಿಗೊಂದು ಬೆಲೆ ಬಂದಿದೆಯೆಂದು ಧಾರಾಳವಾಗಿ ಹೇಳಬಲ್ಲೆ. ಈ ಪ್ರತಿಭಾವಂತ ಗೆಳೆಯನ ಸಹವಾಸದಿಂದ ನನ್ನ ಹೃದಯ ಬುದ್ಧಿಗಳು ಸಂಸ್ಕಾರಗೊಂಡಿವೆ.

ನೀವೆಲ್ಲರೂ ನಿಮ್ಮ ಈ ಗೆಳೆತನದ ಮಹತ್ವವನ್ನು ಚೆನ್ನಾಗಿ ಅರಿತಿದ್ದೀರೆಂದೇ ನನ್ನ ನಂಬಿಕೆ. ನೀವುಕೂಡಾ ಈ ನಮ್ಮ ಮಿತ್ರನ ಸ್ನೇಹ ಸಹವಾಸಗಳಿಂದ ನಿಮ್ಮ ಬಾಳನ್ನು ಬೆಳಗಿಸಿಕೊಳ್ಳಬೇಕೆಂಬುದೇ ನನ್ನ ಹಿರಿಯಾಸೆ. ನಮ್ಮ ಶ್ರೀಧರನಿಂದ ಕನ್ನಡ ನಾಡುನುಡಿಗಳ ಸೇವೆ ಇತೋಪ್ಯತಿಶಯವಾಗಿ ನೆರವೇರುವಂತೆ ಭಗವಂತನು ಅನುಗ್ರಹಿಸಲೆಂದೇ ನನ್ನ ಹಾರೈಕೆಯಾಗಿದೆ.” ಇಷ್ಟು ಹೇಳಿ ಅನಂತರಾಮೈಯ್ಯ ಕುಳಿತ.

ಚಂದ್ರವದನೆ ಎದ್ದು ನಿಂತಳು, “ಗೆಳೆಯ ಗೆಳತಿಯರೇ. ಮುಖ್ಯ ಬಡತನ ಬಹಳ ಕಷ್ಟ. ಭಾರತ ಬಡತನದ ಬೇಗುದಿಯಲ್ಲಿ ಬೆಂದು ಹೋಗುತ್ತಿದೆ. ಈ ಬಡತನವನ್ನು ನಿರ್ಮೂಲ ಮಾಡುವ ತನಕ ನಮ್ಮ ದೇಶಕ್ಕೆ ಮುಕ್ತಿಯಿಲ್ಲ. ಇದಾಗದನಕ ಸಮಾಜದ ಉದ್ಧಾರ-ಮುನ್ನಡೆ

ಎಂಬ ಮಾತುಗಳೆಲ್ಲವೂ ಅರ್ಥವಿಲ್ಲದ ಪೊಳ್ಳು ಕೂಗೇಸರಿ. ನಮ್ಮ ನಾಡಿನಲ್ಲಿ ನಮ್ಮ ಶ್ರೀಧರರಂತೆ ಅದೆಷ್ಟು ಪ್ರತಿಭಾವಂತ ಸಾಹಿತಿಗಳೂ ಕಲಾವಿದರೂ, ತಮ್ಮ ಜೀವನದ ಕಷ್ಟಕಾರ್ಪಣ್ಯಗಳಿಗೆ ಸಿಕ್ಕಿ ಹೆಣಗಾಡುತ್ತಿದ್ದಾರೆಯೋ ! ಕವಿಗಳು, ಕಲಾವಿದರು ಎಂದರೆ ಒಟ್ಟು ನಾಡಿಗೇ ಒಂದು ಭೂಷಣಪ್ರಾಯ. ಸಮಾಜಕ್ಕೆ ಅವರಿಂದಾಗುವ ಉಪಕಾರ ಅಮೂಲ್ಯವಾದ್ದು. ಅಂತಹ ಪ್ರತಿಭಾವಂತರಿಗೆ ನ್ಯಾಯವಾಗಿ ಸಲ್ಲಬೇಕಾದ ಗೌರವ ಪುರಸ್ಕಾರಗಳನ್ನು ನಮ್ಮ ಜನ ಅವರಿಗೆ ಸಲ್ಲಿಸುತ್ತಿಲ್ಲ. ಅವರಿಗಿಂದು ನಾವು ಸಾಕಷ್ಟು ಉತ್ತೇಜನವೀಯುತ್ತಿಲ್ಲ. ಅಂತಹ ಸಮಾಜೋದ್ಧಾರಕರನ್ನು, ಸಂಸ್ಕೃತಿಯ ಕುಲದೀಪಕರನ್ನು ನಿರ್ಲಕ್ಷಿಸಿರುವುದು ನಮ್ಮ ಅಕ್ಷಮ್ಯ ಅಪರಾಧ. ನಮ್ಮ ಸಮಾಜದ ದುರ್ದೆಶೆಗೆ ನಮ್ಮ ಈ ತಾತ್ಸಾರವೇ ಮುಖ್ಯ ಕಾರಣವೆಂದು ನನ್ನ ಅಭಿಪ್ರಾಯ. ಅದು ಹಾಗಿರಲಿ.

ನಮ್ಮ ತರುಣ ಕವಿ ಶ್ರೀಧರರಲ್ಲಿ ನನ್ನದೊಂದು ವಿನಯಪೂರ್ವಕವಾದ ಬಿನ್ನಹ. ನಿಮ್ಮಂತಹ ಪ್ರತಿಭಾಸಂಪನ್ನರಾದವರು ಈ ಚಿಕ್ಕ ವಯಸ್ಸಿಗೇ ಜೀವನದಲ್ಲಿ ಇಷ್ಟೆಲ್ಲಾ ಕಷ್ಟಕಾರ್ಪಣ್ಯಗಳಿಗೆ ಬಲಿಯಾಗಬೇಕಾಯಿತಲ್ಲಾ ಎಂದು ಯೋಚಿಸಿದರೆಯೇ ನನಗೆ ಮೈನಡುಗಹತ್ತಿದೆ. ಅಂದ ಮೇಲೆ ಸ್ವತಃ ಜೀವನದ ನಾನಾ ಕೋಟಲೆಗಳನ್ನನುಭವಿಸಿರುವ ನೀವು ಅದೆಷ್ಟು ನೊಂದಿರುವಿರೆಂಬುದನ್ನು ಊಹಿಸುವುದು ಕೂಡಾ ನಮ್ಮಂತಹವರಿಗೆ ಸಾಧ್ಯವಿಲ್ಲದ ಕೆಲಸ. ಆದರೂ ನಾನು ನಿಮಗೊಂದು ಮಾತು ಹೇಳಬೇಕೆಂದಿದ್ದೇನೆ. ನಿಮ್ಮಂತಹ ಪ್ರತಿಭಾವಂತರ ಜೀವನದಲ್ಲಿ ಯಾವ ನಿರಾಶೆಗೂ ಎಡೆಯಿರಕೂಡದು. "ಅಮರ ಆಶಾವಾದಿತ್ವವೇ ಜೀವನದ ಊರುಗೋಲು" ಎಂಬ ಜೀವನ ತತ್ವವನ್ನು ನೀವರಿಯದೆ ಇಲ್ಲ. ಮನುಷ್ಯ ಆಶಾಜೀವಿಯಾಗಿಲ್ಲದೇ ಹೋದರೆ ಈ ಜೀವನ ಸಂಗ್ರಾಮದಲ್ಲಿ ಹೆಣಗಾಡಿ ಊರ್ಜಿತವಾಗುವುದೇ ಬಹಳ ಕಷ್ಟವಾಗಿ ಹೋಗುತ್ತದೆ. ನಾವು ಮಾಡಬೇಕಾಗಿರುವ ಕರ್ತವ್ಯವನ್ನು ಮಾಡಿಯೇ ತೀರಬೇಕಲ್ಲದೆ ಕರ್ತವ್ಯ ಪರಾಙ್ಮುಖರಾಗಿ ಕೈಕಟ್ಟಿ ಕುಳಿತಿರಲು ಸಾಧ್ಯವಿಲ್ಲ.

ನಿಮಗೆ ಶ್ರೀಯವರ ರಜತೋತ್ಸವ ಸ್ವರ್ಣ ಪದಕ ದೊರೆತಿದೆಯೆಂಬ ಸುದ್ದಿ ನಮ್ಮೆಲ್ಲರಿಗೂ ಬಹಳ ಸಂತೋಷವನ್ನುಂಟುಮಾಡಿದೆ. ಜತೆಗೆ

ನಿಮ್ಮಂತಹ ತರುಣ ಕವಿಗಳು ನಮ್ಮ ಮಿತ್ರ ಮಂಡಲಿಯಲ್ಲಿರುವಿರಲ್ಲಾ ಎಂಬ ಹೆಮ್ಮೆಯೂ ನಮಗುಂಟಾಗಿದೆ. ನೀವು ಇದೇ ರೀತಿಯಲ್ಲಿ ನಿಮ್ಮ ಕವಿತಾಭ್ಯಾಸವನ್ನು ಮುಂದುವರಿಸಿಕೊಂಡು ಹೋಗಬೇಕು. ನಿಮ್ಮಿಂದ ಅನೇಕ ಕಲಾ ಕೃತಿಗಳು ಹೊರಬಿದ್ದು ಕನ್ನಡ ಜನತೆಯ ಸಾಂಸ್ಕೃತಿಕ ಸಂಪತ್ತು ಹೆಚ್ಚಬೇಕೆಂಬುದೇ ನನ್ನ ಹಿರಿಯಾಶೆಯಾಗಿದೆ. ಈ ನನ್ನ ಆಶಯವನ್ನು ಈಡೇರಿಸಿಕೊಡಬೇಕೆಂಬುದೇ ಆ ದಯಾಮಯನಾದ ಭಗವಂತನಲ್ಲಿ ನನ್ನ ಚಿರಂತನ ಪ್ರಾರ್ಥನೆ." ಇಷ್ಟು ಹೇಳಿ ಚಂದ್ರವದನೆ ಕುಳಿತುಕೊಂಡಳು.

"ಭಾಷಣಗಳ ಸುರಿಮಳೆಯಾಗಿ ಹೋಯಿತು. ಇನ್ನು ಮುಂದಿನ ಕಾರ್ಯಕ್ರಮವೇನು" ಎಂದ ಶ್ರೀಧರ ನಗುತ್ತಾ.

"ತಮ್ಮಿಂದ ಕಾವ್ಯವಾಚನ ನಡೆಯಬೇಕು" ಎಂದಳು ಚಂದ್ರವದನೆ.

"ನನ್ನಿಂದ ಕಾವ್ಯವಾಚನ ನಡೆಯುವ ಮುಂಚೆ ತಮ್ಮ ಮಿತ್ರ ಮಂಡಲಿಯಿಂದ ಸಂಗೀತವಾಗಬೇಕೆಂದು ನಮ್ಮೆಲ್ಲರ ಇಚ್ಛೆಯಾಗಿದೆ. ಈವತ್ತು ದೈವಾಯತ್ತವಾಗಿ ಈ ಸುಯೋಗವೊದಗಿ ಬಂದಿದೆ. ನೀವು ನಮ್ಮ ಕೋರಿಕೆಯನ್ನೀಡೇರಿಸಬೇಕೆಂದು ನಮ್ಮೆಲ್ಲರ ವಿನಂತಿ."

"ಆಗಬಹುದು" ಎಂದಳು ಚಂದ್ರವದನೆ. ಇದೇನು ಇವಳು ಒಮ್ಮೆಲೇ ಹೀಗೆ ಸಮ್ಮತಿಸಿಬಿಟ್ಟಳೆಂದು ಅವಳ ಗೆಳತಿಯರೆಲ್ಲರಿಗೂ ಸೋಜಿಗವೆನಿಸಿತು. ಚಂದ್ರವದನೆ ಒಳಗೆ ಹೋಗಿ ಆಳಿನ ಕೈಲಿ ಶ್ರುತಿಮಾಡಿ ಸಿದ್ಧವಾಗಿದ್ದ ತಂಬೂರಿಯನ್ನು ಹೊರಿಸಿಕೊಂಡು ಬಂದಳು. ಆಳು ತಂಬೂರಿಯನ್ನು ರತ್ನಗಂಬಳಿಯ ಮೇಲಿಟ್ಟ. "ನೀನೂ ಬಾ ಸುಮಿತ್ರಾ. ಜತೆಗೆ ಹಾಡುವಿಯಂತೆ" ಎಂದಳು ಚಂದ್ರವದನೆ. ತುಸು ನಾಚಿಕೆಯಿಂದ ಸುಮಿತ್ರೆ ಅವಳ ಪಕ್ಕದಲ್ಲಿ ಬಂದು ಕೂತಳು. ಶ್ರುತಿ ಸರಿಯಾಗಿದೆಯೋ, ಇಲ್ಲವೋ ಎಂದು ಒಂದೆರಡು ಸಲ ತಂತಿ ಮಿಾಟಿದಳು ಚಂದ್ರವದನೆ. ಶ್ರುತಿ ಸರಿಯಾಗಿದೆಯೆಂದು ಅವಳಿಗನ್ನಿಸಿತು. ಪದ್ಮಾಸನ ಹಾಕಿಕೊಂಡು ತನ್ನ ಬಲಗೈಯಲ್ಲಿ ತಂಬೂರಿ ಹಿಡಿದು, ಎಡಗೈಯಲ್ಲಿ ತಾಳ ಹಾಕುತ್ತಾ ಹಾಡಲಾರಂಭಿಸಿದಳು. ಸುಮಿತ್ರೆಯೂ ಜತೆಗೆ ದನಿಗೂಡಿಸಿದಳು. "ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು" ಎಂಬ ಗೀತೆಯನ್ನೇ ಚಂದ್ರವದನೆ

ಆರಂಭಿಸಿದಳು. ಇಬ್ಬರ ಕಂಠಗಳೂ ಸುಶ್ರಾವ್ಯವಾಗಿದ್ದವು. ಹಾಡು ಅಲೆ ಅಲೆಯಾಗಿ ತೇಲಿಬರುತ್ತಿತ್ತು. ರಾಗಮಾಲಿಕೆಯಲ್ಲಿ ಹಾಡಿದ ಆ ಗೀತವನ್ನು ಕೇಳಿ ಎಲ್ಲರೂ ತಲೆದೂಗತೊಡಗಿದರು. ಶ್ರೀಧರನಿಗುಂಟಾದ ಸಂತೋಷ ಕ್ಕಂತೂ ಪಾರವೇ ಇದ್ದಿರಲಿಲ್ಲ. ಕನ್ನಡ ನಾಡಿನ ರಾಷ್ಟ್ರ ಗೀತೆಯೊಂದಿಗೆ ಗಾಯನವನ್ನು ಆರಂಭಿಸಿದ ಚಂದ್ರವದನೆಯ ಬುದ್ಧಿವಂತಿಕೆಯನ್ನು ಮೆಚ್ಚಿ ಕೊಂಡ. ಮುಂದೆ ಯಾವುದನ್ನು ಹಾಡಬೇಕೆಂಬರ್ಥ ಬರುವಂತೆ ಗೆಳತಿಯು ರಿಬ್ಬರೂ ಶ್ರೀಧರನ ಮುಖವನ್ನೇ ನೋಡಹತ್ತಿದರು. ಅವರ ಇಂಗಿತವನ್ನು ಗ್ರಹಿಸಿದ ಶ್ರೀಧರ, "ಅವತ್ತು ಕರ್ಣಾಟಕ ಸಂಘದ ವಾರ್ಷಿಕೋತ್ಸವದಲ್ಲಿ ನೀವು ಹಾಡಿದ ದೇವರನಾಮಗಳನ್ನ ಹಾಡಿ" ಎಂದು ಸೂಚಿಸಿದ. ಗೆಳತಿಯು ರಿಬ್ಬರೂ"ತಾಳುವಿಕೆಗಿಂತ ತಪವಿಲ್ಲ ಮನುಜಾ" ಎಂಬ ವಾದಿರಾಜರ ಕೀರ್ತನೆ ಯನ್ನು ಬಾಗೇಶ್ವರೀ ರಾಗದಲ್ಲಿ ಹಾಡಲಾರಂಭಿಸಿದರು. ಗಾಯನತರಂಗ ತರಂಗವಾಗಿ ಹೊರಬಿದ್ದು ಶ್ರೋತೃಗಳಿಗೆ ಕರ್ಣಾನಂದವನ್ನುಂಟುಮಾಡಿತು. ಸಂಗೀತ ಮಾಧುರ್ಯದಿಂದ ಎಲ್ಲರ ಹೃದಯಗಳೂ ಆರ್ದ್ರಗೊಂಡವು. ಹಾಡು ಮುಗಿದನಂತರ "ಭೇಷ್, ಭಲೆ, ಎಂಬ ಉದ್ಗಾರ ಶ್ರೀಧರನಿಂದ ಹೊರಬಿತ್ತು." ಬಹಳ ಚನ್ನಾಗಿ ಹಾಡಿದಿರಿ. ನನ್ನ ಮನಸ್ಸು ಆನಂದದಿಂದ ಕುಣಿಯುಹತ್ತಿದೆ. ಈ ಹಾಡಿನ ಭಾವ ಅದೆಷ್ಟು ಸೊಗಸಾಗಿದೆ. ಹಾಡಿನ ಭಾವಕ್ಕೆ ತಕ್ಕಹಾಗೆಯೇ ನೀವು ಆರಿಸಿಕೊಂಡಿರುವ ರಾಗವೂ ಕೂಡಾ. ಇನ್ನೂ ಒಂದೆರಡು ದಾಸರಪದಗಳನ್ನು ಹಾಡಿ ಆಯಾಸವಾಗದಿದ್ದರೆ" ಎಂದ ಶ್ರೀಧರ.

ಗೆಳತಿಯರಿಬ್ಬರೂ ಶ್ರೀಧರನ ಮೆಚ್ಚಿಕೆಯ ಮಾತುಗಳನ್ನು ಕೇಳಿ ತುಸುನಾಚಿದರು. ತಮ್ಮ ಸಂಗೀತದಿಂದ ಶ್ರೋತೃಗಳಿಗುಂಟಾದ ಆನಂದಾ ತಿಶಯುವನ್ನು ಕಂಡು ಅವರಿಗೊಂದು ಬಗೆಯ ಸಂತೃಪ್ತಿಯುಂಟಾಯಿತು.

"ನಿಮಗೆ ಸಂತೋಷವಾಗುವುದಾದರೆ ಇನ್ನೂ ಹಾಡುತ್ತೇವೆ" ಎನ್ನುತ್ತಾ ಚಂದ್ರವದನೆ ಅತಿಮೋಹಕವಾದ ಮುಗುಳ್ನಗೆ ಬೀರಿದಳು. "ಕುಲಕುಲ, ಕುಲವೆನ್ನುತಿಹರೋ" ಎಂಬ ಕನಕದಾಸರ ಕೀರ್ತನೆಯನ್ನು ಭೀಮ್‌ಪಲ್ಹಾಸ್ ರಾಗದಲ್ಲಿ ಹಾಡಲಾರಂಭಿಸಿದರು ಗೆಳತಿಯರು. ಶ್ರೀಧರನಿ ಗಂತೂ ಆ ರಾಗದ ಮೇಲೆ ವಿಶೇಷವಾದ ಪ್ರೇಮ. ಅಂತೆಯೇ ಮೈಯೆಲ್ಲಾ

ಕಿವಿಯಾಗಿ ಕೂತು ಕೇಳಿದ ಆ ಹಾಡನ್ನು. ಆಹಾಡಿನ ಕೊನೆಯ ಚರಣವಾದ ಆತ್ಮ ಯಾವ ಕುಲ-ಜೀವ ಯಾವ ಕುಲ | ತತ್ವ ಪಂಚೇಂದ್ರಿಯಗಳ ಕುಲಪೇಳಿರಯ್ಯ | ಆತ್ಮಾಂತರಾತ್ಮಾ ನೆಲೆಯಾದಿಕೇಶವ | ಆತನೊಲಿದ ಮೇಲೇ ಯಾತರಕುಲವೋ ||" ಎಂದು ಹಾಡುವಾಗಲಂತೂ ಗೆಳತಿಯರಿಬ್ಬರ ಕಂಠ ತಾರಸ್ವರಕ್ಕೆ ಹೊರಟುಹೋಗಿತ್ತು. ಆ ಹಾಡನ್ನು ಕೇಳಿ ಶ್ರೀಧರನಿಗೊಬ್ಬನಿಗೇ ಅಲ್ಲ ಹರ್ಷವುಂಟಾದ್ದು. ಅವನ ಗೆಳೆಯರೆಲ್ಲರೂ ಅದನ್ನು ಕೇಳಿ ಬಹಳವಾಗಿ ಆನಂದಗೊಂಡರು. ಗೆಳೆಯರೆಲ್ಲರೂ ಏಕಕಂಠರಾಗಿ "ಭೇಷ್. ಬಹಳ ಸೊಗಸಾಗಿ ಹಾಡುತ್ತೀರಿ ನೀವಿಬ್ಬರೂ. ಅದೇನು ಕಂಠ ನಿಮ್ಮದು. ನಮಗೀವತ್ತು ದೊಡ್ಡ ಸಂಗೀತ ಸಮಾರಾಧನೆಯನ್ನೇ ಮಾಡಿಸಿಬಿಟ್ಟಿರಿ" ಎಂಬ ಮೆಚ್ಚಿಕೆಯ ನುಡಿಗಳನ್ನಾಡಿದರು. ಅವರಂದ ಮಾತು ಅಕ್ಷರಶಃ ನಿಜವಾಗಿತ್ತು. ಚಂದ್ರವದನೆ ಸುಮಿತ್ರೆಯರಿಬ್ಬರಿಗೂ ದೈವದತ್ತವಾದ ಕಂಠಶ್ರೀ ಇತ್ತು. ಜತೆಗೆ ಹಲವಾರು ವರ್ಷಗಳಿಂದ ನಿರಂತರವಾದ ಸಂಗೀತಾಭ್ಯಾಸವೂ ನಡೆದಿತ್ತು. ದೈವದತ್ತವಾದ ಕಂಠಶ್ರೀಗೆ ತಕ್ಕ ಶಿಕ್ಷಣ, ಸಂಸ್ಕಾರಗಳು ದೊರೆತು ಅವರ ಸಂಗೀತ ಪುಟವಿಟ್ಟ ಚಿನ್ನದಂತಾಗಿತ್ತು. ಚಂದ್ರವದನೆ ತಂಬೂರಿಯನ್ನು ಕೆಳಗಿಟ್ಟಳು. ಗೆಳತಿಯರಿಬ್ಬರೂ ಎದ್ದು ಸೋಫಾದಮೇಲೆ ಕೂತುಕೊಂಡರು. ಮುಂದೆ ಶ್ರೀಧರನ ಸರದಿ ಬಂತು. ಅವನು ಕಾವ್ಯವಾಚನ ಮಾಡಲೆದ್ದು ನಿಂತ. ಅವನ ಮುಖದಲ್ಲಿ ಉತ್ಸಾಹ ಉಕ್ಕೇರುತ್ತಿತ್ತು. ಅದುವರೆಗೂ ನಡೆದಿದ್ದ ಮಧುರ ಗಾಯನ ಅವನ ಹೃದಯವನ್ನು ಅರಳಿಸಿತ್ತು. ಶ್ರೀಧರ ತನ್ನ ಪದ್ಧತಿಯಂತೆ ಗಂಭೀರವಾಗಿ ಮಾತನಾಡತೊಡಗಿದ. "ಮಾನ್ಯ ಗೆಳೆಯ ಗೆಳತಿಯರೇ, ಇದೇ ತಾನೇ ನಡೆದ ಸ್ವರ್ಗೀಯ ಸಂಗೀತವನ್ನಾಲಿಸಿ ನಿಮ್ಮೆಲ್ಲರ ಹೃದಯಗಳೂ ಆನಂದಸಾಗರದಲ್ಲಿ ತೇಲಾಡುತ್ತಿರಬಹುದು. ನಿಮ್ಮೆಲ್ಲರ ಕಿವಿಗಳಲ್ಲೂ ಆ ಮಧುರ ಗಾಯನವೇ ಇನ್ನೂ ಗುಣುಗುಣಿಸುತ್ತಿರಬಹುದು. ಇದುವರೆಗೂ ಗಂಧರ್ವಲೋಕದಲ್ಲಿ ವಿಹರಿಸುತ್ತಿದ್ದವರನ್ನು [illegible] ಈ ಮರ್ತ್ಯಲೋಕಕ್ಕೆಳೆದೊಯ್ಯಬೇಕಾಗಿರುವ [illegible] ಬೇಡವೆಂದರೂ ನನ್ನ ಪಾಲಿಗೆ ಬಂದಿದೆ. [illegible] ರಸಾನುಭೂತಿಗೆ ಭಂಗವುಂಟುಮಾಡಲು ಸರ್ವಥಾ ನನಗಿಷ್ಟವಿಲ್ಲ. ಆದರೂ ನೀವೆಲ್ಲ [illegible]

ನನ್ನಮೇಲೆ ಹೊರಿಸಿರುವ ಜವಾಬ್ದಾರಿಯನ್ನು ನಿರ್ವಹಿಸುವ ಸಲುವಾಗಿ ಎದ್ದು ನಿಂತಿದ್ದೇನೆ. ನನಗೆ ಸಂಗೀತ ಬರದು. ಆದರೆ ಸಂಗೀತವೆಂದರೆ ಪಂಚಪ್ರಾಣ. ಸ್ವತಃ ಸಂಗೀತಗಾರನಲ್ಲದಿದ್ದರೂ ಸಂಗೀತ ಸುಧಾರಸ ವನ್ನನುಭವಿಸಿ ಆನಂದಿಸಬಲ್ಲೆ. ನನ್ನದೇ ಆದ ಧಾಟಿಯಲ್ಲಿ ನಾನಿಂದು ಕಾವ್ಯವಾಚನವನ್ನು ನಡೆಸಬೇಕಾಗಿದೆ. ಇದಕ್ಕಾಗಿ ತಮೆಲ್ಲರ ಕ್ಷಮೆಯನ್ನು ಯಾಚಿಸುತ್ತೇನೆ'' ಎಂದಿಷ್ಟು ಪೀಠಿಕೆಯನ್ನು ಹೇಳಿ ತನ್ನ ಕಾವ್ಯವಾಚನ ವನ್ನಾರಂಭಿಸಿದ. ಮೊದಲು ಬಹುಮಾನಿತವಾದ "ಕನ್ನಡದ ಕಣ್ಣು'' ಎಂಬ ನೀಳ್ಗವನವನ್ನು ಓದಿದ. ಅದೇ ಸುಮಾರು ಅರ್ಧಗಂಟೆ ಹಿಡಿಯಿತು. ಅನಂತರ ತನಗೆ ಬಹಳ ಮೆಚ್ಚಿಕೆಯಾಗಿದ್ದ ಕೆಲವು ಕವನಗಳನ್ನು ಹಾಡಿದ. ಮೃದುಮಧುರ ಪದವಿನ್ಯಾಸ, ವಿಪುಲವಾದ ಭಾವಸಂಪತ್ತು, ವಿಚಾರ ತೀಕ್ಷ್ಣತೆ, ಬಿಗಿಯಾದ ಬಂಧ ಹಾಗೂ ನಿರರ್ಗಳ ಧಾಟಿ—ಇವು ಶ್ರೀಧರನ ಭಾವಗೀತಗಳ ವಿಶಿಷ್ಟ ಲಕ್ಷಣಗಳಾಗಿದ್ದುವು. ಅವನ ಕಾವ್ಯವಾಚನವನ್ನು ಕೇಳಿ ಅವನ ಗೆಳೆಯ ಗೆಳತಿಯರೆಲ್ಲರೂ ಬಹಳವಾಗಿ ಸಂತೋಷಪಟ್ಟರು. ಕಾವ್ಯರಚನೆಯಲ್ಲಿ ಅವನಿಗೆ ಸಕಲ ಶ್ರೇಯಸ್ಸೂ ದೊರೆಯಲೆಂಬುದಾಗಿ ಅವನ ಮಿತ್ರಮಂಡಲಿಯವರು ಹೃತ್ಪೂರ್ವಕವಾಗಿ ಹಾರೈಸಿದರು. ಅಂದಿನ ಸಮಾರಂಭವನ್ನು ಮುಕ್ತಾಯಗೊಳಿಸುವ ಮುಂಚೆ, ವಂದನಾ ಸಮರ್ಪಣೆ ಗೈಯಲು ಚಂದ್ರವದನೆ ಎದ್ದು ನಿಂತಳು. "ಮಾನ್ಯ ಗೆಳೆಯ ಗೆಳತಿಯರೇ, ಇಂದು ನಮ್ಮೆಲ್ಲರಗೂ ಬಹಳ ಉತ್ಸವದ ದಿನ. ನಮ್ಮ ಸಹಪಾಠಿಗಳ ಲ್ಲೊಬ್ಬರಾದ ಮಾನ್ಯ ಮಿತ್ರರಾದ ಶ್ರೀಯುತ ಶ್ರೀಧರರನ್ನು ಸತ್ಕರಿಸುವ ಸಲುವಾಗಿ ನಾವಿಲ್ಲಿ ನೆರೆದಿದ್ದೇವೆ. ಅವರಿನ್ನೂ ತರುಣರು. ಈ ವಯಸ್ಸಿನಗೇ ಅವರು ಕಾವ್ಯಕ್ಷೇತ್ರದಲ್ಲಿ ಇಷ್ಟರಮಟ್ಟಿಗೆ ಯಶಸ್ಸು ಸಂಪಾದಿಸಿರುವ ಸಂಗತಿ ಯಾರಿಗಾದರೂ ಅಭಿಮಾನಾಸ್ಪದವಾದ ಮಾತು. ಅವರಿಗಿನ್ನೂ ಹೆಚ್ಚಿನ ಉತ್ಕರ್ಷ ದೊರೆಯಲೆಂದೂ, ಅವರಿಂದ ಇತೋಽಪ್ಯತಿಶಯವಾದ ಸಾಹಿತ್ಯ ಸೇವೆ ನಡೆಯಲೆಂದೂ ನಾನು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

ನಮ್ಮ ಆಹ್ವಾನವನ್ನು ಮನ್ನಿಸಿ, ಇಲ್ಲಿಗೆ ದಯಮಾಡಿಸಿ ತಮ್ಮ ಕಾವ್ಯವಾಚನದಿಂದ ನಮ್ಮೆಲ್ಲರ ಹೃದಯಗಳನ್ನೂ ಅರಳಿಸಿರುವ ಶ್ರೀಯುತರಿಗೆ ಆ ದಯಾಮಯನಾದ ಭಗವಂತನು ಆಯುರಾರೋಗ್ಯ ಐಶ್ವರ್ಯಾದಿ

ಸಕಲ ಸಂಪತ್ತುಗಳನ್ನೂ ಯಥೇಷ್ಟವಾಗಿ ದಯಪಾಲಿಸಿ ಅನವರತ ಕಾಪಾಡಲೆಂದು ಆ ಪರಮೇಶ್ವರನಲ್ಲಿ ನನ್ನ ಭಕ್ತಿಪೂರ್ವಕವಾದ ಪ್ರಾರ್ಥನೆಯನ್ನು ಸಲ್ಲಿಸುತ್ತೇನೆ. ಮತ್ತೊಂದು ಮಾತು. ತಾವೆಲ್ಲರೂ ದೊಡ್ಡ ಮನಸ್ಸು ಮಾಡಿ ಇಲ್ಲಿಗೆ ದಯಮಾಡಿಸಿ, ಈ ಸತ್ಕಾರಕೂಟದಲ್ಲಿ ಭಾಗವಹಿಸಿ, ಈ ಸಮಾರಂಭವನ್ನು ಇಷ್ಟು ಯಶಸ್ವಿಗೊಳಿಸಿದ್ದಕ್ಕಾಗಿ ನಿಮ್ಮೆಲ್ಲರಿಗೂ ನನ್ನ ಹೃತ್ಪೂರ್ವಕವಾದ ವಂದನೆಗಳನ್ನರ್ಪಿಸುತ್ತೇನೆ. ಇನ್ನು ರಾಷ್ಟ್ರಗೀತೆಯೊಂದಿಗೆ ಇಂದಿನ ಸಮಾರಂಭವು ಮುಕ್ತಾಯವಾಗಲಿದೆ" ಎಂದು ಮುಗಿಸಿದಳು. ಎಲ್ಲರೂ ಕರತಾಡನ ಮಾಡಿದರು. ಎಲ್ಲರೂ ಎದ್ದುನಿಂತು ಒಟ್ಟಿಗೆ "ಜನಗಣಮನ" ಹಾಡಿದರು. ಶ್ರೀಧರನ ಸತ್ಕಾರಕೂಟ ಅತಿ ಯಶಸ್ವಿಯಾಗಿ ಮುಕ್ತಾಯಗೊಂಡಿತು.

## ೧೨

ಒಂದು ವಾರದಿಂದಲೂ ಭಾಗ್ಯಮ್ಮನವರಿಗೆ ನಿಮಿಷವೂ ಪುರುಸತ್ತಿಲ್ಲದ ಹಾಗೆ ಕೈತುಂಬ ಕೆಲಸ. ಅದರಲ್ಲೂ ಈವತ್ತು ವಿಶೇಷ. ಅಡಿಗೇಮನೆಯ ತುಂಬಾ ಸಾಮಾನುಗಳನ್ನು ಹರಡಿಕೊಂಡುಬಿಟ್ಟಿದ್ದಾರೆ. ಶಾರದೆ ಕಮಲೂ ಇಬ್ಬರೂ ತಾಯಿಗೆ ನೆರವಾಗುತ್ತಿದ್ದಾರೆ. ಒಂದುಕಡೆ ಬಾಣಲಿಯಲ್ಲಿ ಮುಚ್ಚೋರೆ ಕರೆಯುತ್ತಿದ್ದಾರೆ. ಅದಾಗುತ್ತಿರುವಾಗ ಒಲೆ ಮುಂದೆ ಸುಮ್ಮನೇಕೆ ಕೂತಿರಬೇಕೆಂದು ಹುರಿಗಾಳಿಗೆ ಉಪಕರಣಗಳನ್ನು ಸೇರಿಸುತ್ತಿದ್ದಾರೆ. ಮತ್ತೊಂದು ಬಾಣಲಿ ಒಲೆಯಮೇಲೆ ಕೂತಿದೆ. ಅದರಲ್ಲಿ ಕಳ್ಳೇಕಾಯಿ ಬೆಲ್ಲ ಪಕ್ವವಾಗುತ್ತಿದೆ. ಅದರ ಮುಂದೆ ಶಾರದೆ ಕೂತಿದ್ದಾಳೆ. ಉಪ್ಪೇರಿ ಮಣೆಯ ಮುಂದೆ ಕೂತು ಕಮಲೂ ಬಾಳೇಕಾಯಿ ಹಚ್ಚುತ್ತಿದ್ದಾಳೆ. ಅಡಿಗೆ ಮನೆಯಲ್ಲಿ ಸಂಭ್ರಮವೋ ಸಂಭ್ರಮವಾಗಿದೆ. "ಸ್ವಲ್ಪ ಕಟ್ಟಿಗೇ ಮುಂದಕ್ಕೆಳೆದುಬಿಡು ಶಾರೂ. ಪಾಕ ಎಲ್ಲಾದರೂ ಗಟ್ಟಿಯಾಗಿಹೋದೀತು. ಆಮೇಲೆ ಸರಿಯಾಗಿ ಬರೊಲ್ಲ" ಎಂದು ತಮ್ಮ ದೊಡ್ಡ ಮಗಳನ್ನೆಚ್ಚರಿಸುತ್ತಿದ್ದ ಹಾಗೆಯೇ ಭಾಗ್ಯಮ್ಮ ತಮ್ಮ ಚಿಕ್ಕಮಗಳನ್ನು ಕುರಿತು, "ಬಾಳೇಕಾಯಿ ಹೆಚ್ಚಾಗಿದ್ದರೆ ಕೊಡೇ ಕಮಲೂ. ಚಿಕ್ಕಾಲೀ ಮುಗೀತು. ಇನ್ನು ಉಪ್ಪೇರೀ ಕರೀತೇನೆ" ಎಂದು ಹೇಳುತ್ತಿದ್ದಾರೆ. ಭಾಗ್ಯಮ್ಮನವರಿಗೆ ಶಾರದೆ ಊರಿಗೆ ಬಂದಮೇಲೆ ಚತುರ್ಭುಜಗಳು ಬಂದ

ಹಾಗಾಗಿಬಿಟ್ಟಿದ್ದವು. ಎಷ್ಟು ಕೆಲಸ ಮಾಡಿದರೂ ದಣಿವಿಲ್ಲ. ಎಷ್ಟು ದುಡಿದರೂ ತೃಪ್ತಿಯಿಲ್ಲ.

ಶಾರದೆ ತೌರಿಗೆ ಬಂದು ಒಂದು ವಾರ ಮಾತ್ರನಾಗಿತ್ತು. ಸುಬ್ಬಣ್ಣ ನವರೇ ಬೆಂಗಳೂರಿಗೆ ಹೋಗಿ ಮಗಳನ್ನು ಕರೆತಂದರು. ಮಗಳು ಬಂದ ದಿನದಿಂದಲೇ ಭಾಗ್ಯಮ್ಮನವರ ದಿನಚರಿಯಲ್ಲಿ ಹಲವು ಮಾರ್ಪಾಡುಗಳು ಉಂಟಾದುವು. ಬೆಳಗಿನಜಾವ ಐದುಗಂಟೆಗೆಲ್ಲಾ ಎದ್ದುಬಿಡುವರು. ಸ್ನಾನಮಾಡಿ ಮಡಿಯುಟ್ಟು ಅಡಿಗೆಯ ಮನೆಯನ್ನು ಹೊಕ್ಕರೆಂದರೆ ತೀರಿತು. ಪುನಃ ಅವರು ವಿರಾಮ ಪಡೆಯುವುದು ರಾತ್ರಿ ಹನ್ನೊಂದು ಗಂಟೆಗೇ.

ಅಡಿಗೆ ಮನೆಯಲ್ಲಿ ಇಷ್ಟೆಲ್ಲಾ ಸಂಭ್ರಮವಾಗುತ್ತಿದ್ದರೆ, ಬೀದಿಯಲ್ಲಿ ಹೂವಾಡಿಗನೊಬ್ಬ, "ಮಲ್ಗೇಮೊಗ್ಗೂ" ಎಂದು ಕೂಗಿಕೊಂಡುಹೋಗು ತ್ತಿದ್ದ. ಭಾಗ್ಯಮ್ಮನವರಿಗೆ ಇದು ಹೇಗೋ ಕಿವಿಗೆ ಬಿದ್ದುಬಿಡ್ತು. ಕೂಡಲೇ ತಮ್ಮ ಮಗಳನ್ನು ಕುರಿತು "ಹೋಗೇ ಕಮಲೂ. ಬೀದೀಲಿ ಮಲ್ಗೇ ಮಗ್ಗು ಬಂದಿದೆ ಕರಿ. ವ್ಯಾಪಾರ ಮಾಡೋಣ" ಎಂದರು. ತಕ್ಷಣ ಕಮಲೂ ಒಂದೇ ಉಸಿರಿನಲ್ಲಿ ಬೀದಿಗೆ ಓಡಿದಳು. ಬೀದೀ ಬಾಗಿಲಿಗೆ ಹೋಗುವಷ್ಟರಲ್ಲೇ ಹೂವಾಡಿಗನೇ ಮನೆಯ ಮುಂದೆನಿಂತಿದ್ದ.

ಕಮಲೂ "ಹೇಗಪ್ಪಾ ಸೇರು" ಎಂದು ಕೇಳಿದಳು.

"ಒಂದು ರೂಪಾಯಿ ತಾಯೀ ಸೇರು. ಹೂವು ಸವರನ್ ಹಂಗೈತೆ. ತಗೊಳ್ರವ್ವಾ" ಎನ್ನುತ್ತಾ ಹೂವಾಡಿಗ ತಲೆಯಮೇಲೆ ಹೊತ್ತಿದ್ದ ಬುಟ್ಟಿ ಯನ್ನಿಳಿಸಿದ.

ಕಮಲೂ ಹೂವು ನೋಡಿದಳು. ದುಂಡುಮಲ್ಲಿಗೇ ಹೂವು. ಬಹಳ ಸೊಂಪಾಗಿ ಬೆಳೆದಿತ್ತು. "ಕೊಡೋದು ಹೇಳಪ್ಪಾ. ಒಂದು ರೂಪಾಯಿ ಬಹಳ ದುಬಾರಿ" ಎಂದು ಚೌಕಾಸಿ ಮಾಡಿದಳು.

"ನಿಮಗೆಷ್ಟು ಬೇಕ್ರವ್ವಾ" ಎಂದ ವ್ಯಾಪಾರಿ.

"ಕೊಡೋದು ಹೇಳಪ್ಪಾ. ಈಗ ಶ್ರಾವಣಮಾಸ. ಮಲ್ಲಿಗೇ ಹೂವಿನ ಕಾಲ. ಒಂದು ರೂಪಾಯಿ ಸೇರು ಹೇಳ್ತೀಯಲ್ಲಾ."

"ಹನ್ನೆರಡಾಣೇ ಮಾಡ್ಕೊಳ್ತೀನಿ ಬೇಕೇನ್ರವ್ವಾ."

"ಇರು ಬರ್‍ತೀನಿ" ಎನ್ನುತ್ತಾ ಕಮಲೂ ಮನೆಯೊಳಕ್ಕೆ ಓಡಿದಳು. ಅಷ್ಟು ಹೊತ್ತಿಗೆ ಭಾಗ್ಯಮ್ಮನವರೇ ಎದ್ದುಬಂದರು. ಹೂವು ನೋಡಿದರು. ಅವರ ಮನಸ್ಸಿಗೊಪ್ಪಿತು.

"ಹನ್ನೆರಡಾಣೇಗೆ ಸೇರಿನಂತೆ ಮಾತಾಡಿದ್ದೀನಮ್ಮಾ" ಎಂದಳು ಕಮಲೂ.

"ಹಾಗಾದರೆ ಎರಡು ಸೇರು ತಗೊಳ್ಳೋಣ. ನಮ್ಮ ಶಾರದೇಗೆ ಮಗ್ಗಿನ ಜಡೇ ಹಾಕೋಣ. ಪಾತ್ರೆ ತಗೊಂಡು ಬಾ ಹೋಗು" ಎಂದರು ಭಾಗ್ಯಮ್ಮ. ಕಮಲೂ ಹೋಗಿ ಪಾತ್ರೆ ತಂದಳು. ಹೂವಾಡಿಗ ತಕ್ಕಡಿಯಲ್ಲಿ ಸೇರು ಬೊಟ್ಟುಹಾಕಿ ಹೂವು ತೂಗತೊಡಗಿದ.

"ಸೇರೆಲ್ಲಾ ಚೆನ್ನಾಗಿ ಬಗ್ಗಿಸಪ್ಪಾ. ನೀರೇ ಕೂತುಬಿಡುತ್ತೆ ತೂಕಕ್ಕೆ" ಎಂದಳು ಕಮಲೂ. ಹೂವಾಡಿಗ ತಲೆಯೆತ್ತಿ ನೋಡಿ "ಎಷ್ಟು ಹುಷಾರಿದ್ದಾರವ್ವ ಈಯಮ್ಮ" ಎಂದ ನಗುತ್ತಾ. ಭಾಗ್ಯಮ್ಮ ಎರಡು ಸೇರು ಮಗ್ಗು ತೂಗಿಸಿಕೊಂಡು ಅವನಿಗೆ ದುಡ್ಡು ಕೊಟ್ಟು ಕಳಿಸಿದರು. ಹೂವೇನೋ ತೆಗೆದುದಾಯ್ತು. ಇನ್ನು ಶಾರದೆಗೆ ಮೊಗ್ಗಿನ ಜಡೇಹಾಕಬೇಕು. ಆದರೆ ಭಾಗ್ಯಮ್ಮನವರಿಗೆ–ಪಾಪ–ಬರದು. ಏನು ಮಾಡಬೇಕೆಂದು ಕ್ಷಣಕಾಲ ಯೋಚಿಸತೊಡಗಿದರು. ಅವರ ಬುದ್ಧಿಗೇನು ಹೊಳೆಯಿತೋ ಏನೋ ತಮ್ಮ ಮಗಳನ್ನು ಕರೆದು "ಹೋಗಿ ಸ್ವಲ್ಪ ಸುಶೀಲಮ್ಮನ್ನ ನಮ್ಮಮ್ಮ ಬರಹೇಳ್ತಾರೇಂತ ಕರಕೊಂಡುಬಾರೇ ಕಮಲೂ. ಅವರು ಚೆನ್ನಾಗಿ ಹಾಕ್ತಾರೆ ಮೊಗ್ಗಿನ ಜಡೇನ. ಅವರ ಹಿರೀಮಗಳು ಕೌಸಲ್ಯೆ ಬಾಣಂತನಕ್ಕೆ ಬಂದಿದ್ದಾಗ ಅವಳಿಗೊಂದುಸಲ ಹಾಕಿದ್ದರು. ನನಗಿನ್ನೂ ಚೆನ್ನಾಗಿ ಜ್ಞಾಪಕವಿದೆ. ಓಡಿಹೋಗಿ ಕರಕೊಂಡು ಬಾ" ಎಂದು ಹೇಳಿ ಕಳಿಸಿದರು. ಇಂತಹ ಕೆಲಸಗಳೆಂದರೆ ಕಮಲೂಗೆ ಬಹಳ ಸಂತೋಷ. ಅವಳು ಒಂದೇ ಓಟಕಿತ್ತಳು.

ಸುಶೀಲಮ್ಮ ಮನೆಯಲ್ಲೇ ಇದ್ದರು. ತಾಯಿಮಗಳಿಬ್ಬರೂ ಅದೇನೋ ಕಸೂತೀಕೆಲಸ ಮಾಡುತ್ತಿದ್ದರು. ಕಮಲೂ ಬಂದವಳೇ ಸುಶೀಲಮ್ಮನ ಹತ್ತಿರಹೋಗಿ "ರ್‍ರೀ ಸುಶೀಲಮ್ಮ, ನಮ್ಮ ತಾಯೀ ನಿಮ್ಮನ್ನೇಕೋ

ಬರಹೇಳಿದ್ದಾರ್ರೀ. ಜೇಗ ಬನ್ರೀ'' ಎಂದು ಗೋಗರೆದುಕೊಂಡಳು. ಕಮಲೂ ಮೇಲುಸಿರು ಬಿಡುತ್ತಿರುವುದನ್ನು ನೋಡಿ ಸುಶೀಲಮ್ಮನವರಿಗೆ ನಗಬೇಕೋ ಅಳಬೇಕೋ ತಿಳಿಯದಾಯಿತು "ಅಯ್ಯೋ ಹುಚ್ಚು ಹುಡುಗೀ! ಅದ್ಯೇಕೇ ಹಾಗೆ ಓಡಿಬಂದೆ! ಏನು ಕೊಳ್ಳೇಹೋಗಿತ್ತೇ ಅಷ್ಟರಲ್ಲಿ ! ನಿಧಾನವಾಗಿ ಬರಬಾರದಾಗಿತ್ತೇನೇ'' ಎಂದರು ನಗುತ್ತಾ ಸುಶೀಲಮ್ಮ.

''ಇಲ್ರೀ. ನಮ್ಮಮ್ಮ ಈಗಲೇ ಬರಹೇಳಿದ್ದಾರೆ. ಬರ್ತೀರೇನ್ರೀ" ಬಹಳ ದೈನಾಸದಿಂದ ಕಮಲೂ ಕೇಳಿಕೊಂಡಳು.

"ಇನ್ನೂ ಅವರು ಆಫೀಸಿಂದ ಬರಲಿಲ್ಲವಲ್ಲೇ ಕಮಲೂ. ಇನ್ನೇನು ಬರೋಹೊತ್ತಾಯ್ತು ಕಣೇ. ಅವರು ಬಂದು ಕ್ಲಬ್ಬಿಗೆ ಹೋದ ಕೂಡಲೇ ಬಂದುಬಿಡ್ತೇನೆ. ಹಾಗಂತ ನಿಮ್ಮ ತಾಯೀಗೆ ಹೇಳು."

ಸುಶೀಲಮ್ಮನವರ ಮಾತು ಕೇಳಿ ಕಮಲೂಗೆ ಸ್ವಲ್ಪ ನಿರಾಶೆ ಯುಂಟಾದರೂ ನಿರ್ವಾಹವಿಲ್ಲದೆ ಅವಳು ಸುಮ್ಮನಾದಳು. ಹಾಗಾದರೆ ಆಮೇಲೆ ಬರ್ತೀರಾ ಸುಶೀಲಮ್ಮ? ಖಂಡಿತಾ ಬರ್ತೀರಿತಾನೇ. ಹಾಗೇ ನಿಮ್ಮ ಜತೇಲಿ ಅಹಲ್ಯೆಯನ್ನೂ ಕರಕೊಂಡು ಬನ್ನಿ.'' ಎಂದು ಹೇಳಿ ಹೊರಡಲುದ್ಯುಕ್ತಳಾದಳು. ಖಂಡಿತಾ ಬರ್ತೀನಮ್ಮಾ" ಎಂದು ಸುಶೀಲಮ್ಮನವರಿಂದ ಆಶ್ವಾಸನೆ ಬಂತು. ಗೆದ್ದೆನೆಂದುಕೊಂಡು ಸಂತೋಷದಿಂದ ಕಮಲೂ ಮನೆಗೆ ಓಡಿದಳು.

ಕಮಲೂ ಹೋದ ಸ್ವಲ್ಪ ಹೊತ್ತಿಗೆಲ್ಲಾ ಶೇಷಗಿರಿರಾಯರು ಮನೆಗೆ ಬಂದರು. ಬಂದವರೇ ಆರಾಮಕುರ್ಚಿಯಲ್ಲಿ ಉಶ್ಯಪ್ಪಾ ಎನ್ನುತ್ತ ಒರಗಿದರು. ಐದು ನಿಮಿಷ ಸುಧಾರಿಸಿಕೊಂಡ ನಂತರ ತಮ್ಮ ಕೋಟು ರುಮಾಲುಗಳನ್ನು ಕಳಚಿದರು. "ಒಂದು ಲೋಟಾ ನೀರು ತಗೊಂಡು ಬಾಮ್ಮಾ ಅಹಲ್ಯಾ'' ಎಂದರು ಸಮೀಪದಲ್ಲಿ ಕೂತು ಸ್ವೆಟರ್ ಹೆಣೆಯುತ್ತಿದ್ದ ತಮ್ಮ ಮಗಳನ್ನು ನೋಡಿ. ಅಹಲ್ಯೆ ಎದ್ದುಹೋದಳು. ಒಳಗಿಂದ ಸುಶೀಲಮ್ಮ ಬಂದರು.

"ಏಕೋ ಬಹಳ ಸುಸ್ತಾಗಿರೋಹಾಗೆ ಕಾಣುತ್ತೆ. ಕಚೇರಿಯಲ್ಲಿ ಕೆಲಸಾ ಜಾಸ್ತೀನೇನೋ" ಎನ್ನುತ್ತಾ ತಮ್ಮ ಪತಿದೇವರ ಹತ್ತಿರ ಸುಳಿದರು.

"ಕೆಲಸಕ್ಕೇನು ಹೇಳು ಬರಗಾಲ ! ಬೇಕಾದಷ್ಟಿರುತ್ತೆ. ಸರ್ಕಾರೀ ಕೆಲಸದ ಹಣೆಬರಹವೇ ಅಷ್ಟು. ನಾಳೇ ನಮ್ಮ ಡಿ. ಸೀ. ಸಾಹೇಬರು ಊರಿಗೆ ಬರ್‍ತಾರಂತೆ. ಆಫೀಸ್ ಇನ್‌ಸ್ಪೆಕ್ಷನ್ ಮಾಡ್ತಾರೆ. ಅವರು ನೋಡಬಹುದಾದ ರಿಕಾರ್ಡ್ಸ್, ರಿಜಿಸ್ಟರೂ ವಗೈರೇನ ಸಿದ್ಧಮಾಡಿಟು ಬರೋಹೊತ್ತಿಗೆ ಇಷ್ಟು ಲೇಟಾಗಿಹೋಯಿತು. ಅಂದಹಾಗೆ ನಮ್ಮ ಶ್ರೀನಿವಾಸರಾಯರು ಕಾಗದಾ ಬರೆದಿದ್ದಾರೆಕಣೇ. ಅದೇ ಮದುವೆಯ ಪ್ರಸ್ತಾಪ. ನಮ್ಮ ಅಹಲ್ಯೆಯ ಜಾತಕಾನ ಕಳಿಸಿರಲಿಲ್ವೇ. ಅವರ ಮಗನ ಜಾತಕಾನೂ, ನಮ್ಮ ಹುಡುಗೀದನ್ನೂ ಜೋಯಿಸರಿಗೆ ತೋರಿಸಿದರಂತೆ. ಎರಡು ಜಾತಕಗಳೂ ಲಕ್ಷಣವಾಗಿ ಕೂಡುತ್ತವೆಯಂತೆ. ಅದರ ವಿಚಾರ ಬರೆದಿದ್ದಾರೆ. ಅವರ ಹುಡುಗಾ ಹುಡುಗೀನ ನೋಡಬೇಕೂಂತ ಹೇಳ್ತಾನಂತೆ. ಹುಡುಗೀನ ಕರಕೊಂಡು ಹೋಗಿ ತೋರಿಸೋಕ್ಕೆ ಅನುಕೂಲವಾಗತ್ಯೇಂತ ಶ್ರೀನಿವಾಸರಾಯರು ಕೇಳಿದ್ದಾರೆ. ನಮ್ಮ ಜವಾಬನ್ನೆದುರುನೋಡ್ತಿರ್‍ತಾರಂತೆ."

ಅಷ್ಟು ಹೊತ್ತಿಗೆ ಅಹಲ್ಯೆ ಒಂದು ಬೆಳ್ಳಿಯ ತಟ್ಟೆಯಲ್ಲಿ ಅಂದು ಮಧ್ಯಾಹ್ನ ಮಾಡಿದ್ದ ಕಾರದವಲಕ್ಕಿಯನ್ನೂ, ಒಂದು ಲೋಟಾದಲ್ಲಿ ನೀರನ್ನೂ ತಂದು ತನ್ನ ತಂದೆಯವರ ಮುಂದಿಟ್ಟಳು. ಶೇಷಗಿರಿರಾಯರಿಗೆ ಬಹಳ ಬಾಯಾರಿಕೆಯಾಗಿತ್ತು. ಮಗಳು ತಂದಿಟ್ಟ ಲೋಟಾ ನೀರನ್ನು ಗಟಗಟನೆ ಕುಡಿದುಬಿಟ್ಟರು. ಕಾರದವಲಕ್ಕಿಯ ತಟ್ಟೆಗೆ ಕೈಹಚ್ಚಿದರು.

ಭಾಗ್ಯಮ್ಮ ಹೇಳಿಕಳಿಸಿದ್ದ ಸಂಗತಿ ಸುಶೀಲಮ್ಮನವರಿಗೆ ಹಠಾತ್ತನೆ ಜ್ಞಾಪಕಕ್ಕೆ ಬಂತು. ಕೂಡಲೇ ತಮ್ಮ ಯಜಮಾನರನ್ನು ಕುರಿತು,

"ಅದ್ಯೇಕೋ ಭಾಗ್ಯಮ್ಮ ನನಗೆ ಹೇಳಿಕಳಿಸಿದ್ದಾರೇಂದ್ರೆ. ಪಾಪ ಆ ಹುಡುಗೀ ನನ್ನ ಜತೇಲೇ ಕರಕೊಂಡು ಹೋಗಬೇಕೆಂದಿದ್ದಳು. ನೀವು ಆಫೀಸಿಂದ ಬಂದಕೂಡ್ಲೇ ಹೊರಟುಬರುವುದಾಗಿ ಹೇಳಿಕಳಿಸಿದೆ. ಹೋಗಿ ಬರ್‍ತೀನಿ. ನನಗೋಸ್ಕರ ಕಾದುಕೊಂಡಿರ್‍ತಾರೆ ಪಾಪ" ಎಂದರು ಸುಶೀಲಮ್ಮ.

ಮಹರಾಯಳಾಗಿ ಹೋಗಿಬಾ. ಅದನ್ನ ಹೇಳೋಕ್ಕಿಷ್ಟು ಹೊತ್ತು ಮಾಡ್ಬೇಕೇ. ಆಗಲೇ ಹೋಗಬಹುದಾಗಿತ್ತಲ್ಲಾ. ನನಗೋಸ್ಕರ ಏಕೆ ಕಾದುಕೊಂಡಿರಬೇಕು".

"ಹಾಗಲ್ಲಾಂದ್ರೇ. ದಿನವೂ ನೀವು ಮನೇಗೆ ಬರೋ ಹೊತ್ತಿನಲ್ಲಿ ನಾನಿಲ್ಲದಿದ್ರೆ ನೀವು ಮನಸ್ಸಿಗೇನು ತಿಳ್ಕೊಳ್ತೀರೋಂತ ದಿಗಿಲು ನನಗೆ. ಇಷ್ಟು ವರ್ಷಾ ನಿಮ್ಮ ಜತೇಲಿ ಸಂಸಾರ ಮಾಡಿದ್ರೂ ನಾನಿನ್ನೂ ಸರಿಯಾಗಿ ನಿಮ್ಮ ಮರ್ಜೀನ ತಿಳಕೊಂಡಿಲ್ಲವಲ್ಲಾಂತ ನನಗೇ ಆಶ್ಚರ್ಯ. ಏನೋ ಮಾಡೋಕ್ಕೆ ಹೋಗಿ ಏನೋ ಆದರೆ ಆಮೇಲೆ ನಾನೇ ತಾನೇ ಅನುಭವಿಸೋಳು. ನಿಮ್ಮ ಮನಸ್ಸು ಈವತ್ತಿದ್ದ ಹಾಗೆ ನಾಳೆ ಇರೊಲ್ಲ. ಕ್ಷಣ ಚಿತ್ತ ಕ್ಷಣ ಪಿತ್ತ ಅಂತಾರಲ್ಲಾ ಹಾಗೆ. ಆಫೀಸಲ್ಲಿ ಯಾರ್‍ಯಾರ ಮೇಲೋ ರೇಗಿರ್ತೀರಿ. ಅದರ ಕೋಪಾನೆಲ್ಲಾ ನನ್ನ ಮೇಲೆ ತೀರಿಸಿ ಬಿಟ್ರೆ ಏನು ಗತಿ ಮಾಡೋದು. ಆದ್ದರಿಂದ ನಾನಿರೋ ಹುಷಾರಲ್ಲಿ ನಾನಿದ್ದು ಬಿಟ್ರೆ ನನಗೆ ಧೈರ್ಯ"

"ಸಾಕೇ ನಿನ್ನ ಅಧಿಕಪ್ರಸಂಗತನ. ಯಾಕೆ ಹೇಳಿಕಳಿಸಿದ್ದಾರೋ ಏನೋ ಬೇಗ ಹೋಗು. ಏನೋ ನಿಂತುಕೊಂಡು ಲೆಕ್ಚರ್ ಕೊಡ್ತಾಳೆ ಇಲ್ಲಿ." ಶೇಷಗಿರಿರಾಯರಿಗೆ ತಮ್ಮ ಹೆಂಡತಿಯ ಮೇಲೆ ತುಸು ಕೋಪವೇ ಬಂದಿತ್ತು. ತಮ್ಮ ಪತಿದೇವರು ರೇಗಿಬಿದ್ದುದನ್ನು ನೋಡಿ ಸುಶೀಲಮ್ಮ ಹೊಟ್ಟೆತುಂಬಾ ನಕ್ಕುಬಿಟ್ಟರು.

"ನೀನೂ ಬಾರೇ ಅಹಲ್ಯಾ. ಏನು ಮಾಡ್ತೀಯ ಮನೇಲಿ ಒಬ್ಬಳೇ ಕೂತ್ಕೊಂಡು. ಹೇಗಿದ್ರೂ ಸಂಗೀತದ ಮೇಷ್ಟ್ರು ಊರಲ್ಲಿಲ್ಲ. ಪಾಠದ ಮೇಷ್ಟ್ರು ಬರೋ ಹೊತ್ತಿಗೆ ಬಂದು ಬಿಡೋಣ" ಎಂದು ತಮ್ಮ ಮಗಳನ್ನು ಕರೆದರು.

"ನೀನು ಹೋಗಮ್ಮ. ನನಗ್ಯಾಕೋ ಒಂಟಿ ತಲೆನೋವು ಆಗಿಂದ. ತಲೇ ಸಿಡಿದು ಹೋಗ್ತಿದೆ. ಮನೇಲೇ ಇರ್ತೇನೆ. ನಿಮ್ಮ ಮಗಳು ಯಾಕೆ ಬರಲಿಲ್ಲಾಂತ ಕೇಳಿಯಾರು ಭಾಗ್ಯಮ್ಮ. ಅವರಿಗೇನೂ ನೀನು ಪ್ರವರ ಹೇಳಬೇಡ. ನಾನು ಹೊರಡೋ ಹೊತ್ತಿಗೆ ಸಂಗೀತ ಮೇಷ್ಟ್ರು ಬಂದು ಬಿಟ್ರೂಂತ ಹೇಳಿಬಿಡು. ನಾನು ಬರದೇ ಹೋದ್ರೆ ಸುಮ್ಮನೇ ಒದ್ದಾಡಿ ಕೊಳ್ಳುತ್ತೆ ಆ ಪ್ರಾಣಿ!"

"ಆಗಲಮ್ಮ, ನೀನು ಹೇಳಿದ್ಹಾಗೇ ವರದಿಯೊಪ್ಪಿಸ್ತೀನಿ" ಎನ್ನುತ್ತಾ ಸುಶೀಲಮ್ಮ ಮನೆಯಿಂದ ಹೊರಬಿದ್ದರು.

ಶೇಷಗಿರಿರಾಯರು ಅಷ್ಟು ಹೊತ್ತಿಗೆ ಉಪಹಾರವನ್ನು ಮುಗಿಸಿದ್ದರು. ಅಂದಿನ ಹಿಂದೂ ಪತ್ರಿಕೆಯ ಪುಟಗಳನ್ನು ಮಗುಚಿಹಾಕುತ್ತಾ ಕುಳಿತರು. ಹುಡುಗರೆಲ್ಲರೂ ಆಟವಾಡಲು ಹೊರಟು ಹೋಗಿದ್ದರು. ಮನೆಯಲ್ಲಿದ್ದ ಇಬ್ಬರು ಆಳುಗಳ ಪೈಕಿ ಒಬ್ಬ ಅಂಗಡಿಗೂ ಮತ್ತೊಬ್ಬ ಪೋಸ್ಟಾಫೀಸಿಗೂ ಹೋಗಿಬಿಟ್ಟಿದ್ದರು. ಮನೆಯಲ್ಲಿದ್ದುದು ತಂದೆ ಮಗಳಿಬ್ಬರೇ. ತಾನು ಬಹುದಿನಗಳಿಂದಲೂ ಚಾತಕ ಪಕ್ಷಿಯಂತೆ ನಿರೀಕ್ಷಿಸುತ್ತಿದ್ದ ಸುಸಂಧಿ ಅಂದು ಪ್ರಾಪ್ತವಾಗಿರುವುದೆಂದು ಅಹಲ್ಯೆ ಹಿಗ್ಗಿ ಹೋದಳು. ಎಲ್ಲರೂ ಮನೆಬಿಟ್ಟು ಹೊರಟು ಹೋಗಿರುವುದು ತನ್ನ ಸುದೈವದಿಂದಲೇ ಎಂದು ಅವಳು ಬಗೆದಳು. ಆದರೆ ತನ್ನ ತಂದೆಯವರೊಂದಿಗೆ ಮಾತು ತೆಗೆಯುವುದೆಂತು !! ಈ ಪ್ರಶ್ನೆ ಅವಳನ್ನು ಬಲವಾಗಿ ಪೀಡಿಸಹತ್ತಿತು.

ಅಹಲ್ಯೆಗೆ ಮೊದಲಿಂದಲೂ ತನ್ನ ತಾಯಿಯ ಹತ್ತಿರಲೇ ಬಳಕೆ ಜಾಸ್ತಿ. ತನ್ನ ತಾಯಿಯ ಹತ್ತಿರ ಬೇಕಾದ ಹಾಗೆ ಹರಟೆ ಕೊಚ್ಚಬಲ್ಲಳು. ತಂದೆಯನ್ನು ಕಂಡರೆ ಅದೇನೋ ಒಂದು ವಿಧವಾದ ಭಯ. ಭಯವೆನ್ನುವುದಕ್ಕಿಂತಲೂ ಗೌರವವೆಂದು ಹೇಳಿದಲ್ಲಿ ತಪ್ಪಾಗಲಾರದು. ತಂದೆಯವರಿಂದ ಯಾವ ಕೆಲಸವಾಗಬೇಕಾದರೂ ತಾಯಿಯ ಮುಖಾಂತರವೇ ಮಧ್ಯಸ್ಥಿಕೆ ಮಾಡಿಸುವುದು ಅವಳಿಗೆ ರೂಢಿಯಾಗಿ ಹೋಗಿತ್ತು. ತನ್ನ ಅಹವಾಲುಗಳು ಏನಿದ್ದರೂ ತನ್ನ ತಾಯಿಯ ಮೂಲಕ ತಂದೆಯವರ ಕಿವಿಗೆ ಬಿದ್ದರೆ ಅವೆಲ್ಲವೂ ಚಾಚೂ ತಪ್ಪದಂತೆ ನೆರವೇರಿಸಲ್ಪಡುತ್ತವೆಂಬ ಭರವಸೆ ಅಹಲ್ಯೆಗಿತ್ತು. ಅಂತೆಯೇ ಇದುವರೆಗೂ ಅವಳ ಅಪೇಕ್ಷೆಗಳು ಯಾವುದೊಂದೂ ನಿರರ್ಥಕವಾದುದಿಲ್ಲ.

ಆದರೆ ತನ್ನ ಆ ಸಣ್ಣ ಪುಟ್ಟ ಆಶೆಗಳಿಗೂ ಇಂದು ತನ್ನ ತಂದೆಯವರ ಹತ್ತಿರ ತಾನು ಪ್ರಸ್ತಾಪಿಸಬೇಕೆಂದಿರುವ ಮಹದ್ವಿಷಯಕ್ಕೂ ಅರ್ಥಾತ್ ಸಂಬಂಧವಿರಲಿಲ್ಲ.

ಬಾಲ್ಯದಲ್ಲಿ ತನ್ನ ಗೆಳತಿಯರೊಂದಿಗೆ ಗೊಂಬೆಯಾಟವಾಡಿದ್ದಳು ಅಹಲ್ಯೆ. ಎಲ್ಲ ಮಕ್ಕಳೂ ಆ ವಯಸ್ಸಿನಲ್ಲಿ ಮಾಡುವಂತೆ ಅವಳೂ ಸಂಸಾರದಾಟ ಹೂಡಿದ್ದಳು. ತಾನು ಬೆಳೆದು ದೊಡ್ಡವಳಾದ ನಂತರ, ಗೃಹಿಣಿಯಾದಾಗ, ಏನೇನು ಮಾಡಬೇಕಾಗುತ್ತದೆಯೋ ಅದೆಲ್ಲವನ್ನೂ ಆ ಚಿಕ್ಕ

ವಯಸ್ಸಿನಲ್ಲೇ ಅನುಕರಿಸಿದ್ದಳು. ತನ್ನ ಸುತ್ತ ಪುಟ್ಟದೊಂದು ಸಂಸಾರ ವನ್ನು ನಿರ್ಮಿಸಿಕೊಂಡಳು. ಅದರಲ್ಲಿ ತಾನೂ ತನ್ನ ಯಜಮಾನರಿಬ್ಬರೇ. ತನ್ನ ಗಂಡನಿಗೆ ತಾನೇ ಕೈಯಾರೆ ಅಡಿಗೆಮಾಡಿ ಬಡಿಸುವುದೆಂದರೆ ಅವಳಿ ಗದೆಷ್ಟು ಹಿಗ್ಗು! ಅದೆಷ್ಟು ಸಂಭ್ರಮ! ಅಡಿಗೆಮಾಡಿ ಗಂಡನಿಗೆ ಬಡಿಸು ವಾಗ ಅವಳಾಡುವ ಉಪಚಾರದ ಮಾತುಗಳೇನು! ತನ್ನ ಪುಟ್ಟಗಂಡನಲ್ಲಿ ಅವಳು ತೋರಿಸುತ್ತಿದ್ದ ಆದರಾಭಿಮಾನಗಳೆಷ್ಟು!

ನಿತ್ಯವೂ ಅವಳ ಗಂಡ ಆಫೀಸಿಗೆ ಹೋಗುವ ಮುನ್ನ ಅವಳನ್ನು ಹತ್ತಿರ ಕರೆದು, ಕಿವಿಯಲ್ಲಿ ಏನೋ ಪಿಸುಗುಟ್ಟುತ್ತಿದ್ದ. ಹಾಗೆಯೇ ತನ ಗೊಂದು ಮುತ್ತನ್ನೂ ಕೊಡುತ್ತಿದ್ದ!! ಕೂಡಲೇ ಅವಳು ಕೋಪಿಸಿ ಕೊಂಡು ದೂರಹೋಗಿ ನಿಂತುಬಿಡುವಳು. ತನಗೆ ಕೋಪಬಂದಿದೆಯೆಂದು ತಿಳಿದು ಗಂಡನಾದವನು ಹತ್ತಿರ ಬಂದು ತನ್ನನ್ನು ಸಂತೈಸತೊಡಗುವನು. ಆಗವಳು ತನ್ನ ಗಂಡನೊಂದಿಗೆ ಮಾತು ಕಟ್ಟಿಕೊಳ್ಳುವಳು. ಏನೆಂದು! ಆಫೀಸಿನಿಂದ ಮನೆಗೆ ಬರುವಾಗ ಪೇಟೆಗೆ ಹೋಗಿ ತನಗೊಂದು ಸೀರೆ ಯನ್ನು ಕೊಂಡು ತರಬೇಕೆಂದು, ಅದಕ್ಕೆ ಆ ಗಂಡ ಸಂತೋಷದಿಂದ ಸಮ್ಮತಿಸಿ ಆಫೀಸಿಗೆ ಹೊತ್ತಾಯಿತೆಂದು ಹೊರಟು ಹೋದದ್ದು............ ಇಷ್ಟೇಅಲ್ಲ. ಇನ್ನು ಕೆಲವು ವರ್ಷಗಳಾದ ನಂತರ...........ಅವಳಿಗದೇ ಚೊಚ್ಚಿಲು ಹೆರಿಗೆ. ಒಂಭತ್ತು ತಿಂಗಳು ತುಂಬಿಹೋಗಿದೆ. ಒಂದು ದಿನ ಗಂಡ ಹೆಂಡತಿಯರಿಗೆ ವಾಗ್ವಾದಬಿದ್ದಿದೆ—ಗಂಡು ಮಗುವಾಗುತ್ತೋ ಹೆಣ್ಣಾ ಗುತ್ತೋ ಎಂದು! 'ಗಂಡೇ ಆಗುತ್ತೆಂದು' ಅವಳು ವಾದಹೂಡುತ್ತಾಳೆ. 'ನೀನು ಈ ಸಲ ಹೆಣ್ಣೇ ಹೆರ್ತೀಯ' ಎಂದು ಗಂಡ ಹಾಸ್ಯ ಮಾಡುತ್ತಾನೆ. ಅವಳಿಗೆ ಕೋಪ ಬಂದು ಗಂಡನೊಂದಿಗೆ ಮಾತೇ ಬಿಟ್ಟು ಬಿಡುತ್ತಾಳೆ. ಗಂಡಹೆಂಡತಿಯವರ ವಿರಸದಲ್ಲೇ ಹಲವು ದಿನಗಳುರುಳಿಹೋಗುತ್ತವೆ. ತನ್ನನ್ನು ಸಮಾಧಾನಗೊಳಿಸಲು ತನ್ನ ಗಂಡನೇ ಮೈಮೇಲೆ ಬಿದ್ದು ಬರು ತ್ತಾನೆಂಬ ತನ್ನ ನಿರೀಕ್ಷಣೆ ವ್ಯರ್ಥವಾಗಿ ಹೋಯಿತು. ಗಂಡನೊಂದಿಗೆ ರಾಜೀಮಾಡಿಕೊಳ್ಳಬೇಕೆಂಬುದಾಗಿ ತೀರ್ಮಾನಿಸಿಕೊಳ್ಳುತ್ತಾಳೆ. ಆದರೆ ಸ್ತ್ರೀ ಸಹಜವಾದ ಬಿಗುಮಾನ ಕೇಳಬೇಕಲ್ಲ! ಅದು 'ಬೇಡಾ—ನೀನು ಹೆಂಗಸು. ನೀನು ಹೀಗೇ ಸೆಟೆದುಕೊಂಡಿರು. ನಿನ್ನ ಗಂಡ ತಾನಾಗಿಯೇ

ನಿನ್ನ ಬಳಿ ಬರುತ್ತಾನೆ. ಕೇಳಿಲ್ಲವೇ ಗಾದೆ'—'ಸಾವಿರಕುದುರೇ ಸರ್ದಾರ ನಾದರೂ ಮನೇ ಹೆಂಡತಿ ಕಾಸ್ದಾರಾಂತ' ಎಂಬುದಾಗಿ ಸಕಾಲದಲ್ಲಿ ಅವಳ ನ್ನೆಚ್ಚರಿಸುತ್ತದೆ. ಕಡೆಗೆ ಗಂಡನೇ ಬಂದು ತನ್ನೊಂದಿಗೆ ರಾಜೀಮಾಡಿ ಕೊಳ್ಳುತ್ತಾನೆ. ತಮ್ಮ ಪ್ರಣಯ ಕಲಹ ಈ ರೀತಿಯ ರಾಜೀಪ್ರಕರಣದಲ್ಲಿ ಪರ್ಯವಸಾನವಾಗುತ್ತದೆ. ಗಂಡಹೆಂಡಿರಿಬ್ಬರಿಗೂ ರಾಜಿಯಾದ ದಿನ ಅವರ ಸಂತೋಷವನ್ನಂತೂ ಹೇಳತೀರದು. ಏನೇ ಆಗಲೀ ಒಬ್ಬರೊಡನೊಬ್ಬರು ಮಾತು ಮಾತ್ರ ನಿಲ್ಲಿಸಕೂಡದೆಂಬುದಾಗಿ ತೀರ್ಮಾನಿಸಿಕೊಳ್ಳುತ್ತಾರೆ. ಆ ಒಂದು ವಾರದಲ್ಲಿ ನಡೆದುಹೋದ ಘಟನೆಗಳನ್ನೆಲ್ಲಾ ನೆನೆನೆನೆದು ಹೊಟ್ಟೆ ಹುಣ್ಣಾಗುವಂತೆ ನಗುತ್ತಾರೆ.!

ಒಂದೇ ಎರಡೇ ಹೇಳೋಕ್ಕೆ. ಹೀಗೆಯೇ ಅದೆಷ್ಟೋ ಹೊಂಗನಸು ಗಳನ್ನು ಕಟ್ಟಿದ್ದಳು ಅಹಲ್ಯೆ ತಾನು ಆಟಕ್ಕಾಗಿ ಹೂಡಿದ್ದ ಬಾಲ ಸಂಸಾರದಲ್ಲಿ ! ಆಗ ತಾನಾಡಿದ್ದು ಕೇವಲ ಗೊಂಬೆಯಾಟವಾದರೂ, ಆಗಲೇ ತನ್ನ ಭಾವೀ ಜೀವನದ ರೂಪರೇಷೆಗಳೆಲ್ಲಾ—ಅದರ ಆಗು ಹೋಗುಗಳೆಲ್ಲಾ ಅವಳ ಆ ಪುಟ್ಟ ಹೃದಯದ ಮೇಲೆ ಅಚ್ಚಳಿಯದಂತೆ ಮೂಡಿಬಿಟ್ಟಿದ್ದುವು!! ತಾನಿನ್ನೂ ಲಂಗ ಹಾಕಿಕೊಂಡು ಕುಣಿದಾಡು ತ್ತಿರುವ ಬಾಲಿಕೆಯಾಗಿದ್ದರೂ, ದಾಂಪತ್ಯ ಜೀವನದ ಸವಿಗನಸುಗಳ ಮಾಲೆಯನ್ನೇ ಪೋಣಿಸಿಬಿಟ್ಟಿದ್ದಳು!! ತನ್ನ ವಯಸ್ಸಿನ ಹೆಣ್ಣುಮಕ್ಕಳೆಲ್ಲರೂ ಸಹಜವಾಗಿಯೇ ಅಪೇಕ್ಷಿಸಬಹುದಾದ ವಿದ್ಯಾವಂತನೂ ರೂಪವಂತನೂ ಅದ ಪುಟ್ಟ ಗಂಡ—ಪುಟ್ಟ ಸಂಸಾರ ಎಂಬುದು ಅಹಲ್ಯೆಯ ಆದರ್ಶವೂ ಆಗಿತ್ತು !!

ಬಹಳ ವರ್ಷಗಳ ಹಿಂದೆ ತಾನು ಹೂಡಿದ್ದ ಬಾಲ ಸಂಸಾರದ ಚಿತ್ರ ಪರಂಪರೆಗಳೆಲ್ಲವೂ ಒಂದಾದ ಮೇಲೊಂದು ಅಹಲ್ಯೆಯ ಚಿತ್ತಭಿತ್ತಿ ಯಲ್ಲಿ ಸುಳಿಯತೊಡಗಿದವು. ತನ್ನ ಬಾಲ್ಯದಲ್ಲಿ ಕೇವಲ ವಿನೋದಕ್ಕೆಂದು ತಾನು ಹೂಡಿದ್ದ ಸಂಸಾರ ನಾಟಕ—ಅದರಲ್ಲಿ ತಾನು ವಹಿಸಿದ್ದ ಗೃಹಿಣಿಯ ಪಾತ್ರ ಇದೆಲ್ಲವನ್ನೂ ನೆನೆದು ಅಹಲ್ಯೆ ಮನಸ್ಸಿನಲ್ಲೇ ನಕ್ಕಳು. "ಅದೆಂತಹ ಕಾಲ ಅದು! ನನಗಿನ್ನೂ ಐದಾರು ವರ್ಷ ಮಾತ್ರ. ಆಗಲೇ ನನಗೆ

ಸಂಸಾರವಮಾಡಬೇಕೆನ್ನುವ ಆಶೆ ಅದೆಷ್ಟು ಪ್ರಬಲವಾಗಿತ್ತು!! ಅದೆಂತಹ ಕನಸುಗಳನ್ನು ಕಾಣುತ್ತಿದ್ದೆ!! ನೆನೆಸಿಕೊಂಡರೆ ನನಗೇ ನಗುಬರುತ್ತೆ! ಅದೊಂದುಕಾಲ—ಅದು ಬಾಲ್ಯಅನ್ನಿಸಿಕೊಂಡಿತು. ಇನ್ನದರಮಾತೇಕೆ! ಈಗ ನಾನು ದೊಡ್ಡವಳಾಗಿದ್ದೇನೆ. ತಕ್ಕಮಟ್ಟಿಗೆ ವಿದ್ಯಾಭ್ಯಾಸವೂ ದೊರೆತಿದೆ. ಪ್ರಪಂಚ ಎಂದರೇನೆಂಬುದರ ಪರಿಚಯ ತಕ್ಕಮಟ್ಟಿಗಾಗಿದೆ. ನನ್ನ ಆಶೆ—ಆಕಾಂಕ್ಷೆಗಳೇನೆಂಬುದನ್ನು ಬಲ್ಲೆ. ನನ್ನ ಹಿತಾಹಿತಗಳು ನನಗೆ ತಿಳಿದಿರುವ ಮಟ್ಟಿಗೆ ನನ್ನ ತಂದೆತಾಯಿಗಳಿಗಾಗಲೀ ಇತರರಿಗಾಗಲೀ ತಿಳಿದಿದೆಯೋ ಇಲ್ಲವೋ ಹೇಳಲಾರೆ.

ನಿನ್ನನ್ನು ಹೆತ್ತ ತಂದೆತಾಯಿಗಳಿಗಿಲ್ಲದ ಯೋಚನೆಯೇ ನಿನಗೆ! ತಮ್ಮ ಮಗಳ ಮೇಲೆ ಅವರಿಗಿಲ್ಲದ ಅಕ್ಕರೆ ಅಭಿಮಾನವೇ ಎಂಬುದಾಗಿ ಯಾರಾದರೂ ಕೇಳಬಹುದು. ಆದರೆ ನನಗೇಕೋ ಅನುಮಾನವೇ. ಈಗ ಮನೆಯಲ್ಲಿ ನಡೆಯುತ್ತಿರೋ ಪ್ರಸ್ತಾಪಗಳು ನನ್ನ ಸಂಶಯವನ್ನೇ ಮತ್ತಷ್ಟು ದೃಢಪಡಿಸುತ್ತವೆ. ಮನ್ನೇ ಅಮೃತೂರಿನ ಜೋಡೀದಾರ್ರು ಕನ್ಯಾರ್ಥಿ ಯಾಗಿ ಬಂದಿರಲಿಲ್ಲವೇ ಮನೆಗೆ! ಅವರಿಗಾಗಲೇ ನಡುವಯಸ್ಸು ದಾಟಿದೆ. ನೋಡಿದರೆ ನನ್ನಂತಹ ನಾಲ್ಕು ಹೆಣ್ಣುಮಕ್ಕಳ ತಂದೆಯಂತಿದ್ದಾರೆ. ಅಂತಹವರಿಗೂ ಈಗ ಪ್ರಾಯ ಉಕ್ಕೇರುತ್ತಿದೆ!! ಅವರಿಗೂ ಈಗ ಪುಟ್ಟ ಹೆಂಡತಿಯೊಬ್ಬಳು ಬೇಕಂತೆ!! ಹೇಗಿದೆ ನಮ್ಮ ಸಮಾಜ!! ಈಗ ಯಾರೋ ಶ್ರೀನಿವಾಸರಾಯರಂತೆ !! ವಸ್ತುಪ್ರದರ್ಶನಾಲಯುದಲ್ಲಿಟ್ಟಿರುವ ಬಣ್ಣದ ಬೊಂಬೆಗಳೆಂದು ತಿಳಿದಿದ್ದಾರೇನೋ ಮದುವೆಯಾಗಲಿರುವ ಹುಡುಗಿ ಯರನ್ನು! ನನ್ನನ್ನು ಕರೆದುಕೊಂಡು ಹೋಗಿ ತೋರಿಸಬೇಕೆಂದು ಕಾಗದಾ ಬರೆದಿದ್ದಾರಂತೆ! ಅವರ ಅಹಂಕಾರವೆಷ್ಟಿದೆ! ಮದುವೆಗೆ ಸಿದ್ಧವಾಗಿರುವ ಹೆಣ್ಣು ಒಂದು ಪ್ರದರ್ಶನ ಪ್ರಾಣಿಯಾಗಿಬಿಟ್ಟಿದೆ ಗಂಡು ಹೆತ್ತ ತಂದೆ ತಾಯಿಗಳಿಗೆ! ಗಂಡು ಬಯಸುವ ಸ್ವಾತಂತ್ರ್ಯ-ಸುಖ ಹೆಂಗಸೂ ಅಪೇಕ್ಷೆ ಪಡುತ್ತಾಳೆ. ಅವೂ ಅವಳ ಆಜನ್ಮಸಿದ್ಧವಾದ ಹಕ್ಕು—ಎಂಬುದನ್ನು ಸುಲಭವಾಗಿ ಒಪ್ಪಿಕೊಳ್ಳುವುದಿಲ್ಲ ಈ ಗಂಡು ಜಾತಿ! ಗಂಡಸಿಗಿರುವ ಆತ್ಮಗೌರವ—ಸ್ವಾಭಿಮಾನ ಹೆಂಗಸಿಗೂ ಇರುತ್ತೆಂಬುದನ್ನೇ ಅವರು ಸಂಪೂರ್ಣವಾಗಿ ಮರೆತುಬಿಡುವಂತೆ ಕಾಣುತ್ತೆ!

ಏಕೋ ನನಗಿದೆಲ್ಲಾ ನೋಡಿದರೆ ಮದುವೆಯಾಗದೆ ಏಕಾಂಗಿಯಾಗಿಯೇ ಇದ್ದುಬಿಡೋಣವೆಂದೆನ್ನಿಸಿದೆ. ಆದರೆ....ನನ್ನ....ಆ....ಆಶೆ ದೂ....ರ....ದಾ....ಶೆ!! ಅಣ್ಣ ಅದಕ್ಕೊಪ್ಪಲಾರ. ನಮ್ಮ ಕುಟುಂಬದ ಕೀರ್ತಿ ಕಳಶ ನಿನ್ನಿಂದಲೇ ಕೆಳಕ್ಕುರುಳಿಬೀಳುತ್ತಿದೆ! ಮದುವೆಗೆ ಎದುಗಿರುವ ಮಗಳಿಗೆ ಮದುವೆ ಮಾಡದೆ ಇಟ್ಟುಕೊಂಡು ಮನೆತನದ ಗೌರವವನ್ನೇ ಹಾಳುಮಾಡಿದನೆಂಬ ಅಪಖ್ಯಾತಿಗೀಡಾಗುತ್ತೇನೆಂದು ನಮ್ಮಣ್ಣ ಹೇಳಲು ಸಿದ್ಧವಾಗಿದ್ದಾನೆ!

ಆದ್ದರಿಂದ ನಾನೀಗ ನನ್ನ ಮಾರ್ಗವನ್ನು ಕಂಡುಕೊಳ್ಳಲೇಬೇಕು. ಯಾವುದೂ ಕೈಮೀರಿ ಹೋಗುವ ಮುಂಚೆಯೇ ನನ್ನ ಮನೋಗತವನ್ನು ನನಗೆ ಹಿರಿಯರೆನಿಸಿಕೊಂಡಿರುವ ನನ್ನ ತಂದೆತಾಯಿಗಳಿಗೆ ತಿಳಿಸಿಬಿಡಬೇಕು."

ಹೀಗೆಂದು ಯೋಚಿಸಿದಳು ಅಹಲ್ಯೆ. ಯೋಚಿಸಿಕೊಂಡಿದ್ದೇನೋ ಆಯಿತು. ತೀರ್ಮಾನವನ್ನೂ ಮಾಡಿಕೊಂಡದ್ದಾಯಿತು. ಆದರೆ ಅದನ್ನು ಬಾಯಿಬಿಟ್ಟು ಹೇಳಿಕೊಳ್ಳುವುದೆಂತು! ಮನಸ್ಸಿನಲ್ಲಿ ಬೇಕಾದಹಾಗೆ ಮಂಡಿಗೆ ಮುಕ್ಕಬಹುದು! ಬೇಕಾದಹಾಗೆ ಕನಸುಗಳನ್ನು ಕಟ್ಟಬಹುದು!! ಆದರೆ ವಾಸ್ತವ ಪ್ರಪಂಚಕ್ಕೆ ಬಂದಾಗಲಲ್ಲವೇ ನಮ್ಮ ನಿಜವಾದ ಸತ್ವ ಪರೀಕ್ಷೆ ನಡೆಯುವುದು! ಅಂದು ಅಹಲ್ಯೆಯ ಸ್ಥಿತಿಯೂ ಹಾಗೇ ಆಯಿತು.

ಹಾಲಿನಲ್ಲೇ ಕೂತಿದ್ದವಳು ಏನು ತೋಚಿತೋ ಎದ್ದು ಕೊಠಡಿಗೆ ಹೋದಳು. ಅಲ್ಲಿ ಕುಳಿತು ಹತ್ತು ನಿಮಿಷ ಸ್ವೆಟರ್ ಹೆಣೆದಳು. ಆದರೆ ಅವಳ ಮನಸ್ಸು ಕಲಕಿ ಹೋಗಿತ್ತು. ಅದಾವುದೋ ಭಾವನಾ ಪ್ರಪಂಚದಲ್ಲಿ ವಿಹರಿಸತೊಡಗಿದ್ದಳು. ಅದೆಲ್ಲಿಯೋ ಯೋಚನೆ. ಅದೆಲ್ಲಿಯೋ ಜ್ಞಾನ. ಫಲಿತಾಂಶ ಅವಳ ಕೈಯಲ್ಲಿದ್ದ ಹೆಣಿಗೆಯ ಕೆಲಸ ಕೆಟ್ಟಿತು. ಕೆಲಸ ಕೆಟ್ಟಿತಲ್ಲಾ ಎಂದು ಪೇಚಾಡುತ್ತಾ ಪುನಃ ಅದನ್ನು ಬಿಚ್ಚಿ ಸರಿಪಡಿಸಿದಳು. ಅವಳ ಹೃದಯದಲ್ಲುಂಟಾಗುತ್ತಿದ್ದ ತಳಮಳ ಅವಳನ್ನು ಸ್ವಸ್ಥವಾಗಿ ಒಂದೆಡೆಯಲ್ಲಿ ಕೂಡಿಸುವ ಹಾಗಿರಲಿಲ್ಲ. ಯಾವುದೋ ಉದ್ವೇಗ ಪರವಶಳಾಗಿ ಧಡಧಡನೆ ಕೊಠಡಿಯ ಬಾಗಿಲಿನವರೆಗೂ ಬಂದು ಪುನಃ ಹಿಂದಕ್ಕೆ ಹೋದಳು. ತನ್ನ ವರ್ತನೆ ತನಗೇ ವಿಚಿತ್ರವೆಂದೆನಿಸಿತು. ಇದಕ್ಕೆ ಕಾರಣ ಅವಳಿಗೇ

ತಿಳಿಯದು. ಸ್ವಲ್ಪ ಹೊತ್ತಿನಂತರ ಬಿರುಗಾಳಿಯಲ್ಲಿ ಸಿಕ್ಕಿಬಿದ್ದ ತರಗೆಲೆಯಂತೆ ತೂರಾಡುತ್ತಿದ್ದ ಅವಳ ಮನಸ್ಸು ಸ್ತಿಮಿತಕ್ಕೆ ಬಂತು. ಇನ್ನು ಹೆಚ್ಚು ಸಾವಕಾಶ ಮಾಡಿದರೆ ಕೆಲಸ ಕೈಮೀರಬಹುದೆಂದು ಅಹಲ್ಯೆಗನ್ನಿಸಿತು. ಅಂತೆಯೇ ಅವಳು ಕೊಠಡಿಯಿಂದ ಹೊರಬಿದ್ದು ತನ್ನ ತಂದೆಯವರ ಪಕ್ಕದಲ್ಲಿ ಬಂದು ನಿಂತಳು. ಪೇಪರಿನಲ್ಲಿ ಮಗ್ನವಾಗಿ ಹೋಗಿತ್ತು ಶೇಷಗಿರಿರಾಯರ ಮನಸ್ಸು. ತಮ್ಮ ಮಗಳು ಪಕ್ಕದಲ್ಲಿ ಬಂದು ನಿಂತಿರುವುದರ ಪರಿವೆಯೇ ಅವರಿಗಿರಲಿಲ್ಲ. ಕಡೆಗೆ ಅಹಲ್ಯೆಯೇ ತನ್ನ ತಂದೆಯವರ ಚಿತ್ತೈಕಾಗ್ರತೆಯನ್ನು ಪ್ರಯತ್ನಪೂರ್ವಕವಾಗಿ ಮುರಿಯಬೇಕಾಯಿತು.

"ಅಣ್ಣಾ............!"

ಶೇಷಗಿರಿರಾಯರು ಒಮ್ಮೆಲೇ ತಲೆಯೆತ್ತಿ ನೋಡಿದರು. "ಏನಮ್ಮಾ ಅಹಲ್ಯಾ" ಎಂದರು.

"ನಿನ್ನ ಹತ್ತಿರ ಸ್ವಲ್ಪ ಮಾತಾಡಬೇಕಾಗಿದೆಯಣ್ಣಾ !"

"ಏನದು ಹೇಳಮ್ಮ ಅಹಲ್ಯಾ. ಬಾ ಕೂತುಕೋ." ರಾಯರು ಪಕ್ಕದಲ್ಲಿದ್ದ ಬೆತ್ತದ ಕುರ್ಚಿಯನ್ನು ಮಗಳ ಮುಂದೆ ಸರಿಸಿದರು. ಅಹಲ್ಯೆ ಅದರಲ್ಲಿ ಕೂತುಕೊಂಡಳು.

" ನನಗೀಗ ಮದುವೆಯೇ ಬೇಡಣ್ಣಾ!! ಈಗ ಯಾರೋ ಶ್ರೀನಿವಾಸರಾಯರು ಕಾಗದಾ ಬರೆದಿದ್ದಾರೆ ಅಂದ್ಯಲ್ಲಾ. ಅವರ ಹುಡುಗನಿಗೆ ತಾನೇ ನನ್ನ ಕೊಡಬೇಕೆಂದಿರೋದು. ಅವರು ಯಾರೂ ನನ್ನನ್ನ ನೋಡಬೇಕಾದ ಅಗತ್ಯವಿಲ್ಲ. ನನ್ನ ಮಗಳು ಮದುವೆಗೆ ಸಿದ್ಧವಾಗಿಲ್ಲವೆಂದು ನಿನ್ನ ಸ್ನೇಹಿತರಿಗೆ ಕಾಗದಾ ಬರೆದು ಹಾಕಿಬಿಡು "

ಶೇಷಗಿರಿರಾಯರು ಮಗಳ ಮಾತನ್ನು ಕೇಳಿ ದಂಗುಬಡಿದುಹೋದರು. ಅವಳ ಬಾಯಲ್ಲಿ ಈ ರೀತಿಯ ಮಾತುಗಳು ಬರುತ್ತವೆಂದು ಅವರ ಕನಸಿನಲ್ಲಿಯೂ ಯೋಚಿಸಿರಲಾರರು. ಮಗಳು ಹತ್ತಿರ ಬಂದು ನಿಂತಕೂಡಲೇ ತನಗೇನಾದರೂ ಸೀರೆ, ಒಡವೆ ವಸ್ತ್ರ ಬೇಕೆಂದು ಕೇಳಬಹುದು. ಇನ್ನಿದಲ್ಲದೆ ಹೆಣ್ಣು ಮಗಳು ತಂದೆಯ ಹತ್ತಿರ ಬಂದು ಕೇಳುವುದಾದರೂ ಏನಿದ್ದೀತೆಂಬುದಾಗಿ ಶೇಷಗಿರಿರಾಯರು ಯೋಚಿಸಿದ್ದಿರಬಹುದು. ಅಹಲ್ಯೆಯ ಮಾತು ಕೇಳಿ ಅವರ ಊಹಾಪೋಹಗಳೆಲ್ಲವೂ ಬುಡಮೇಲಾದವು. ಕರಾ

ಖಂಡಿತವಾಗಿ ಕಟ್ಟಿಗೆ ಮುರಿದಂತೆ ‘ ನನಗೀ ಮದುವೇ ಬೇಡಣ್ಣ’ ಎಂದು ಹೇಳಿದ ಮಗಳ ಎದೆಗಾರಿಕೆಯನ್ನೂ ದಿಟ್ಟತನವನ್ನೂ ಕಂಡು ರಾಯರು ವಿಸ್ಮಿತರಾದರು. ಕ್ಷಣಕಾಲ ಅವರಿಗೇನು ಹೇಳಲೂ ತೋಚದಾಯಿತು. ಆದರೆ ತನ್ನ ತಂದೆಯವರ ಮೌನ ಅಹಲ್ಯೆಗೆ ಸಹಿಸದಾಯಿತು.

“ ಅದ್ಯೇಕಣ್ಣಾ ಹಾಗೆ ಮೌನವಾಗಿ ಕೂತೆ! ನಾನು ಹೇಳಿದ್ದರಲ್ಲಿ ತಪ್ಪೇನಿದೆ! ಈಗ ನೀನು ನೋಡುತ್ತಿರೋ ಹುಡುಗರ ಪೈಕಿ ಯಾರನ್ನು ಮದುವೆಯಾಗಲೂ ನನಗಿಷ್ಟವಿಲ್ಲ. ನಾನಾಗಿ ಮನಮೆಚ್ಚಿದ ಹುಡುಗನನ್ನು ಮದುವೆಯಾಗಲು ನನಗೆ ಸ್ವಾತಂತ್ರ್ಯವಿರಬೇಕೆಂದು ನಾನು ಬಯಸುತ್ತೇನೆ. ಇದರಿಂದ ಯಾರಿಗೇನೂ ತೊಂದರೆಯಿಲ್ಲ ನಾನೀವರ್ಷ ಎಸ್. ಎಸ್. ಎಲ್.ಸಿ. ಪರೀಕ್ಷೆಗೆ ಕಟ್ಟಿದ್ದೇನೆ. ದೇವರ ದಯದಿಂದ ಪಾಸಾಗೋದರಲ್ಲಿ ಏನ್ಯೇನೂ ಸಂದೇಹವಿಲ್ಲ. ಮುಂದೆ ಕಾಲೇಜಿಗೆ ಸೇರಬೇಕೆಂಬ ಆಶೆ ಬಹಳ ವಾಗಿದೆ. ನನ್ನ ಓದು ಮುಗಿಯಲು ಕಡೆಯ ಪಕ್ಷ ನಾಲ್ಕು ವರ್ಷಗಳಾದರೂ ಬೇಕು. ಅಷ್ಟರಲ್ಲೇ ನನಗೇನು ಅವಸರ ಮದುವೆಗೆ! ಮೊದಲು ನನ್ನ ಓದು ಮುಗಿಯಲಿ. ಆ ಮೇಲೆ ನೋಡೋಣಂತೆ ಮದುವೆಯ ಏರ್ಪಾಡು.”

“ ಹಾಗೆಲ್ಲಾ ಹೇಳಿದರೆ ಹೇಗಮ್ಮಾ ಅಹಲ್ಯಾ. ಇದುವರೆಗೂ ನಿನಗೆ ಮದುವೆ ಮಾಡದಿದ್ದುದೇ ನನ್ನ ತಪ್ಪಾಯಿತು. ಈಗಾಗಲೇ ಜನ ಬೇಕಾದ ಹಾಗೆ ಆಡಿಕೊಳ್ಳುತ್ತಿದ್ದಾರೆ. ಜನಾ ಏನು ಬೇಕಾದರೂ ಬೊಗಳಿಕೊಳ್ಳಲಿ. ಅವರ ಮಾತು ನನಗೆ ಲಕ್ಷ್ಯವಿಲ್ಲ. ಆದರೆ ನಮ್ಮ ಮನೆತನದ ಹೆಸರು ಕೆಡುತ್ತಲ್ಲಾ ತಾಯಿ! ನಮ್ಮದು ಒಳ್ಳೇ ಸಂಪ್ರದಾಯಸ್ಥರ ಕುಟುಂಬವೆಂದು ಪ್ರತೀತಿಯಿದೆಯಮ್ಮ. ನಿನಗೂ ಸಣ್ಣಪುಟ್ಟ ವಯಸ್ಸೇನೂ ಅಲ್ಲ. ಈಗ ನಿನಗೆ ಹದಿನಾರು ತುಂಬಿತೂಂತ ಕಾಣುತ್ತೆ. ಯಾವತ್ತಿದ್ದರೂ ಹೆಣ್ಣಾಗಿ ಹುಟ್ಟಿದ ಮೇಲೆ ಮದುವೆಯಾಗಲೇಬೇಕು. ನಿನಗಿಷ್ಟವಿರುವ ಕಡೆಯೇ ನೋಡೋಣ. ಹೇಳು. ಯಾರ ಸಂಬಂಧ ನಿನಗೆ ಸರಿಬರುತ್ತೋ ಅಲ್ಲೇ ಪ್ರಸ್ತಾಪಮಾಡೋಣ.”

“ ಹಾಗಾದರೆ ಹೇಳಲೇನಣ್ಣಾ.”

“ ಹೇಳಮ್ಮಾ ಅಹಲ್ಯಾ. ಅಗತ್ಯವಾಗಿ ಹೇಳು.”

" ಸುಬ್ಬಣ್ಣೋರ ಮಗ ಶ್ರೀಧರನೇ ನನ್ನ ಗಂಡ. ಅವನನ್ನು ಬಿಟ್ಟು ಇನ್ನು ಯಾರನ್ನೂ ನಾನು ಮದುವೆಯಾಗಲೊಪ್ಪಲಾರೆ. ಇದು ಖಂಡಿತವಣ್ಣ. ನನ್ನಿಷ್ಟವನ್ನ ಬಾಯಿಬಿಟ್ಟು ಹೇಳಿಬಿಟ್ಟದ್ದೇನೆ. ಇನ್ನು ನನ್ನನ್ನ ಪದೇಪದೇ ಮದುವೆ ಮಾಡಿಕೊಳ್ಳೆಂದು ಬಲವಂತಮಾಡಬೇಡಿ. ನಿನಗೆ ಸಾಧ್ಯವಾಗುವು ದಾದರೆ ಈ ಸಂಬಂಧ ಬೆಳಸು. ಇದರಿಂದ ನನ್ನ ಜೀವನ ಸುಖಮಯ ವಾಗುತ್ತೆಂಬ ನಂಬಿಕೆ ನನಗಿದೆ. ನಾನು ಚಿಕ್ಕಂದಿನಿಂದಲೂ ಕಟ್ಟಿ ಕೊಂಡಿರುವ ನನ್ನ ದಾಂಪತ್ಯ ಜೀವನದ ಸವಿಗನಸು ನನಸಾಗುತ್ತದೆ!! ನನ್ನ ಬಾಳೂ ಸಾರ್ಥಕವಾಗುತ್ತದೆ!!"

"ಸರಿಯಮ್ಮ. ನಿನ್ನಿಷ್ಟದಂತೆಯೇ ಆಗಲಿ. ನೀನು ಹೇಳೋಕ್ಕೆ ಮೊದಲೇ ನಾನು ಸುಬ್ಬಣ್ಣನವರ ಹತ್ತಿರ ಪ್ರಸ್ತಾಪಮಾಡಲಿಲ್ಲವೇ ನಿನಗೆ ತಿಳಿದ ಹಾಗೆ? ನಾನು ಮಾಡಿದ ಪ್ರಯತ್ನಗಳೆಲ್ಲಾ ನಿನಗೆ ಗೊತ್ತಿಲ್ಲವೆ? ಪಾಪ ಸುಬ್ಬಣ್ಣ ಅದೆಷ್ಟೋ ತಮ್ಮ ಮಗನಿಗೆ ಹೇಳಿದರಂತೆ. ಭಾಗ್ಯಮ್ಮ ನವರೂ ಇನ್ನಿಲ್ಲದಹಾಗೆ ತಮ್ಮ ಮಗನಿಗೆ ಹೇಳಿ ನೋಡಿದರಂತೆ. ಆದರೆ ಏನೂ ಪ್ರಯೋಜನವಾಗಲಿಲ್ಲವಲ್ಲಾ! ಹುಡುಗಾ ಒಪ್ಪಲಿಲ್ಲವಂತಲ್ಲಾ!! ಅದೆಂತಹ ದುರಾದೃಷ್ಟ ನೋಡು ನಮ್ಮದು."

"ಇರಲಣ್ಣಾ! ನೀನೇನೂ ಅಧೈರ್ಯಪಡಬೇಡ. ದೇವರಿದ್ದಾನೆ. ಯಾರು ಎಷ್ಟು ನಿರಾಶೆಗೊಂಡಿದ್ದರೂ ನಾನಿನ್ನೂ ಎದೆಗುಂದಿಲ್ಲ. ನನಗಿನ್ನೂ ಸಂಪೂರ್ಣ ಭರವಸೆಯಿದೆ ನಾನು ಶ್ರೀಧರನನ್ನೇ ಕೈಹಿಡಿಯುತ್ತೇನೆಂದು. ಹಾಗಂತಲೇ ನಾನು ಈ ಮದುವೆಯ ವಿಚಾರದಲ್ಲಿ ನಿಶ್ಚಿಂತಳಾಗಿದ್ದೇನೆ."

"ಇದೇನೇ ಅಹಲ್ಯಾ ಹೀಗೆ ಹೇಳುತ್ತೀಯಾ! ಅವನ ತಂದೆತಾಯಿ ಗಳಿಗೇ ಸಗ್ಗದವನು ಇನ್ನು ಯಾರ ಮಾತು ತಾನೇ ಲಕ್ಷ್ಯಮಾಡುತ್ತಾನೇ ಅವನು!! ಏನೋಮ್ಮ ನನಗೊಂದೂ ಅರ್ಥವಾಗೊಲ್ಲ ನೀನು ಹೇಳುತ್ತಿ ರೋದು. ಅದ್ಯೇನು ಧೈರ್ಯವೋ ಅದ್ಯೇನು ನಂಬಿಕೆಯೋ ನಿನ್ನದು! ಇರಲಿ ದೇವರಿದ್ದಾನೆ. ನೋಡೋಣ ಏನಾಗುತ್ತೋ!"

ಅಷ್ಟು ಹೊತ್ತಿಗೆ ಸಂಗೀತದ ಮೇಷ್ಟ್ರು ಸುಬ್ಬರಾಮೈಯ್ಯನವರು ಬಂದರು. "ಓಹೋ ಬನ್ನಿ ಮೇಷ್ಟ್ರೇ" ಎಂದು ರಾಯರು ಅವರನ್ನು ಸ್ವಾಗತಿಸಿದರು. ಸುಬ್ಬರಾಮೈಯ್ಯನವರು ಕೊಠಡಿಯಲ್ಲಿ ಹೋಗಿ ಕೂತರು.

ಶ್ರುತಿಮಾಡಿಟ್ಟಿದ್ದ ತಂಬೂರಿಯನ್ನೂ, ಹಾಡಿನ ಪುಸ್ತಕವನ್ನೂ ಮುಂದಿಟ್ಟು ಕೊಂಡು ಅಹಲ್ಯೆ ಕೂತಳು. ರಾಯರೆದ್ದು ಕೋಟು ರುಮಾಲು ಧರಿಸಿ ಕೊಂಡು "ನಾನು ಸ್ವಲ್ಪ ಕ್ಲಬ್ಬಿನ ಕಡೆ ಹೋಗಿ ಬರ್ತೀನಮ್ಮಾ ಅಹಲ್ಯಾ" ಎನ್ನುತ್ತಾ ಮನೆಯಿಂದ ಹೊರಬಿದ್ದರು. ಅಹಲ್ಯೆಯ ಸಂಗೀತಾಭ್ಯಾಸ ಷುರುವಾಯಿತು.

## ೧೩

ಮಧ್ಯಾಹ್ನ ಮೂರು ಗಂಟೆಯ ಸಮಯ. ಶೇಷಗಿರಿರಾಯರ ಮನೆ ಯಲ್ಲಿ ಮದುವೆ ಸಂಭ್ರಮ ಬಂದುಬಿಟ್ಟಿದೆ. ಅಡಿಗೆಯ ಮನೆಯಲ್ಲಿ ಸುಶೀ ಲಮ್ಮನವರೂ ಭಾಗ್ಯಮ್ಮನವರೂ ಸೇರಿಕೊಂಡು ಬಗೆಬಗೆಯ ತಿಂಡಿತಿನಿಸು ಗಳನ್ನು ಮಾಡುತ್ತಿದ್ದಾರೆ. ಇಬ್ಬರಿಗೂ ಕೈಬಿಡುವಿಲ್ಲ. ಒಂದುಕಡೆ ಕೋಡಬಳೆ ಕರಿಯುತ್ತಾ ಭಾಗ್ಯಮ್ಮ ಕೂತಿದ್ದಾರೆ. ಒಂದು ತಟ್ಟೆಯಲ್ಲಿ ರವೇವುಂಡೆ ಕಟ್ಟುತ್ತಿದ್ದಾರೆ ಸುಶೀಲಮ್ಮ.

ಕೊಬ್ಬರೀ ತುರುಕೊಡುವುದು – ತರಕಾರೀ ಹೆಚ್ಚಿಕೊಡುವುದು ಇಂತಹ ಸಣ್ಣಪುಟ್ಟ ಕೆಲಸಗಳು ಶಾರದೆ ಕಮಲೂ ಅಹಲ್ಯೆಯರ ಪಾಲಿಗೆ ಬಂದಿದೆ. ಅವರು ಅದನ್ನೆಲ್ಲಾ ಸಂತೋಷದಿಂದ ನಿರ್ವಹಿಸುತ್ತಿದ್ದಾರೆ. "ಬಿಸಿಬೇಳೇ ಹುಳೀಯನ್ನ ಸೀದಿಹೋದೀತು. ಸ್ವಲ್ಪ ಒಲೇ ಉರಿ ಕಮ್ಮೀ ಮಾಡೀ ಭಾಗ್ಯಮ್ಮ" ಎಂದರು ಉಂಡೇ ಕಟ್ಟುತ್ತಿದ್ದ ಸುಶೀಲಮ್ಮ. ಭಾಗ್ಯಮ್ಮನವರೆದ್ದು ಒಂದು ಸಲ ಬಿಸಿಬೇಳೆಹುಳಿಯನ್ನ ಸೌಟಿನಲ್ಲಿ ಕಲಸಿ ನೋಡಿದರು. ಅದು ಪಕ್ವವಾಗಿತ್ತು. "ಎಲ್ಲಾ ಆಗಿಹೋಗಿದೆ ಸುಶೀಲಮ್ಮ. ಕೆಳಗಿಳಿಸಿಬಿಡುತ್ತೇನೆ" ಎನ್ನುತ್ತಾ ಭಾಗ್ಯಮ್ಮ ಪಾತ್ರೆಯನ್ನು ಒಲೆಯಿಂದಿಳಿಸಿ ಬಿಟ್ಟರು.

"ನಾವಿದೆಲ್ಲಾ ಮಾಡಿಕೊಂಡು ಬರೋಹೊತ್ತಿಗೆ ನೀವೆಲ್ಲಾ ಜಡೇ ಹಾಕಿಕೊಳ್ಳೀ. ಹೊತ್ತಾಗಿ ಹೋಗುತ್ತೆ. ಎಷ್ಟು ಮಹಾ ಕೆಲಸ. ನಾವಿಬ್ರೂ ಮಾಡಿಕೊಳ್ತೀವೆ" ಸುಶೀಲಮ್ಮ ಹೇಳಿದರು.

"ನೀವೂ ಒಂದೇ ಸಲ ಇದೆಲ್ಲಾ ಮುಗಿಸಿಕೊಂಡು ಬಂದುಬಿಡೀ ಸುಶೀಲಮ್ಮ. ಎಲ್ಲರೂ ಒಟ್ಟಿಗೇ ಜಡೇ ಹಾಕ್ಕೊಳ್ಳೋಣ" ಶಾರದೆ

ನುಡಿದಳು. ಎಷ್ಟು ಬೇಡವೆಂದರೂ ಕೇಳಲಿಲ್ಲ ಹುಡುಗಿಯರು. ಒಂದಲ್ಲ ಒಂದು ಕೆಲಸ ಹಚ್ಚಿಕೊಂಡು ಅಡಿಗೇಮನೆಯಲ್ಲೇ ಇದ್ದರು. ಎಲ್ಲಾ ಮುಗಿಯುವ ಹೊತ್ತಿಗೆ ಐದು ಗಂಟೆ ಹೊಡೆದುಹೋಯಿತು. "ನೀವಿನ್ನು ಹೊರಡೀ ಸುಶೀಲಮ್ಮ, ನಾನಿದೆಲ್ಲಾ ಮುಚ್ಚಿಟ್ಟುಬಿಟ್ಟು ಬರ್ತೇನೆ" ಎಂದರು ಭಾಗ್ಯಮ್ಮ. ಸುಶೀಲಮ್ಮ ನೀರು ಮನೆಗೆ ಹೋಗಿ ಮುಖ ತೊಳೆದು ಕೊಂಡು ಹಾಲಿಗೆ ಬಂದರು. ಹುಡುಗಿಯರು ನಿರಾತಂಕವಾಗಿ ಹರಟೆ ಹೊಡೆಯುತ್ತಾ ಕುಳಿತುಬಿಟ್ಟಿದ್ದರು. "ಏನ್ರೀ ಇನ್ನೂ ಹಾಗೇ ಕೂತಿದ್ದೀರಿ. ಇಷ್ಟೊತ್ತಿಗೆ ನೀವೆಲ್ಲಾ ಜಡೇ ಹಾಕ್ಕೊಂಡಿರಬಾರದಾಗಿತ್ತೇನ್ರೀ" ಎಂದು ಕೇಳಿದರು ಸುಶೀಲಮ್ಮ

"ಅದೆಷ್ಟೊತ್ತಾಗುತ್ತೆ ಸುಶೀಲಮ್ಮ, ನಿಮಗೋಸ್ಕರವೇ ಕಾದಿದ್ದೆವು. ನಿಮ್ಮ ಹತ್ರ ಈವತ್ತು ಜಡೆ ಹಾಕಿಸಿಕೊಳ್ಳಬೇಕೂಂತ ಆಶೆಯಾಗಿದೆ ನಂಗೆ. ಆವತ್ತು ಮಗ್ಗಿನ ಜಡೆ ಬಹಳ ಚೆನ್ನಾಗಿ ಹಾಕಿದ್ರಿ" ಎಂದಳು ಶಾರದೆ.

"ಅದಕ್ಕೇನು ಶಾರೂ. ಬೇಕಾದಷ್ಟುಸಲ ಹಾಕ್ತೇನೆ." ಸುಶೀಲಮ್ಮ ನುಡಿದರು.

ಒಬ್ಬೊಬ್ಬರಾಗಿ ಸುಶೀಲಮ್ಮನವರ ಹತ್ತಿರ ಜಡೇ ಹೆಣಿಸಿಕೊಂಡರು. ತಮ್ಮ ಮನೆಯ ತೋಟದಲ್ಲೇ ಬಿಟ್ಟಿದ್ದ ಇರವಂತಿಗೆ, ಜಾಜೀ ಹೂಗಳ ದಂಡೆಯನ್ನು ಎಲ್ಲರ ತಲೆಯಲ್ಲೂ ಮುಡಿಸಿದರು ಸುಶೀಲಮ್ಮ. ಎಲ್ಲರ ಜಡೆಗಳೂ ಮುಗಿಯುವ ಹೊತ್ತಿಗೆ ಆರು ಗಂಟೆ ಹೊಡೆಯಿತು.

"ಇನ್ನು ಬೇಗ ಬೇಗ ಸೀರೇ ಉಟ್ಕೊಂಡೇಳಿ. ಹೊತ್ತುಮಾಡ ಬೇಡಿ. ಕತ್ತಲಾಗಿಬಿಡುತ್ತೆ" ಭಾಗ್ಯಮ್ಮ ಎಚ್ಚರಿಸಿದರು.

"ಕತ್ತಲಾದರೇನಂತೆ. ಈವತ್ತು ಹುಣ್ಣಿಮೆಯಲ್ಲವೇನಮ್ಮ ಬೆಳ್ದಿಂಗಳು ಬೇಕಾದಷ್ಟಿರುತ್ತೆ" ಎಂದಳು ಕಮಲೂ.

ಸೀರೆ ಉಟ್ಟುಕೊಳ್ಳಲು ಹುಡುಗಿಯರೆಲ್ಲ ಅಹಲ್ಯೆಯ ಕೋಣೆಗೆ ಹೋದರು. "ಮನ್ನೆ ದಸರಾ ಎಗ್ಜಿಬಿಷನ್ನಲ್ಲಿ ತಗೊಂಡ ಕ್ರೇಪ್ ಸೀರೇನ ಕೊಡ್ತೇನೆ. ನೀವುಟ್ಟುಕೊಳ್ರೀ ಶಾರದಮ್ಮ" ಎಂದಳು ಅಹಲ್ಯೆ.

"ನನಗ್ಯಾವ ಸೀರೆಯೂ ಬೇಡಮ್ಮ. ಈಗುಟ್ಟಿರೋದೇನಾಗಿದೆ. ನಮ್ಮ ಯೋಗ್ಯತೆಗೆ ಸಾಕು."

" ಅದೆಲ್ಲಾ ಆಗೋಲ್ಲ ಶಾರದಮ್ಮ. ಈವತ್ತು ನಾನು ಕೊಟ್ಟ ಸೀರೇನೇ ನೀವುಟ್ಟುಕೊಳ್ಳಬೇಕು."

" ಉಟ್ಕೊಳ್ಳೀ ಅಕ್ಕಾ. ಪಾಪ ಅಹಲ್ಯೆ ಅಷ್ಟು ಬಲವಂತ ಮಾಡ್ತಿದಾಳೆ" ದನಿಗೂಡಿಸಿದಳು ಕಮಲೂ

" ಅಯ್ಯೋ ಹುಚ್ಚುಹುಡುಗೀ ಹೋಗು. ನಾ ನ್ಯಾವ ಸೀರೇ ಉಟ್ಕೊಂಡ್ರೇನೇ. ನೀವೆಲ್ಲಾ ಈಗಿನ ಕಾಲದೋರು. ನಿಮ್ಮಂತಹ ಸಣ್ಣಪುಟ್ಟ ಹುಡುಗೀರು ಅದೆಲ್ಲಾ ಉಟ್ಕೊಂಡ್ರೆ ಚೆನ್ನ. ನಾನು ಹಳೇ ಕಾಲದವಳು. ನನಗೀ ಧರ್ಮಾವರದ ಸೀರೇನೇ ಸಾಕು."

" ಓಹೋ! ಏನು ಶಾರದಮ್ಮ, ನಿಮಗೀಗಾಗಲೇ ಇಷ್ಟು ವೈರಾಗ್ಯ! ಆಗಲೇ ಎಂಟು ಮಕ್ಕಳ ತಾಯಿಯಾದ ಹಾಗೆ ಮಾತಾಡ್ತೀರಿ. ಇನ್ನೂ ನೆಟ್ಟಗೆ ಸಂಸಾರ ಹೂಡಿ ಎರಡು ವರ್ಷ ಕೂಡಾ ಆಗಲಿಲ್ಲ" ಎಂದಳು ಅಹಲ್ಯೆ ನಗುತ್ತಾ.

" ಹೌದಮ್ಮ. ನಮಗೂ ನಿಮಗೂ ಎಲ್ಲಿಯ ಸಾಟೀ ಹೇಳು. ನೀನು ದೊಡ್ಡ ಮನುಷ್ಯರ ಮಗಳು. ನೀನು ಹೇಗೆ ಮಾಡಿದರೂ ಚೆನ್ನಾಗಿರುತ್ತೆ. ಯಾವ ಸೀರೇ ಉಟ್ಕೊಂಡ್ರೂ ಪರವಾಗಿಲ್ಲ. ನಾನೀವತ್ತು ನಿನ್ನ ಸೀರೆ ಉಟ್ಕೊಂಡು ಹೊರಗೆ ಹೊರಟ್ರೆ ಗುರುತುಕಂಡ ಜನಾ ಸುಮ್ಮನಿರುತ್ತಾರ್ಯೇ! " ಇವರಪ್ಪ ನೋಡಿದ್ರೆ ಬಡ ಗುಮಾಸ್ತೆ. ಇನ್ನವರ ಯಜಮಾನರ ಸವರಣೆ ಅಷ್ಟರಲ್ಲೇ ಇದೆ. ಇವಳಿಗೆಲ್ಲಿ ಬಂತು ಇಷ್ಟು ಭಾರೀಸೀರೆ" ಎಂದಾಗಲೇ ಷುರು ಮಾಡ್ತಾರೆ. ಆದ್ದರಿಂದ ನಮ್ಮಂತಸ್ತಿಗೆ ತಕ್ಕಹಾಗೆ ನಾವಿರಬೇಕಮ್ಮ. ನೀನ್ಯೇನೂ ಮನಸ್ಸಿಗೆ ತಿಳ್ಕೋಬೇಡ. ನಿನ್ನ ಮನಸ್ಸು ನನಗೆ ಗೊತ್ತಿದೆ."

" ಹೋಗ್ರೀ ಶಾರದಮ್ಮ. ನೀವು ಏನಾದರೂ ಹೇಳಿಬಿಡ್ತೀರಿ. ಜನಾ ತಮ್ಮ ಬಾಯಿ ತೀಟೆ ತೀರಿಸ್ಕೊಳ್ಳೋಕ್ಕೆ ಸಾವಿರ ಹೇಳ್ತಾರೆ. ಜನರ ಬಾಯಿ ಮುಚ್ಚಿಸೋದಕ್ಕೆ ಯಾರಿಂದ ಸಾಧ್ಯ? ಅದನ್ನೆಲ್ಲಾ ನಾವು ತಲೆಗೆ ಹಚ್ಚಿಕೊಂಡು ಹೋದ್ರೆ ಕಡೆಗೆ ಹುಚ್ಚರಾಗ್ತೇವೆ ಅಷ್ಟೆ. ಹಾಗಾದ್ರೆ ನೀವು ನಾನು ಕೊಡೋ ಸೀರೇನ ಉಟ್ಕೊಳ್ಳೋಲ್ವೇ ಶಾರದಮ್ಮ."

" ಇಲ್ಲಮ್ಮಾ ಅಹಲ್ಯಾ. ನಾನಂಥಾ ಭಾರೀ ಸೀರೇನ ಉಡೋ ಪುಣ್ಯಾ ಕೇಳಿಕೊಂಡು ಬರಲಿಲ್ಲ." ಶಾರದೆಯು ಕಣ್ಣುಗಳಂಚಿನಲ್ಲಿ ನೀರು ಮಿಂಚಿದುದನ್ನು ಅಹಲ್ಯೆ ಕಮಲೂ ಇಬ್ಬರೂ ನೋಡಿದರು.

" ಹೋಗಲಿ ಬಿಡೀ ಶಾರದಮ್ಮ. ನೀವ್ಯಾಕೆ ದುಃಖಪಡ್ತೀರಿ. ನಾನು ಸುಮ್ಮನಿರಲಾರದೆ ಸೀರೆ ಪ್ರಸ್ತಾಪ ತೆಗೆದು ನಿಮ್ಮ ಮನಸ್ಸಿಗೆ ಬೇಜಾರು ಮಾಡಿದೆ."

"ಹಾಗೇನೂ ಇಲ್ಲಮ್ಮ ಅಹಲ್ಯಾ. ನಿನ್ನ ಸ್ವಭಾವ ನನಗೆ ಗೊತ್ತಿಲ್ಲವೇ." ಶಾರದೆ ತನಗುಕ್ಕಿಬರುತ್ತಿದ್ದ ಉದ್ವೇಗವನ್ನು ಪ್ರಯತ್ನ ಪೂರ್ವಕವಾಗಿ ತಡೆಗಟ್ಟಿದಳು. ಬಲವಂತದ ನಗೆಯ ತೆರೆಯೊಂದನ್ನು ಮುಖದಮೇಲೆ ತಂದುಕೊಂಡಳು

" ನಿಮ್ಮಕ್ಕಉಡೋಲ್ಲ ನನ್ನ ಸೀರೇಂದ್ರು. ನೀನಾದರೂ ಉಟ್ಕೊಳ್ಳೇ ಕಮಲೂ."

" ನಮ್ಮಕ್ಕ ಹೇಳಿದ್ದು ನನಗೂ ಅನ್ವಯಿಸುವುದಿಲ್ಲವೇ ಅಹಲ್ಯಾ?"

" ಏನೋಮ್ಮ. ನನಗದೆಲ್ಲಾ ಅಷ್ಟು ಅರ್ಥವಾಗೋಲ್ಲ. ಅಕ್ಕತಂಗಿಯ ರಿಬ್ಬರೂ ಮನೆಯಿಂದ ಬರುವಾಗ ಮಾತಾಡಿಕೊಂಡೇ ಬಂದಿದ್ದೀರೀಂತ ಕಾಣುತ್ತೆ."

"ಹಾಗೇನೂ ಇಲ್ಲ ಅಹಲ್ಯಾ."

"ಮತ್ತೇನು ಹೇಳು ಹಾಗಾದ್ರೆ. ನಿಮ್ಮಕ್ಕ ಏನು ಬೇಡಾಂದ್ರೂ-ನೀನೂ ಬೇಡಾ ಅನ್ನೋದೇ!"

"ನನಗಷ್ಟು ಭಾರೀ ಸೀರೇ ಬೇಡಾ ಅಹಲ್ಯಾ. ಇನ್ಯಾವುದಾದ್ರೂ ಸಾಧಾರಣವಾದ ಸೀರೇ ಕೊಡು. ಉಟ್ಕೋತೇನೆ."

"ಹಾಗೆ ಬಾ ದಾರೀಗೆ. ನನ್ನ ವಾಯಿಲ್ ಸೀರೆ ಕೊಡ್ತೇನೆ. ಉಟ್ಕೋ."

"ಆಗಲೀ ಕಣೇ".

ಅಹಲ್ಯೆ ತನ್ನ ಪೆಟ್ಟಿಗೆಯಲ್ಲಿ ಅಚ್ಚುಕಟ್ಟಾಗಿ ಮಡಿಸಿಟ್ಟಿದ್ದ ಸೀರೆ ಯೊಂದನ್ನು ಕಮಲೂಗೆ ತೆಗೆದುಕೊಟ್ಟಳು.

ಅಷ್ಟು ಹೊತ್ತಿಗೆ ಸುಶೀಲಮ್ಮ ಬಂದು " ಇನ್ನೂ ಮುಗೀಲಿಲ್ಲವೇನ್ರೇ ನಿಮ್ಮಲಂಕಾರಾ! ಎಷ್ಟು ಹೊತ್ತು ಮಾಡ್ತೀರ್ರೇ" ಎಂದರು.

" ಆಗ್ಹೋಯ್ತಮ್ಮ. ಇದೋ ಬಂದುಬಿಟ್ವಿವು" ಎಂದಳು ಅಹಲ್ಯೆ.

ಎಲ್ಲರೂ ಅಲಂಕಾರ ಮಾಡಿಕೊಂಡು ಕೊಠಡಿಯಿಂದ ಹೊರಬರುವ ಹೊತ್ತಿಗೆ ಶೇಷಗಿರಿರಾಯರು ಕಚೇರಿಯಿಂದ ಮನೆಗೆ ಬಂದರು. ಮನೆಯವರ ಸಂಭ್ರಮವನ್ನು ನೋಡಿ ಈವತ್ತೇನೋ ವಿಶೇಷವಿರಬೇಕೆಂದ್ಕುಕೊಂಡರು. ಸುಶೀಲಮ್ಮ ಅಡಿಗೇಮನೆಗೆ ಹೋಗಿ ಒಂದು ಬೆಳ್ಳಿಯ ತಟ್ಟೆಯಲ್ಲಿ ಅಂದು ಮಧ್ಯಾಹ್ನ ಮಾಡಿದ್ದ ತಿಂಡಿಯನ್ನೂ, ಒಂದು ಲೋಟಾದಲ್ಲಿ ನೀರನ್ನೂ ತಂದು ಟೇಬಲ್ಲಿನ ಮೇಲಿಟ್ಟರು. ರಾಯರು ತಮ್ಮ ಉಡುಪು ಬಿಚ್ಚುತ್ತಾ, "ಏನೇ, ಎಲ್ಲಿಗೋ ಸವಾರಿ ಚಿತ್ತೈಸಿರುವ ಹಾಗೆ ಕಾಣುತ್ತೆ. ಎಲ್ಲಾದರೂ ಅರಿಶಿನ ಕುಂಕುಮಕ್ಕೆ ಕರೆದಿದ್ದಾರೇನೇ" ಎಂದು ಕೇಳಿದರು ತಮ್ಮ ಮನೆಯಾಕೆಯನ್ನ.

"ಎಲ್ಲಿಗೂ ಇಲ್ಲಾಂದ್ರೆ. ಈವತ್ತು ಹುಣ್ಣಿಮೆ. ಬೆಳದಿಂಗಳೂಟ ಮಾಡಬೇಕೆಂದು ಬಹಳ ದಿನದಿಂದಲೂ ಆಸೆಯಾಗಿತ್ತು. ಹೇಗೂ ಸುಬ್ಬಜ್ಜೋರ ಹಿರೀ ಮಗಳು ಶಾರದೆ ಊರಿಗೆ ಬಂದಿದ್ದಾಳೆ. ಪಾಪ, ಬಸಿರಿ ಹೆಂಗಸು. ಎಲ್ರೂ ತಮಾಷೆಯಾಗಿ ಹೊಳೇತೀರದಲ್ಲಿ ಬೆಳದಿಂಗಳೂಟ ಮಾಡಿಕೊಂಡು ಬರೋಣಾಂತ ಹೊರಟಿದ್ದೇವೆ."

"ಓಹೋ, ಭರ್ಜರಿಯಾಗಿಯೇ ಇದೆಯಲ್ಲೇ ಪ್ರೋಗ್ರಾಮು! ಮೊದಲೇ ನನಗೂ ಒಂದು ಮಾತು ಹೇಳಿದ್ದಿದ್ರೆ ನಾನೂ ಬರ್ತಿದ್ದೆನಲ್ಲೇ! ಪಾಪ ಸುಬ್ಬಜ್ಜೋರೂ ಬರ್ತಿದ್ರು ಹೇಳಿಕಳಿಸಿದ್ರೆ. ಎಲ್ಲರೂ ಹೋಗಬಹುದಾಗಿತ್ತು."

"ಅದ್ಯೇನೋ ನನಗೆ ತೋಚಲಿಲ್ಲಾಂದ್ರೆ. ಈಗೇನು ಮಿಾರಿ ಹೋಯಿತು. ಇನ್ನೊಂದು ದಿನ ಮನೇಲೇ ಆ ಏರ್ಪಾಡಿಟ್ಟುಕೊಳ್ಳೋಣ. ಈವತ್ತು ನಾವು ನಾವೇ ಹೆಂಗಸರು ತಮಾಷೆಯಾಗಿ ಹೋಗಿಬರ್ತೀವೆ."

"ಧಾರಾಳವಾಗಿ ಹೋಗಿಬನ್ನಿ. ಯಾರು ಬೇಡಾಂತಾರೆ."

ಅಷ್ಟು ಹೊತ್ತಿಗಾಗಲೇ ಭಾಗ್ಯಮ್ಮನವರೂ ಹುಡುಗಿಯರೂ ಕೈಯಲ್ಲಿ ಒಂದೊಂದು ಚೀಲ ಹಿಡಿದುಕೊಂಡು ಬೀದಿಯ ಬಾಗಿಲಲ್ಲಿ ಸಿದ್ಧವಾಗಿ ನಿಂತಿದ್ದರು.

"ಹೊತ್ತಾಯ್ತು. ಬೇಗ ಬಾರಮ್ಮಾ" ಎಂದು ಕೂಗಿಕೊಂಡಳು ಅಪಲ್ಲೆ.

"ಬಂದೇಕಣೇ. ನಾನಿನ್ನು ಬರ್ತೀನೀಂದ್ರೆ" ಎನ್ನುತ್ತಾ ಸಂಭ್ರಮ ದಿಂದ ಬೀದಿಗೋಡಿದರು ಸುಶೀಲಮ್ಮ. ಶೇಷಗಿರಿರಾಯರು ಕಾಲುತೊಳೆದು ಕೊಂಡು ಬಂದು ಆರಾಮ ಕುರ್ಚಿಯಲ್ಲಿ ಕೂತುಕೊಂಡರು. ಎದುರುಗಿದ್ದ ತಿಂಡೀ ತಟ್ಟೆಗೆ ಕೈ ಹಚ್ಚಿದರು.

ಸುಶೀಲಮ್ಮನ ಪರಿವಾರ ಹೊಳೇ ತೀರಕ್ಕೆ ಹೋದಾಗ ಚೆನ್ನಾಗಿ ಕತ್ತಲಾಗಿಬಿಟ್ಟಿತ್ತು. ಆಗತಾನೇ ಹುಣ್ಣಿಮೆಯ ಚಂದಿರ ಪೂರ್ವದಿಗ್ದೇಶ ದಲ್ಲಿ ಮೆಲ್ಲನೇರಿಬರುತ್ತಿದ್ದ. ತಂಗಾಳಿ ಹಾಯಾಗಿ ಬೀಸಿಬರುತ್ತಿತ್ತು. ಹೇಮಾವತಿ ಘುಳುಘುಳುಧ್ವಾನಗೈಯುತ್ತಾ ನಿಧಾನವಾಗಿ ಹರಿದುಹೋಗು ತ್ತಿದ್ದಳು. ಎಲ್ಲರೂ ನದೀ ತೀರದಲ್ಲಿದ್ದ ರಾಮದೇವರ ದೇವಸ್ಥಾನಕ್ಕೆ ಹೋಗಿ ದೇವರ ದರ್ಶನ ಮಾಡಿದರು. ದೇವರಿಗೆ ಕಾಯೊಡಿಸಿ ಮಂಗಳಾರತಿ ಮಾಡಿಸಿದರು. ತೀರ್ಥಪ್ರಸಾದಗಳನ್ನು ಸೇವಿಸಿದರು.

"ಇಲ್ಲೇ ದೇವಸ್ಥಾನದ ಪ್ರಾಕಾರದಲ್ಲೇ ಕೂತ್ಕೊಳ್ಳೋಣ. ಚೆನ್ನಾಗಿ ರುತ್ತೆ" ಎಂದರು ಭಾಗ್ಯಮ್ಮ.

"ಇಲ್ಲಿ ಬೇಡಾ ಭಾಗ್ಯಮ್ಮ. ಹೊಳೇ ತೀರದಲ್ಲೇ ಸರಿ. ಅಲ್ಲಿ ಮರಳಿನ ಮೇಲೆ ಕೂತ್ಕೊಳೋಕ್ಕೆ ಜಾಗಾ ಚೆನ್ನಾಗಿದೆ. ಇನ್ನು ಸ್ವಲ್ಪ ಹೊತ್ತಿಗೆಲ್ಲಾ ಬೆಳದಿಂಗಳು ಬಂದ್ಬಿಡುತ್ತೆ. ಬನ್ನೀ ಹೋಗೋಣ" ಎಂದಳು ಅಹಲ್ಯೆ.

ಅವಳ ಸಲಹೆಯಂತೆಯೇ ಎಲ್ಲರೂ ಹೊಳೇ ತೀರಕ್ಕೆ ಹೋದರು. ಅತಿಗಂಭೀರವಾಗಿ ಮಂದಗತಿಯಲ್ಲಿ ಹರಿಯುತ್ತಿದ್ದ ಹೊಳೆಯಲ್ಲಿ ಪೂರ್ಣಿಮಾ ಚಂದಿರನು ಪ್ರತಿಬಿಂಬಿಸಿದ್ದ. ಬೆಳದಿಂಗಳು ಹಾಲುಚೆಲ್ಲಿದಂತೆ ಹಾಯಾಗಿ ಹಬ್ಬಿಕೊಂಡಿತ್ತು.

"ನೀವೊಂದು ಹಾಡು ಹೇಳ್ರೀ ಶಾರದಮ್ಮ. ಬಹಳ ದಿನಗಳಾಗಿ ಹೋಯಿತು. ನಿಮ್ಮ ಹಾಡು ಕೇಳಿ" ಅಹಲ್ಯೆ ನುಡಿದಳು.

"ಅಯ್ಯೋ ನನಗೇನು ಹಾಡುಬರುತ್ತೇ ಅಹಲ್ಯಾ. ಹಾಡೂ ಹಸೇ ಹೇಳೋಕ್ಕೆ ನನ್ನ ತಂಗೀನೇ ಸರಿ. ಅವಳು ಬೇಕಾದಷ್ಟು ಹೇಳುತ್ತಾಳೆ."

"ಅವಳ ಹಾಡು ನಾನು ಕೇಳಿಲ್ಲವೇ ಶಾರದಮ್ಮ. ದಿನಾಗಲೂ ಕೇಳ್ತಿರ್ತೇನೆ. ನೀವು ಗಂಡನಮನೇಲಿರೋರು ಅಪರೂಪವಾಗಿ ಬಂದಿದ್ದೀರಿ. ಒಂದು ಹಾಡು ಹೇಳಿ ಕೇಳೋಣ."

" ಹೇಳಮ್ಮಾ ಶಾರದಾ ಯಾವುದಾದರೂ ಹಾಡು. ಪಾಪ ಅವಳಷ್ಟು ಕೇಳಿಕೊಳ್ತಾಳೆ" ಎಂದರು ಭಾಗ್ಯಮ್ಮ. ಶಾರದೆ ತನಗೆ ಇಷ್ಟವಾಗಿದ್ದ, 'ಇಷ್ಟು ಪಾಪವನೆ ಮಾಡಿದ್ದು ಸಾಕೋ' ಎಂಬ ಪುರಂದರದಾಸರ ಕೀರ್ತನೆ ಹಾಡಿದಳು. ಹಾಡು ಬಹಳ ಇಂಪಾಗಿತ್ತು. ಎಲ್ಲರೂ ಕೇಳಿ ಸಂತೋಷ ಪಟ್ಟರು. ಅಹಲ್ಯೆಗೇ ತೃಪ್ತಿಯಾಗಲಿಲ್ಲ. "ಶಾರದಮ್ಮ ನೀವು ಹಾಡು ಚೆನ್ನಾಗಿ ಹೇಳ್ತೀರ್ರೀ. ಬರೋಲ್ಲಾಂತ ಬೊಗಳೇ ಬಿಟ್ರಿ. ಇನ್ನೊಂದು ಹಾಡು ಹೇಳ್ರೀ" ಎಂದು ಒತ್ತಾಯಪಡಿಸಿದಳು.

"ಇನ್ನೆರಡು ದೇವರನಾಮ ಹೇಳಮ್ಮಾ ಶಾರದಾ. ಚೆನ್ನಾಗಿ ಹೇಳ್ತೀಯ" ಎಂದರು ಸುಶೀಲಮ್ಮ.

"ನಿಮ್ಮ ಮಗಳಿಗಿಂತಲೂ ಚೆನ್ನಾಗಿ ಹಾಡ್ತೀನೇನ್ರೀ ಸುಶೀಲಮ್ಮ ನಾನು! ಮುಖ್ಯ ನಿಮ್ಮ ಅಭಿಮಾನ ಹಾಗಿದೆ" ಎಂದಳು ಶಾರದೆ. ಬಳಿಕ ಅವಳು 'ನಿನ್ನನಾಶ್ರೈಸುವೆನೂ ನಿಗಮಗೋಚರನಿತ್ಯ | ಬೆನ್ನ ಬಿಡದೇ ಕಾಯೋ | ಮನದಿಷ್ಟವೀಯೋ ||" ಎಂಬ ದೇವರನಾಮವನ್ನು ಧನ್ಯಾಸಿ ರಾಗದಲ್ಲಿ ಹಾಡಿದಳು. ಆಗ ಅವಳ ಮನೋಧರ್ಮಕ್ಕನುಗುಣವಾದ ಹಾಡನ್ನೇ ಆರಿಸಿಕೊಂಡಳು. ಆ ದೇವರನಾಮ ಶಾರದೆಗೆ ಅತ್ಯಂತ ಪ್ರಿಯ ವಾದ್ದು. ಅವಳ ಜೀವನದಲ್ಲಿ ಆ ದೇವರನಾಮ ಹಾಸುಹೊಕ್ಕಾಗಿ ಬೆರೆತು ಹೋಗಿತ್ತು. ತನಗೆ ಸಂಸಾರದಲ್ಲಿ ಜಿಗುಪ್ಸೆಯುಂಟಾದಾಗ, ಮನೆಯಲ್ಲಿ ಅತ್ತೆ ಗಂಡ ಇವರ್‍ಯಾರಿಂದಲಾದರೂ ಮಾತು ತಿಂದಾಗ, ಒಟ್ಟಿನಲ್ಲಿ ಹೇಳುವು ದಾದರೆ ಹೆಣ್ಣು ಬಾಳಿನ ನೋವನ್ನೆಲ್ಲಾ ನುಂಗಿಕೊಳ್ಳುವ ದುರ್ಭರ ಪ್ರಸಂಗ ಗಳು ಬಂದಾಗಲೆಲ್ಲಾ ಈ ದೇವರನಾಮವನ್ನು ಹಾಡಿಕೊಳ್ಳುವುದು ಶಾರದೆಯ ಪದ್ಧತಿಯಾಗಿತ್ತು. ಅದು ಅವಳ ಮನಸ್ಸಿಗೆ ಬಹಳ ನೆಮ್ಮದಿಯನ್ನುಂಟು ಮಾಡುತ್ತಿತ್ತು. ಕಲಕಿಹೋದ ಮನಸ್ಸಿಗೆ ಶಾಂತಿಯನ್ನು ತಂದುಕೊಡು ತ್ತಿತ್ತು.

"ನೀನೂ ಒಂದೆರಡು ಹಾಳು ಹೇಳಮ್ಮಾ ಅಹಲ್ಯಾ" ಎಂದರು ಭಾಗ್ಯಮ್ಮ.

ಅಹಲ್ಯೆ ಒಂದೆರಡು ತ್ಯಾಗರಾಜ ಕೀರ್ತನೆಗಳನ್ನು ಹಾಡಿದಳು. ತಮ್ಮ ಮಗಳ ಹಾಡು ಮುಗಿದ ನಂತರ "ಬೆಳದಿಂಗಳು ಚೆನ್ನಾಗಿ ಬಂದಿದೆ.

ಇನ್ನು ಊಟಕ್ಕೇಳಿ ಎಲ್ಲರೂ" ಎಂದರು ಸುಶೀಲಮ್ಮ. ಎಲ್ಲರೂ ಸಾಲಾಗಿ ಕೂತುಕೊಂಡರು. ಸುಶೀಲಮ್ಮ ಎಲ್ಲರಿಗೂ ಬಾಳೇಎಲೆ ಹಾಸಿದರು. ಭಾಗ್ಯಮ್ಮ ಬಡಿಸತೊಡಗಿದರು. ಮೊದಲು ಬಿಸಿಬೇಳೇಹುಳಿಯನ್ನವನ್ನು ಬಡಿಸಿದರು. ಬಾಡಿಸಿಕೊಳ್ಳುವುದಕ್ಕೆ ಬಾಳೇಕಾಯಿ ಉಪ್ಪೇರಿ ಹಾಕಿದರು. "ಎಲ್ಲರೂ ನಿಧಾನವಾಗಿ ಹೊಟ್ಟೇತುಂಬಾ ಊಟಾಮಾಡೀಮ್ಮ" ಎಂದು ಉಪಚಾರ ಹೇಳುತ್ತಾ ಬಡಿಸತೊಡಗಿದರು. "ಬಿಸಿಬೇಳೇಹುಳಿಯನ್ನ ಬಹಳ ರುಚಿಯಾಗಿದೇ ಕಣ್ರೀ ಭಾಗ್ಯಮ್ಮ" ಎಂದೆಲ್ಲರೂ ಹೊಗಳಿಕೊಂಡು ಹೊಗಳಿಕೊಂಡು ಊಟಮಾಡಿದರು.

"ಥಂಡಿಯಾಗಿದೆ, ಬೇಕಾದವರು ಕೇಳಿ ಹಾಕಿಸಿಕೊಳ್ಳಿ. ಸಂಕೋಚ ಪಡಬೇಡಿ" ಎಂದರು ಸುಶೀಲಮ್ಮ. ಬಳಿಕ ಅವರು ತಲಾ ಎರಡೆರಡು ಕೋಡಬಳೆ, ಒಂದೊಂದು ರವೇಉಂಡೆ ಹಾಕಿಕೊಂಡು ಹೋದರು. "ಇದೇನ್ರೀ ಸುಶೀಲಮ್ಮ, ಹೊಟ್ಟೆತುಂಬಿಹೋಯ್ತಲ್ಲಾ. ಇದನ್ನ ಬೇರೇ ತಿನ್ನೋಕೆ ಸ್ಥಳವೆಲ್ಲಿ ತರೋಣ." ಮೇಲುಸಿರು ಬಿಡುತ್ತಾ ಶಾರದೆ ನುಡಿದಳು.

"ನಿಧಾನವಾಗಿ ತಿನ್ನೇಮ್ಮ. ಏನೂ ಅವಸರವಿಲ್ಲ. ನೀನು ಬಸಿರು ಹೆಂಗಸು. ಸಂಕೋಚವಿಲ್ಲದೆ ಕೇಳಿ ಹಾಕಿಸ್ಕೋ" ಎಂದು ಉಪಚಾರೋಕ್ತಿ ಮಾಡಿದರು ಸುಶೀಲಮ್ಮ. ಎಲ್ಲರ ಎಲೆಗಳೂ ಖಾಲಿಯಾದಮೇಲೆ ಭಾಗ್ಯಮ್ಮ ಮೊಸರನ್ನ ಬಡಿಸಿದರು. ಎಲ್ಲರೂ ವಿನೋದವಾಗಿ ಹರಟೆ ಬಡಿಯುತ್ತಾ ಮೊಸರನ್ನವನ್ನು ತಿಂದು ತೇಗಿದರು. ನಂತರ ಭಾಗ್ಯಮ್ಮ ನವರೂ ಸುಶೀಲಮ್ಮನವರೂ ಊಟಕ್ಕೆ ಕೂತರು. ಅವರ ಊಟವಾದ ನಂತರ ಆಳು ನಂಜನಿಗೂ ಬಡಿಸಲಾಯಿತು. ನಂಜ ಊಟವಾದ ನಂತರ ಮುಸುರೇ ಪಾತ್ರೆಗಳನ್ನೆಲ್ಲಾ ಹೊಳೆಯಲ್ಲಿ ತೊಳೆದುಕೊಂಡು ಬಂದ. ಎಲ್ಲರೂ ತಾಂಬೂಲ ಹಾಕಿಕೊಂಡರು.

"ಇನ್ನೇನು ಬೆಳದಿಂಗಳೂಟ ಮುಗಿದ ಹಾಗಾಯಿತಲ್ಲಾ. ಮನೆಗೆ ಹೊರಡೋದು ತಾನೇ" ಎಂದರು ಸುಶೀಲಮ್ಮ. ಅಷ್ಟು ಹೊತ್ತಿಗೆ ಸರಿಯಾಗಿ ತಾಲ್ಲೂಕು ಕಛೇರಿಯಲ್ಲಿ ಒಂಭತ್ತು ಹೊಡೆಯಿತು. "ಅಬ್ಬಾ. ಆಗಲೇ ಒಂಭತ್ತು ಗಂಟೆಯಾಗಿಹೋಯಿತೇ. ಸರಸರಾಂತ ನಡೀರಿ

ಮನೆಗೆ ಹೋಗೋಣ" ಎಂದವಸರಿಸಿದರು ಭಾಗ್ಯಮ್ಮ. ಎಲ್ಲರೂ ವಿನೋದ ವಾಗಿ ನಕ್ಕು ನಲಿಯುತ್ತಾ ಮನೆಯದಾರಿ ಹಿಡಿದರು.

೧೪

"ಯಾಕೋ ಬೆಳಗ್ಗೆಯಿಂದ ಒಂದೇಸಮವಾಗಿ ಹೊಟ್ಟೇ ನುಲೀ ತಿದೇಮ್ಮ. ಸ್ವಲ್ಪ ಆಸ್ಪತ್ರೆಗೆ ಹೋಗಿ ತೋರಿಸ್ಕೊಂಡುಬರ್ತೀನಿ."

"ಯಾಕಮ್ಮಾ ಶಾರದಾ. ನಿನ್ನೆ ರಾತ್ರಿಯೆಲ್ಲಾ ಚೆನ್ನಾಗಿದ್ದೆಯಲ್ಲಾ ಸುಖವಾಗಿ ನಿದ್ದೆ ಮಾಡಿದೆಯಲ್ಲಾ. ಚೊಚ್ಚಲು ಹೆರಿಗೆ. ಬಹಳ ಹುಷಾರಾಗಿರಬೇಕಮ್ಮ. ನಿನ್ನೇರಾತ್ರಿ ಸಿಕ್ಕಾಪಟ್ಟೆ ತಿಂದದ್ದೇನಾದರೂ ಜೀರ್ಣವಾಗಲಿಲ್ಲವೋ ಏನೋ."

"ಅಂಥದೇನೂ ಇಲ್ಲಮ್ಮ. ನನಗೆ ಹೇಳೋಕ್ಕೆ ಬರಲ್ಲ. ನಾನು ಊರಿಗೆ ಬಂದಾಗನಿಂದಲೂ ಹಾಗೇ ಇದೆ. ಹೇಳ್ಕೊಳ್ಳೋದು ಹೇಗೇಂತ ಸುಮ್ಮನಿದ್ದುಬಿಟ್ಟೆ. ಈವತ್ತು ಬೆಳಗ್ಗೆಯಿಂದ ಹೊಟ್ಟೇ ನುಲಿಯೋದು ಜಾಸ್ತಿಯಾಗಿಹೋಗಿದೆ. ಇನ್ನು ಹೀಗೇ ಮುಚ್ಚಿಡುತ್ತಿದ್ರೆ ಮುಂದೇನಾದರೂ ತೊಂದರೆಯಾದೀತೆಂಬ ಭಯದಿಂದ ಈಗ ನಿನ್ನ ಹತ್ರ ಬಾಯ್ಬಿಟ್ಟೆ."

"ಅಯ್ಯೋ ಹುಚ್ಚುಹುಡುಗೀ ಹೋಗು. ನನಗೆ ಮೊದಲೇ ಹೇಳ ಬಾರದಿತ್ತೇನೇ. ನನ್ಹತ್ರೂ ನಿನಗೆ ಸಂಕೋಚವಾದರೆ ಹೇಗೇ ಶಾರದಾ! ಹೋಗಲಿ ಪುಣ್ಯಾತ್ಮಗಿತ್ತಿ ಈಗಲಾದರೂ ಬಾಯಿಬಿಟ್ಟೆಯಲ್ಲ. ಆಸ್ಪತ್ರೆಗೆ ಹೋಗಿ ತೋರಿಸಿಕೊಂಡು ಬಾ. ಜತೇಲಿ ನಿನ್ನ ತಂಗೀನೂ ಕರಕೊಂಡು ಹೋಗು. ಒಬ್ಬಳೇ ಹೋಗಬೇಡ."

ಬೆಳಿಗ್ಗೆ ಹತ್ತು ಗಂಟೆಯ ಸಮಯ. ಭಾಗ್ಯಮ್ಮ ಅಡಿಗೆಯಲ್ಲಿ ತೊಡಗಿದ್ದರು. ಸುಬ್ಬಣ್ಣ ಯಾವುದೋ ಕೆಲಸದಮೇಲೆ ಹೊರಹೊರಟಿದ್ದರು. ಹುಡುಗರು ಅವರವರ ಪಾಡಿಗೆ ಓದುತ್ತಾ ಕೂತಿದ್ದರು. ಅಕ್ಕತಂಗಿಯ ರಿಬ್ಬರೂ ಹೆರಿಗೆಯಾಸ್ಪತ್ರೆಗೆ ಹೊರಟರು. ಅಂದು ಲೇಡೀ ಡಾಕ್ಟರು ಬಸಿರು ಹೆಂಗಸರನ್ನು ನೋಡುವ ದಿನ. ಆಸ್ಪತ್ರೆಯಲ್ಲಿ ಬಹಳ ಗಲಾಟೆಯಿತ್ತು. ಲೇಡಿ ಡಾಕ್ಟರು ಒಬ್ಬರಾಗುತ್ತಲೊಬ್ಬರನ್ನು ಪರೀಕ್ಷೆಮಾಡಿ ಕಳಿಸುತ್ತಿದ್ದರು. ಶಾರದೆಯ ಸರದಿ ಬರುವ ಹೊತ್ತಿಗೆ ಹನ್ನೊಂದೂವರೆ ಗಂಟೆಯಾಗಿ ಹೋಯಿತು.

ಲೇಡಿ ಡಾಕ್ಟರು ಬಹಳ ಒಳ್ಳೆಯವರು. ನಿಧಾನಸ್ಥರು. ಸ್ವಲ್ಪವೂ ಸಿಡುಕಿಲ್ಲ. ಹೆಸರು ಸರೋಜಮ್ಮ. ಬೆಂಗಳೂರಿನ ಮೆಟರ್ನಿಟಿ ಆಸ್ಪತ್ರೆ ಯಿಂದ ಅದೇತಾನೇ ವರ್ಗವಾಗಿ ಬಂದಿದ್ದರು. ಶಾರದೆಗೆ ಲೇಡೀ ಡಾಕ್ಟರ ಪರಿಚಯ ಚೆನ್ನಾಗಿತ್ತು. ಸರೋಜಮ್ಮ ತಾವು ಡಾಕ್ಟರೆನ್ನುವ ಯಾವ ಬಿಗುಮಾನವೂ ಮಾಡದೆ ಎಲ್ಲರ ಹತ್ತಿರಲೂ ಸಲಿಗೆಯಿಂದ ಮಾತುಕತೆ ಯಾಡುತ್ತಿದ್ದರು. ಊರಿಗೆ ವರ್ಗವಾಗಿ ಬಂದ ತಿಂಗಳಲ್ಲೇ ಊರಿನವರ ಪರಿಚಯವನ್ನೆಲ್ಲಾ ಮಾಡಿಕೊಂಡು ಬಿಟ್ಟಿದ್ದರು. ಸರೋಜಮ್ಮ ಶಾರದೆ ಯನ್ನು ಒಳಕೊಠಡಿಗೆ ಕರೆದುಕೊಂಡು ಹೋಗಿ ಪರೀಕ್ಷೆ ಮಾಡಿದರು. ಅವರಿಗೇಕೋ ಅನುಮಾನ ಬಂತು.

"ನಿನಗಿದೇ ಚೊಚ್ಚಲು ಹೆರಿಗೆಯೇನಮ್ಮಾ" ಎಂದು ಕೇಳಿದರು ಶಾರದೆಯನ್ನು.

"ಹೌದು. ಏಳು ತಿಂಗಳು ತುಂಬಿತು. ಬೆಳಿಗ್ಗೆಯಿಂದಲೂ ಹೊಟ್ಟೇ ನುಲೀತಿದೆ. ಬಹಳ ಸಂಕಟವಾಗುತ್ತೆ."

"ಎಷ್ಟು ದಿನದಿಂದ ಹೀಗಾಗುತ್ತಿದೆ?"

"ಈಗೆರಡುಮೂರು ತಿಂಗಳಿಂದಲೂ ಹೀಗೇ ಇದೆ."

"ಹಾಗಾದ್ರೆ ನಾನೊಂದು ಕೇಳ್ತೇನೆ. ನೀನ್ಯೇನೂ ಮನಸ್ಸಿಗೆ ತಿಳಕೊಳ್ಳದಿದ್ರೆ ಹೇಳ್ತೇನೆ."

"ನಾನ್ಯೇನೂ ತಿಳಕೊಳ್ಳೋಲ್ಲ! ಪರವಾಗಿಲ್ಲ ಕೇಳೀ ಸರೋಜಮ್ಮ."

"ನೀನು ಬಸಿರಾದಮೇಲೆ ನಿನ್ನ ಯಜಮಾನರು ನಿನ್ನನ್ನ ಯಾವಾಗ ಲಾದರೂ ಹೊಡೆದಿದ್ರೇನಮ್ಮಾ?"

"......................!"

"ಏನೂ ನಾಚಿಕೆ ಪಡಬೇಡ ಹೇಳು, ತಾಯಿ. ತಿಳಿದರೆ ಅದಕ್ಕೆ ತಕ್ಕ ಚಿಕಿತ್ಸೆ ಮಾಡಬಹುದು. ಇಲ್ಲದಿದ್ರೆ ನಿನಗೆ ಹೆರಿಗೆ ಬಹಳ ಕಷ್ಟವಾಗುತ್ತೆ. ಅದರಲ್ಲೂ ಚೊಚ್ಚಲು ಹೆರಿಗೇ ಬೇರೆ."

"ಹೌದು ಸರೋಜಮ್ಮ, ನೀವಂದದ್ದು ನಿಜ. ನನಗಾಗಿ ಐದು ತಿಂಗಳು ತುಂಬಿತ್ತು. ಆವತ್ತು ಮನೇಲಿ ಯಾವುದೋ ಜಗಳಾ ಬಂದು ನನ್ನ

ಯಾಜಮಾನ್ರು ನನ್ನ ಹೊಟ್ಟೇ ಮೇಲೆ ಬಲವಾಗಿ ಒದ್ದುಬಿಟ್ರು. ಆಪತ್ತಿ ನಿಂದ ಹೊಟ್ಟೇನುಲಿಯೋಕ್ಕೆ ಷುರುವಾಯಿತು."

"ಓ ಮೈ ಗಾಡ್! ಪೂರ್ ಲೇಡಿ!! ಇಂಥಾ ಗಂಡಂದಿರೂ ಇರ್ತಾರೇನಮ್ಮಾ ಪ್ರಪಂಚದಲ್ಲಿ!!"

ಶಾರದೆಗಾಗ ಏನು ಹೇಳಬೇಕೋ ತೋಚಲಿಲ್ಲ. ವಿಷಣ್ಣವದನಳಾಗಿ ಡಾಕ್ಟರನ್ನೇ ರೆಪ್ಪೆಬಡಿಯದಂತೆ ಈಕ್ಷಿಸುತ್ತಾ ಕುಳಿತುಬಿಟ್ಟಳು. ಡಾಕ್ಟರಿಗೇಕೋ ಆ ಘಳಿಗೆಯಿಂದಲೇ ಶಾರದೆಯ ಮೇಲೆ ಅನಿರೀಕ್ಷಿತ ಅಭಿಮಾನ ಹುಟ್ಟಿಬಿಟ್ಟಿತು. ಅವರು ಅವಳ ಸ್ಥಿತಿಗೆ ಬಹಳವಾಗಿ ಸಂತಾಪಪಟ್ಟರು. ಅವಳ ಬಾಳಿನ ಕಥೆಯೇನಿದೆಯೋ ಕೇಳಿ ತಿಳಿದುಕೊಳ್ಳಬೇಕೆಂಬ ಸಹಜವಾದ ಕುತೂಹಲವುಂಟಾಯಿತು.

"ನಿನ್ನ ಯಜಮಾನ್ರು ಏನು ಕೆಲಸದಲ್ಲಿದ್ದಾರಮ್ಮ?"

"ಏನು ಕೆಲಸದಲ್ಲಿದ್ದಾರೇಂತ ಹೇಳಲಿ, ಸರೋಜಮ್ಮ, ನಾನು. ಅವರು ನೆಲೆಯಾಗಿ ಯಾವ ಕೆಲಸದಲ್ಲೂ ನಿಲ್ಲುವವರಲ್ಲ. ಈವತ್ತಿರೋ ಕೆಲಸದಲ್ಲಿ ನಾಳೆ ಇರೋಲ್ಲ. ಈಗವರು ಸದ್ಯಕ್ಕೆ ಬೆಂಗಳೂರಲ್ಲಿದ್ದಾರೆ, ಅಲ್ಲೊಂದು ಟಾಕೀಸ್‌ನ ಮ್ಯಾನೇಜರಾಗಿದ್ದಾರೆ."

"ತಿಂಗಳಿಗೆಷ್ಟು ಸಂಬಳಾ ಬರುತ್ತಮ್ಮ ನಿನ್ನ ಯಜಮಾನರಿಗೆ?"

"ನೂರು ರೂಪಾಯಿ."

"ಇನ್ನೇನು ಹಾಗಾದರೆ. ನೀವು ಗಂಡಾ ಹೆಂಡತಿಗೆ ಬೇಕಾದಷ್ಟಾಯಿತಲ್ಲಾ. ಸುಖವಾಗಿ ಸಂಸಾರ ಮಾಡಿಕೊಂಡಿರಬಹುದಲ್ಲಾ."

"ಸುಖವಾಗಿ ಸಂಸಾರ ಮಾಡಿಕೊಂಡಿರುವ ಪುಣ್ಯವನ್ನು ನಾನೀ ಜನ್ಮದಲ್ಲೇ ಪಡಕೊಂಡು ಬರಲಿಲ್ಲಾ ಸರೋಜಮ್ಮ."

"ಯಾಕಮ್ಮಾ ಹಾಗಂತೀಯ!!"

"ಹೌದು ಸರೋಜಮ್ಮ. ಇರೋ ಸಂಗತೀ ಹೇಳ್ತಿದೇನೆ."

"ಇನ್ನೂ ಮನೇಲಿ ಯಾರ್‍ಯಾರಿದ್ದಾರಮ್ಮ?"

"ಮನೇಲಿ ನಾವಲ್ಲದೆ ನಮ್ಮತ್ತೇ, ನಾದಿನಿ ಇದ್ದಾರೆ."

"ಇದ್ದರೇನಂತೆ. ನೀವು ನಾಲ್ಕು ಮಂದಿ ಸುಖವಾಗಿರಲು ಸಾಲದೇ ನಿನ್ನ ಗಂಡನಿಗೆ ಬರೋ ಸಂಪಾದನೆ?"

"ಸಂಪಾದನೇ ಸಾಲದೆಂದು ನಾನು ಹೇಳ್ತಿಲ್ಲಾ ಸರೋಜಮ್ಮಾ. ಬಡತನಕ್ಕಾಗಿ ನಾನು ಸ್ವಲ್ಪವೂ ಭಯಪಡುತ್ತಿಲ್ಲ. ದೇವರು ಕೊಟ್ಟರೋ ಅಂಬಲಿಯೋ ಗಂಜಿಯೋ ಕುಡುಕೊಂಡು ಮಾನವಾಗಿ ಸಂಸಾರ ಮಾಡಿಕೊಂಡಿರಬಲ್ಲೆ. ಆದರೆ ಆ ಮನೆ ನನ್ನ ಭಾಗಕ್ಕೆ ನರಕವಾಗಿದೆ! ನನ್ನತ್ತೆ ನನ್ನ ಯಜಮಾನರಿಗೆ ಸ್ವಂತ ತಾಯಲ್ಲ. ಮಲತಾಯಿ. ನನ್ನ ನಾದಿನಿಯೂ ಅಷ್ಟೆ."

"ಹಾಗಾದರೆ ಅವರಿಬ್ಬರೂ ನಿನಗೆ ಬಹಳ ಕಿರುಕುಳಾ ಕೊಡ್ತಾರೇನ್ನು ?"

"ಕಿರುಕುಳ ಅಂದ್ರೆ ಅಷ್ಟಿಷ್ಟಲ್ಲ. ಕೂತಿದ್ದಕ್ಕೆ ನಿಂತಿದ್ದಕ್ಕೆ ತಪ್ಪು ಹುಡುಕೋ ಜನ. ಪ್ರತಿನಿತ್ಯವೂ ಏನಾದರೊಂದು ನೆಪಾ ಹುಡುಕಿಕೊಂಡು ನನಗೂ ನನ್ನ ತೌರುಮನೆಯವರಿಗೂ ಇಡಿಶಾಪ ಹಾಕದಿದ್ದರೆ ಅವರಿಗೆ ತಿಂದನ್ನ ಜೀರ್ಣವಾಗೋ ಹಾಗಿಲ್ಲ. ಬೆಳಿಗ್ಗೆ ಅಷ್ಟೊತ್ತಿಗೇ ಎದ್ದು ಗಾಣದೆತ್ತಿನಂತೆ ರಟ್ಟೇಮುರಿಯೋ ಹಾಗೆ ದುಡಿಯುತ್ತೇನೆ. ಕಸಮುಸರೇಯಿಂದ ಹಿಡಿದು ಅಡಿಗೇ ಕೆಲಸವೆಲ್ಲಾ ನನ್ನದೇ. ರಾತ್ರಿ ಹನ್ನೊಂದು ಗಂಟೆಗೇ ನಾನು ಹಾಸಿಗೆ ಕಾಣೋದು. ಇಷ್ಟು ಮಾಡಿದರೂ ಅವರಿಗೆ ತೃಪ್ತಿಯಿಲ್ಲ. ಕೆಲಸಾ ಎಷ್ಟಾದರೂ ಮಾಡೋಣ. ಅದಕ್ಕೆ ತಕ್ಕಹಾಗೆ ಹೊಟ್ಟೆ ತುಂಬಾ ಊಟಮಾಡೋಣವೆಂದರೆ ಅದಕ್ಕೂ ಆಸ್ಪದವಿಲ್ಲ. ನನ್ನೆದುರಿನಲ್ಲೇ ಅಷ್ಟು ತಿಂತಾಳೆ—ಇಷ್ಟು ತಿಂತಾಳೆ, ಅವಳ ಮಾರೀ ಹೊಟ್ಟೆಗೆಷ್ಟು ಹಾಕಿದರೂ ಸಾಲದೂಂತ ಮೂತೀ ತಿವೀತಿರ್ತಾರೆ. ಇಂತಹವರ ಹತ್ತಿರ ನಾನು ಹೇಗೆ ತಾನೇ ಏಗುವುದು ನೀವೇ ಹೇಳಿ ಸರೋಜಮ್ಮಾ."

"ಹೌದಮ್ಮಾ, ಬಹಳ ಕಷ್ಟ. ನೀನು ಹೇಳೋದು ಕೇಳಿದರೇನೇ ನನಗೆ ಸಂಕಟವಾಗುತ್ತೆ. ನೀನು ಪಾಪ ಅದು ಹ್ಯಾಗೆ ಆ ಮನೇಲಿ ಸಂಸಾರ ಮಾಡ್ತಿದೀಯೋ ದೇವರೇ ಬಲ್ಲ."

"ಅದೆಲ್ಲಾ ಹೋಗಲಿ. ಏನು ಬಂದರೂ ಅನುಭವಿಸೋಣ. ಹೆಂಗಸಾಗಿ ಹುಟ್ಟಿದ ಮೇಲೆ ಕಷ್ಟಪಡೋದು ಅವಳ ಹಣೇಲಿ ಬರದಿದೆ. ಕಣ್ಣೀರೇ ಅವಳ ಪಾಲಿನ ಪಂಚಾಮೃತಾಂತ ನಾನು ಅದೆಷ್ಟೆಷ್ಟೋ ಸಮಾಧಾನ ತಂದ್ಕೊಳ್ತಾ ಇರ್ತೇನೆ. ಆದರೆ ಒಂದ್ವಿಚಾರದಲ್ಲಿ ಮಾತ್ರ ನಾನು ಆ ಮನೆ

ಯುವರಿಗೆ ಸಗ್ಗೋಲ್ಲ. ಅದರಿಂದಲೇ ಅವರಿಗೆಲ್ಲಾ ನನ್ನ ಮೇಲೆ ದ್ವೇಷ. ತಮ್ಮ ಹೊಟ್ಟೇ ಉರೀನೆಲ್ಲಾ ಒಂದಲ್ಲಾ ಒಂದು ವಿಧವಲ್ಲಿ ನನ್ನ ಮೇಲೆ ತೀರಿಸ್ಕೋತಾರೆ.

"ಏನಮ್ಮಾ ಅದು ಅಂತಹ ವಿಷಯ!"

"ನನಗೆ ಹೇಳೋಕ್ಕೇ ನಾಚಿಕೆಯಾಗತ್ತೆ ಸರೋಜಮ್ಮ."

"ಪರವಾಗಿಲ್ಲ ಹೇಳುತಾಯಿ. ನಾನೂ ಹೆಂಗಸು. ಹೆಂಗಸರ ಕಷ್ಟ ಸುಖ ಏನೂಂತ ಬಲ್ಲೆ."

"ನನ್ನನ್ನ ಅವರ ಚಾಳೀಗೇ ಎಳೀಬೇಕೂಂತ ಅವರು ವಿಶ್ವ ಪ್ರಯತ್ನ ಮಾಡುತ್ತಿದಾರೆ. ಆದರೆ ಅವರ ಚಾಳಿ ನನಗೆ ಸರಿಬರೊಲ್ಲ. ಪ್ರಾಣವಾದರೂ ಬಿಟ್ಟೇನು. ಆದರೆ ಮಾನ ಕಳಕೊಂಡು ನಾನು ಜೀವಿಸ ಲಾರೆ ಸರೋಜಮ್ಮ. ಮಾನಹೋದ ಮೇಲೆ ಹೆಂಗಸು ಬದುಕಿದ್ದರೇನು–ಸತ್ತರೇನು. ಎರಡೂ ಒಂದೇ. ಹೆಂಗಸಿಗೆ ಮಾನವೇ ಪ್ರಾಣವಲ್ಲವೇ !!"

"ಓ ಮೈ ಪೂರ್‌ಗರ್ಲ್! ಆ ರಾಕ್ಷಸೀರು ತಾವು ಕೆಟ್ಟದ್ದಲ್ಲದೆ ನಿನ್ನನ್ನೂ ಕೆಡಿಸಬೇಕೆಂದಿದ್ದಾರಲ್ಲಾ !! ದೇವರು ಅಂಥವರಿಗೆ ಯಾವ ಶಿಕ್ಷೆ ಯನ್ನೂ ಕೊಡಲ್ಲವಲ್ಲ !!"

"ದಿನವೂ ಮನೆಗೆ ಬಂದು ಹೋಗೋ ಜನಕ್ಕಂತೂ ಲೆಕ್ಕವೇ ಇಲ್ಲ. ಅದು ಯಾರ್‍ಯಾರೋ ಬರ್‍ತಿರ್‍ತಾರೆ. ಹೋಗ್ತಿರ್‍ತಾರೆ. ರಾತ್ರಿಯಾಗುತ್ತಲೂ ನಾನು ನನ್ನ ಕೋಣೆಗೆ ಹೋಗಿ ಭದ್ರವಾಗಿ ಅಗಳೀ ಹಾಕ್ಕೊಂಡು ಬಿಡ್ತೇನೆ. ಅವರೆಷ್ಟೇ ಬಾಗಿಲು ಬಡಿಯಲೀ, ಏನೇಬೈಯ್ಯಲೀ, ನಾನು ಮಾತ್ರ ಬಾಗಿಲು ತೆಗೆಯೋದೇ ಇಲ್ಲ. ಹೀಗೆ ಪ್ರತಿನಿತ್ಯವೂ ನಡೆಯುತ್ತಿ ರುತ್ತೆ. ದಿನವೂ ನನಗೆ ಗಂಡಾಂತರ ತಪ್ಪಿದ್ದೇ ಅಲ್ಲ. ಅದಕ್ಕೇ ಸರೋ ಜಮ್ಮ ನಾನು ಹೇಳಿದ್ದು ನನಗೆ ಆ ಮನೆ ನರಕ ಪ್ರಾಯವಾಗಿದೇಂತ."

"ನಿನ್ನಗಂಡ ಇದೆಲ್ಲಾ ನೋಡಿಕೊಂಡು ಸುಮ್ಮನಿರ್‍ತಾನೇನಮ್ಮಾ!"

"ಅಯ್ಯೋ ನನ್ನ ಗಂಡ ಅಷ್ಟೆಲ್ಲಾ ಸವರಣೆಯಾಗಿದ್ದಿದ್ದರೆ ಮನೇಲಿ ಇಷ್ಟೆಲ್ಲಾ ಅನರ್ಥಗಳೇಕಾಗುತ್ತಿತ್ತು. ನೀವೇ ಹೇಳಿ ಸರೋಜಮ್ಮ. ಅವರ ಬುದ್ಧಿ ಪರಿಪಕ್ವವಾಗಿಲ್ಲದಿರೋ ಹೊತ್ತಿಗೇ ನಾನು ಆ ಮನೇಲಿ ಪಡ ಬಾರದ ಬವಣೆಗಳನ್ನೆಲ್ಲಾ ಪಡುತ್ತಿರೋದು."

"ಅವರೂ ರಾತ್ರೀ ಹೊತ್ತು ಮನೆಗೇ ಬರೊಲ್ಲ. ಒಂದೊಂದು ದಿನ ಅರ್ಧ ರಾತ್ರೇ ಮನೆಗೆ ಬಂದರೆ ಬಂದ್ರು. ಇಲ್ಲದಿದ್ರೆ ಇಲ್ಲ. ಹಾಗೆ ಬರೋದು ಬಹಳ ಅಪರೂಪ. ಬಂದರೂ ಸುಖವಿಲ್ಲ. ಕಂಠಪೂರ್ತೀ ಕುಡಿದು ಬಿಟ್ಟು ಬಂದಿರ್ತಾರೆ. ಆಗವರು ಮಾಡೋ ಕೆಲಸಾ ಎರಡೇ. ಒಂದಾ ನನ್ನನ್ನ ಚೆನ್ನಾಗಿ ದನಾಬಡಿಯೋಹಾಗೆ ಬಡಿಯೋದು !! ಇಲ್ಲಾ ಅವರ ಮಲತಾಯಿಯ ಹತ್ತಿರಲೋ ತಂಗಿಯ ಜತೇಲೋ ಜಗಳವಾಡಿ ಕೊಂಡು ಅವರಿಂದ ಒಂದಿಷ್ಟು ದುಡ್ಡು ಕಿತ್ತುಕೊಂಡು ಹೋಗೋದು !!

ರಾತ್ರೀಹೊತ್ತೇ ಹಾಗಾದ ಮೇಲೆ ಇನ್ನು ಬೆಳಗಿನ ಸುದ್ದೀ ಹೇಳಬೇಕಾಗಿಯೇ ಇಲ್ಲ. ಅದೆಲ್ಲಿ ಇರ್ತಾರೋ, ಅದೆಲ್ಲಿ ಊಟಾ ತಿಂಡೀ ಮಾಡ್ತಾರೋ ಆ ಪರಮಾತ್ಮನೊಬ್ಬನಿಗೇ ಗೊತ್ತು."

"ಅದೆಲ್ಲಾ ಹಾಳಾಗಿ ಹೋಗಲಿ. ನೀನು ಬಸಿರಿ ಹೆಂಗಸು. ಹಾಗೆ ನಿನ್ನ ಹೊಟ್ಟೇಮೇಲೆ ಒದ್ರೆ ನಿನ್ನಗತಿಯೇನಾಗುತ್ತೇನ್ನೋ ಯೋಚನೆಯೇ ಇಲ್ಲವಲ್ಲಾ ನಿನ್ನ ಗಂಡನಿಗೆ!! ಬಸಿರು ಹೆಂಗಸನ್ನ ಒದೆಯೋಕ್ಕೆ ಹ್ಯಾಗೆ ತಾನೇ ಮನಸ್ಸು ಬಂತೇಮ್ಮ ಆತನಿಗೆ!!"

"ಅದಕ್ಕೆ ನಾನ್ಯೇನು ಹೇಳಲೀ ಸರೋಜಮ್ಮ. ಅದು ನನ್ನ ಪೂರ್ವಾರ್ಜಿತ ಕರ್ಮ ಅಷ್ಟೆ".

"ಅದೆಂತಹ ಪೂರ್ವಾರ್ಜಿತ ಕರ್ಮವಮ್ಮ ನೀನು ಹೇಳೋದು! ಬೇಕು ಬೇಕೂಂತಲೇ ಕೊಬ್ಬಿದ ಜನ ಹೀಗೆ ಪಶುಗಳಿಗಿಂತಲೂ ಕಡೆಯಾಗಿ ವರ್ತಿಸಿದರೆ ಪೂರ್ವಾರ್ಜಿತ ಕರ್ಮವೇನು ಮಾಡುತ್ತೆ ಹೇಳು".

"ಏನೋ ಅಂತೂ ನನ್ನ ಸಂಸಾರದ ಕಥೆ ಹೀಗಿದೆ ಸರೋಜಮ್ಮ. ಇದುವರೆಗಾಯ್ತು ಯಾರ ಹತ್ತಿರಲೂ ನನ್ನ ಬಾಳಿನ ಗೋಳನ್ನು ಉಸಿರಿ ಕೊಂಡಿದ್ದಿಲ್ಲ. ಕಡೆಗೆ ನಮ್ಮ ತಾಯಿಯ ಹತ್ತಿರಲೂ ನಾನು ಹೇಳಿ ಕೊಂಡಿಲ್ಲ. ನೀವು ನನ್ನ ತಾಯಿಗಿಂತಲೂ ಹೆಚ್ಚು. ನಿಮ್ಮನ್ನ ನೋಡಿದರೆ ನನಗೇಕೋ ಕರುಳು ಬಾಧಿಸುತ್ತೆ ಸರೋಜಮ್ಮ! ಹಿಂದಿನ ಜನ್ಮದಲ್ಲಿ ನೀವೇ ನನ್ನ ತಾಯಿಯಾಗಿದ್ರೋ ಏನೋ."

"ಹುಚ್ಚು ಹುಡುಗೀ ಹೋಗು. ನಾನ್ಯೇನಮ್ಮಾ ನಿನಗೆ ಮಾಡಿದ ಉಪಕಾರ. ಏನೋ ಎಲ್ಲ ಬಸಿರೀ ಹೆಂಗಸರನ್ನ ನೋಡೋ ಹಾಗೆ ನಿನ್ನೂ

ಪರೀಕ್ಷೆ ಮಾಡಿದೆ. ನಿನ್ನ ದೇಹಸ್ಥಿತಿ ನೋಡಿ ನನಗೇಕೋ ಅನುಮಾನ ವುಂಟಾಯಿತು. ನೀನು ಬಸಿರಾದ ಮೇಲೆ ಏನೋ ಬಲವಾದ ಅಪಘಾತ ವುಂಟಾಗಿರಬೇಕೆಂದು ಊಹಿಸಿದೆ. ಅದರಿಂದ ನಿನ್ನನ್ನೇ ವಿವರ ಕೇಳಿ ಬಿಡೋಣಾಂತ ಕೇಳಿದೆ ಅಷ್ಟೆ. ಅಂತೂ ಸಂಸಾರದಲ್ಲಿ ಬಹಳ ನೊಂದಿದ್ದೀ ಯಮ್ಮಾ ನೀನು. ಈ ವಯಸ್ಸಿಗೇ ನಿನಗೆ ದೇವರು ಎಂತಹ ಕಷ್ಟ ತಂದಿಟ್ಟಿದ್ದಾನೆ. ಮುಖ್ಯ ಪಾಪಮಾಡಿದ್ರೇನೇ ಹೆಂಗಸಾಗಿ ಹುಟ್ಟೋದು ಈ ಪ್ರಪಂಚದಲ್ಲಿ!!"

ಸರೋಜಮ್ಮನವರಿಂದ ಅತಿಭಾರವಾದ ನಿಟ್ಟುಸಿರೊಂದು ಹೊರ ಬಿತ್ತು. ಅವರ ಕಣ್ಣುಗಳಂಚಿನಿಂದ ಕಂಬನಿಗಳೆರಡು ಜಗುಳಿದುದನ್ನು ಶಾರದೆ ಕಂಡಳು. ಅವಳಿಗೆ ಗಾಭರಿಯಾಯಿತು.

"ನನ್ನ ಗೋಳಿನ ಕಥೆ ತೋಡಿಕೊಂಡು ವೃಥಾ ನಿಮ್ಮ ಮನಸ್ಸಿಗೆ ವ್ಯಾಕುಲವುಂಟುಮಾಡಿದೆ ಸರೋಜಮ್ಮ. ದಯವಿಟ್ಟು ಕ್ಷಮಿಸಿ".

"ಛೆ ಛೆ ಹಾಗನ್ನ ಬೇಡಾ ತಾಯೀ. ಮುಖ್ಯ ನಮ್ಮ ಹೆಣ್ಣು ಮಕ್ಕಳ ಪಾಡು ಬಹಳ ಕಷ್ಟವಮ್ಮ. ಅವರಿಗೆ ಯಾವ ವಿಧದಲ್ಲೂ ಸುಖವಿಲ್ಲ."

ಸರೋಜಮ್ಮ ಇಷ್ಟು ಹೇಳಿ ತಮ್ಮ ಕೈಗಡಿಯಾರದ ಕಡೆ ನೋಡಿ ಕೊಂಡರು. ಅದಾಗಲೇ ಹನ್ನೆರಡೂವರೆ ತೋರಿಸುತ್ತಿತ್ತು. ಸರೋಜಮ್ಮ ತುಸು ಗಾಭರಿ ಬಿದ್ದರು. "ಎಷ್ಟೊತ್ತಾಗಿ ಹೋಯಿತಮ್ಮಾ. ಲೇಬರ್ ವಾರ್ಡಿನಲ್ಲಿ ಎರಡು ಹೆರಿಗೇ ಕೇಸುಗಳಿದ್ದವು. ಮರತೇ ಹೋದೆನಲ್ಲಾ" ಎನ್ನುತ್ತಾ ಕುರ್ಚಿಯ ಮೇಲೆ ಹೋಗಿ ಕೂತರು. ಶಾರದೆಗೆ ಪ್ರಿಸ್ಕ್ರಿಪ್ಷನ್ ಚೀಟೀ ಬರೆದುಕೊಟ್ಟು, "ಔಷಧೀ ಬರೆದು ಕೊಟ್ಟಿದ್ದೀನಿ. ದಿನವೂ ಮೂರು ಹೊತ್ತು ತಗೋ ತಾಯೀ. ನಾಳೆ ಬೆಳಿಗ್ಗೆ ಒಂಭತ್ತು ಘಂಟೆಗೆ ಆಸ್ಪತ್ರೆಗೆ ಬಾಮ್ಮ. ನಿನಗೆ ಪವರ್ ಟ್ರೀಟ್‌ಮೆಂಟ್ ಕೊಡ್ತೇನೆ. ಒಂದು ತಿಂಗಳು ನೀನು ಪವರ್ ಟ್ರೀಟ್‌ಮೆಂಟ್ ತಗೋಬೇಕು. ಇಲ್ಲದಿದ್ರೆ ನಿನ್ನ ಹೆರಿಗೆ ಬಹಳ ಕಷ್ಟವಾಗಿಬಿಡುತ್ತೆ. ನಿನ್ನ ದೇಹಸ್ಥಿತಿಯೂ ಊನವಾಗಿ ಬಿಡುತ್ತೆ."

"ಆಗಲೀ ಸರೋಜಮ್ಮ. ತಪ್ಪದೇ ಬರ್ತೇನೆ. ಸದ್ಯ ಅಷ್ಟು ಮಾತ್ರ ವಿಶ್ವಾಸದಿಂದ ನಮಗೆ ಹೇಳೋರು ಯಾರಿದ್ದಾರೆ. ಮುಖ್ಯ ನಿಮ್ಮ ಮನಸ್ಸು

ಅಷ್ಟು ದೊಡ್ಡದು.” ಸರೋಜಮ್ಮ ಕುರ್ಚಿಯಿಂದೆದ್ದು “ನಾನಿನ್ನು ಬರ್ತೀನಮ್ಮ ಲೇಟಾಗಿ ಹೋಯಿತು” ಎನ್ನುತ್ತಾ ಲೇಬರ್‌ವಾರ್ಡಿನ ಕಡೆ ಧಾವಿಸಿದರು.

ರೂಮಿನಿಂದ ಹೊರಗೆ ಬಂದ ಶಾರದೆಯನ್ನು ನೋಡಿ, “ಇಷ್ಟು ಹೊತ್ತಿನವರೆಗೂ ಅದೇನಕ್ಕಾ ಮಾಡ್ತಿದ್ರಿ ರೂಮಿನಲ್ಲಿ ಸೇರ್ಕೊಂಡು” ಎಂದು ಕೇಳಿದಳು ಕಮಲೂ.

“ಏನೂಇಲ್ಲ ಕಮಲೂ. ಡಾಕ್ಟ್ರು ನನ್ನ ಪರೀಕ್ಷೆ ಮಾಡ್ತಿದ್ರು.”

“ಅದೆಂಥಾ ಪರೀಕ್ಷೆಯಕ್ಕಾ ನೀನು ಹೇಳೋದು ! ಬಂದ ಹೆಂಗಸ್ರನ್ನೆಲ್ಲಾ ಐದೈದು ನಿಮಿಷದಲ್ಲಿ ನೋಡಿ ಕಳಿಸಿಬಿಟ್ರು ಡಾಕ್ಟ್ರು ! ಎಲ್ಲರ ಹಾಗೇ ನೀನೂ ಒಬ್ಬ ಬಸಿರಿ. ನಿನಗೇಕಿಷ್ಟು ಹೊತ್ತು ತಗೊಂಡ್ರು ಡಾಕ್ಟ್ರು ! ನಿನ್ನದೇನು ಸ್ಪೆಷಲ್‌ಕೇಸೋ!!

ತನ್ನ ತಂಗಿಯಮಾತಿಗೆ ನಗಬೇಕೋ ಅಳಬೇಕೋ ಶಾರದೆಗೆ ತಿಳಿಯದಾಯಿತು. ಕಡೆಗೆ “ಏನೂ ಇಲ್ಲಾ ಕಮಲೂ, ಡಾಕ್ಟ್ರು ಅದೂ ಇದೂ ಮನೇವಿಚಾರ ಕೇಳ್ತಿದ್ರು, ಹೇಳಿದೆ ಅಷ್ಟೆ.” ಎಂದಳು.

“ನಮ್ಮ ಮನೇರಾಮಾಯಾಣಾ ಕೇಳ್ತಾ ಕೂತ್ಕೋಳೋಕ್ಕೆ ಡಾಕ್ಟ್ರಿಗೆಲ್ಲಿ ಪುರಸತ್ತಿರತ್ತಕ್ಕಾ ! ಏನೋಮ್ಮಾ ನೀನು ಹೇಳೋದೇ ನನಗರ್ಥವಾಗೊಲ್ಲ.”

“ಹೋಗಲೀ ಬಿಡೇ ಕಮಲೂ. ಮನೆಗೆ ಬಾ ಹೋಗೋಣ. ಹೊತ್ತಾಯ್ತು. ಹೊಟ್ಟೇಲಿ ತಾಳಹಾಕ್ತಿದೆ. ಅಮ್ಮ ನಮಗೋಸ್ಕರಲೇ ಕಾದಿರ್ತಾಳೆ.” ಅಕ್ಕತಂಗಿಯರಿಬ್ಬರೂ ಬಿರಬಿರನೆ ಮನೆಯ ಕಡೆ ಕಾಲು ಹಾಕತೊಡಗಿದರು.

## ೧೫

“ಪೋಸ್ಟ್..........” ಪೋಸ್ಟ್‌ಮನ್ ಮುನಿಯಪ್ಪ ಸುಬ್ಬಣ್ಣನವರ ಮನೆಯಲ್ಲಿ ಲಕ್ಕೋಟೆಯೊಂದನ್ನೆಸೆದು ಹೋದ. ಹಾಲಿನಲ್ಲೇ ಕೂತಿದ್ದ ಕಮಲೂ ತಕ್ಷಣ ಎದ್ದು ಹೋಗಿ ಅದನ್ನು ತೆಗೆದುಕೊಂಡಳು. ವಿಳಾಸ ನೋಡಿದಳು. ಶ್ರೀಧರನಿಂದ ಬಂದ ಕಾಗದವಾಗಿತ್ತು. ಅಂದು ಶುಕ್ರವಾರ.

ಭಾಗ್ಯಮ್ಮ ಅದೇ ತಾನೇ ಲಕ್ಷ್ಮೀಪೂಜೆಯನ್ನು ಮುಗಿಸಿಕೊಂಡು ತುಳಸೀ ಪೂಜೆ ಮಾಡಲೆಂದು ಅಂಗಳಕ್ಕೆ ಬಂದಿದ್ದರು. ಶಾರದೆ ತಲೆಬಾಗಿಸಿ ಕೊಳ್ಳುತ್ತಾ ಅಂಗಳದಲ್ಲಿ ಕೂತಿದ್ದಳು. "ಅಣ್ಣನಿಂದ ಕಾಗದಾ ಬಂದಿದೆ ಯಮ್ಮಾ" ಎಂದು ಕೂಗುತ್ತಾ ಕಮಲೂ ಅಂಗಳಕ್ಕೆ ಬಂದಳು. ಶ್ರೀಧರನಿಂದ ಪತ್ರ ಬಂದಿರುವ ಸುದ್ದಿ ತಿಳಿದು ತಾಯಿ ಮಗಳಿಬ್ಬರಿಗೂ ಪರಮಾಶ್ಚರ್ಯವೆನಿಸಿತು. ಅವನು ಮೈಸೂರಿಗೆ ಹೋದಾರಭ್ಯ ಮನೆಗೆ ಕಾಗದವನ್ನೇ ಬರೆದಿರಲಿಲ್ಲ. ಅದೇ ಮೊದಲನೆಯ ಕಾಗದವಾಗಿತ್ತು. "ಏನು ಬರೆದಿದ್ದಾನೋ ಓದಿ ಹೇಳೇ ಕಮಲೂ" ಎಂದರು ಭಾಗ್ಯಮ್ಮ. ಕಮಲೂ ಕಾಗದಾ ಓದತೊಡಗಿದಳು. ಕಾಗದದ ಒಕ್ಕಣೆ ಹೀಗಿತ್ತು.

ಕ್ಷೇಮ ಶ್ರೀ ಮೈಸೂರು.

ಮಾತೃಶ್ರೀಯವರ ಚರಣಾರವಿಂದಗಳಲ್ಲಿ ಚಿರಂಜೀವಿಯು ಮಾಡುವ ಅನಂತ ಪ್ರಣಾಮಗಳು. ಉ|| ಕು|| ಸಾಂ|| ಇಷ್ಟು ದಿನಗಳ ಮೇಲೆ ನನ್ನ ಕಾಗದವನ್ನು ನೋಡಿ ನಿಮಗಾಶ್ಚರ್ಯವಾಗುವುದು ಸಹಜ. ಇದುವರೆಗೂ ನಾನು ಕಾಗದಾ ಬರೆಯದಿರಲು ಕಾರಣವಿಲ್ಲದೇ ಇಲ್ಲ. ನಾನು ತಮ್ಮೆಲ್ಲರ ಆಗ್ರಹಕ್ಕೆ ಪಾತ್ರನಾಗಿ ಹೊರಬಿದ್ದ ಮೇಲೆ ನನ್ನ ಭವಿಷ್ಯದ ಬಗ್ಗೆ ದೀರ್ಘವಾಗಿ ಚಿಂತಿಸತೊಡಗಿದೆ. ನನ್ನ ವಿದ್ಯಾಭ್ಯಾಸಕ್ಕೆ ಶರಣುಹೊಡೆದು ಯಾವುದಾದರೊಂದು ಚಾಕರಿಯ ಬೆನ್ನು ಹತ್ತಬೇಕೆಂದು ನಿರ್ಧರಿಸಿ ಕೊಂಡೆ. ಹಾಗೆ ನಾನು ಮಾಡಿದಲ್ಲಿ, ಇಷ್ಟು ದಿನಗಳೂ ನಾನು ಪಟ್ಟಕಷ್ಟ, ನನಗಾಗಿ ನೀವೆಲ್ಲಾ ಮಾಡಿರುವ ತ್ಯಾಗ ಎಲ್ಲವೂ ಹೊಳೆಯಲ್ಲಿ ಹುಣಿಸೇ ಹಣ್ಣು ತೈಯ್ದ ಹಾಗಾಗುತ್ತೆಂದು ನನಗನ್ನಿಸಿತು.

ಏನೇ ಆಗಲಿ ಇನ್ನೆರಡು ವರ್ಷ ಹಲ್ಲುಕಚ್ಚಿಕೊಂಡು ಬಂದ ಎಡರು ತೊಡರುಗಳನ್ನೆಲ್ಲಾ ನಿವಾರಿಸಿಕೊಂಡು ಓದಿಬಿಡಬೇಕೆಂದು ತೀರ್ಮಾನಿಸಿ ಕೊಂಡೆ. ಆದರೆ ಯಾವ ಧೈರ್ಯದ ಮೇಲೆ ಹಾಗೆ ತೀರ್ಮಾನಿಸಿ ಕೊಂಡೆನೋ ನನಗೇ ಆಶ್ಚರ್ಯವಾಗಿದೆ. ನಾನು ಮೈಸೂರಿಗೆ ಹೋದ ದಿನ ನಿಜವಾಗಿಯೂ ನಾನೊಬ್ಬ ದುರ್ದೈವಿಯೆಂದೇ ಬಗೆದೆ. ನನ್ನ ಸ್ನೇಹಿತರ ಪೈಕಿ ಯಾರೊಬ್ಬರೂ ಊರಲ್ಲಿರಲಿಲ್ಲ. ಕೈಯಲ್ಲಿ ಬಿಡಿಕಾಸಿರಲಿಲ್ಲ.

ಒಂದೆರಡು ದಿನಗಳು ಪೂರ್ತಿ ಉಪವಾಸವ್ರತವನ್ನಾಚರಿಸಿದೆ. ಆಮೇಲೆ ನನ್ನ ಪ್ರೊಫೆಸರೊಬ್ಬರನ್ನು ಕಂಡು ಅವರ ಹತ್ತಿರ ನನ್ನ ಗೋಳನ್ನು ಹೇಳಿಕೊಂಡೆ. ಅವರಿಗೆ ನನ್ನ ಮೇಲೆ ದಯೆ ಬಂದು ತಮ್ಮ ಮನೆಯಲ್ಲೇ ನನಗೆರಡು ವಾರಗಳನ್ನು ಕೊಟ್ಟರು. ಕಾಲೇಜು ಹಾಸ್ಟೆಲಿನ ವಾರ್ಡನ್ನರಿಗೆ ಶಿಫಾರಸುಮಾಡಿಸಿ ಅಲ್ಲೆರಡು ವಾರಗಳನ್ನು ಕೊಡಿಸಿಕೊಟ್ಟರು. ಸದ್ಯ ನಾನು ಬದುಕಿದೆ. ವಾರದಲ್ಲಿ ನಾಲ್ಕು ದಿನಗಳು ಆಹಾರ ದೊರೆಯುವಂತಾಯಿತು. ಉಳಿದ ಮೂರು ದಿನಗಳನ್ನು ಹೇಗಾದರೂ ಕಳೆಯೋಣವೆಂದುಕೊಂಡೆ. ಆದರೆ ದೇವರು ದೊಡ್ಡವನು! ನನಗೆ ಈ ಕಷ್ಟ ಹೆಚ್ಚು ದಿನಗಳಿರಲಿಲ್ಲ. ಕಾಲೇಜು ಬಾಗಿಲು ತೆಗೆದಕೂಡಲೇ ನನ್ನ ಸ್ನೇಹಿತರೆಲ್ಲ ಈ ಊರಿಗೆ ಬಂದರು.

ನನ್ನ ಪ್ರಾಣಮಿತ್ರ ಅನಂತರಾಮೈಯ್ಯ ಬಂದ ಮೇಲೆ ನನ್ನ ಈ ಉಪವಾಸ ವನವಾಸಗಳು ಕೊನೆಗೊಂಡಿತು. ಅವನಿಂದ ನನಗಾಗುತ್ತಿರುವ ಸಹಾಯ ಅಷ್ಟಿಷ್ಟಲ್ಲ. ಅವನಿಗೆ ನನ್ನ ಮೇಲೆ ಇರತಕ್ಕ ಪ್ರೀತಿವಿಶ್ವಾಸಗಳನ್ನಂತೂ ಬಣ್ಣಿಸಿ ಹೇಳಲಾರೆ. ಒಂದು ಮಾತಿನಲ್ಲಿ ಹೇಳುವುದಾದರೆ ತನ್ನ ಸ್ನೇಹ ಪಂಜರದಲ್ಲಿ ಭದ್ರವಾಗಿಟ್ಟ ಪಕ್ಷಿಯಂತೆ ನನ್ನನ್ನು ರಕ್ಷಿಸುತ್ತಿದ್ದಾನೆ! ನನಗೆ ಯಾವುದಕ್ಕೂ ಕೊರತೆ ಮಾಡಿಲ್ಲ. ನಾನು ವಾರಾನ್ನಗಳಿಗಾಗಿ ಅಲೆಯುವುದನ್ನು ತಪ್ಪಿಸಿ ತಾನು ಊಟ ಮಾಡುವ ಹೋಟಲಲ್ಲೇ ನನಗೂ ಊಟದ ವ್ಯವಸ್ಥೆ ನಡೆಸಿದ್ದಾನೆ. ನನ್ನ ಆ ಮಿತ್ರನ ಋಣವನ್ನು ನಾನು ಏಳೇಳು ಜನ್ಮಗಳಲ್ಲೂ ತೀರಿಸಲಾರೆ. ಅದಿರಲಿ.

ನಿಮಗೆ ಹಲವಾರು ಸಂತೋಷದ ಸುದ್ದಿಗಳನ್ನು ತಿಳಿಸಲು ನನಗೆ ಬಹಳ ಹರ್ಷವುಂಟಾಗಿದೆ. ಮೊದಲನೆಯದಾಗಿ ನನಗೀವರ್ಷದ ಮೆರಿಟ್ ಸ್ಕಾಲರ್‌ಷಿಪ್ ದೊರೆತಿದೆ. ಇದು ವಿಶ್ವವಿದ್ಯಾನಿಲಯದವರು ವಿದ್ಯಾರ್ಥಿಯ ಮೇಧಾಶಕ್ತಿಯನ್ನು ಮೆಚ್ಚಿಕೊಡುವ ವಿದ್ಯಾರ್ಥಿವೇತನ. ಅದರಿಂದ ತಿಂಗಳಿಗೆ ಹದಿನೈದು ರೂಪಾಯಿ ಕೈಗೆ ಬರುತ್ತೆ. ಅದಲ್ಲದೆ ನನಗೆ ಫೀಸೂ ಪೂರ್ತಿಯಾಗಿ ಮಾಫಿಯಾಗಿದೆ. ನಾನು ಇತರ ವಿದ್ಯಾರ್ಥಿಗಳಂತೆ ತಿಂಗಳೊಂದಕ್ಕೆ ಹದಿನೈದು ರೂಪಾಯಿ ಫೀಸು ಕಟ್ಟಬೇಕಾಗಿಲ್ಲ. ಸದ್ಯ ನನ್ನ ವಿದ್ಯಾಭ್ಯಾಸ ನಿರ್ವಿಘ್ನವಾಗಿ ನೆರವೇರುವಂತೆ ಭಗವಂತ ಅನುಗ್ರಹಿಸಿದ. ಮತ್ತೊಂದು ಸಂತೋಷದ ಸುದ್ದಿಯೆಂದರೆ ನಾನು ಬರೆದ ನೀಳ್ಗತೆ[illegible]ನ

ವೊಂದಕ್ಕೆ ಬಂಗಾರದ ಪದಕ ಬಹುಮಾನವಾಗಿ ಬಂದಿದೆ! ಇದಂತೂ ನನಗೆ ನಿಜವಾಗಿಯೂ ಅಭಿಮಾನಾಸ್ಪದವಾದ ಸಂಗತಿ. ಅಮ್ಮಾ, ಪ್ರಸ್ತುತ ನಿನಗೆ ನನ್ನ ಬಾಲ್ಯದ ದಿನಗಳನ್ನು ಸ್ವಲ್ಪ ನೆನಪು ಮಾಡಿ ಕೊಡಲಿಚ್ಛಿಸು ತ್ತೇನೆ. ಆಗ ನನಗಿನ್ನೂ ಆರೇಳು ವರ್ಷಗಳಿದ್ದಿರಬಹುದು. ನಾನು ನಮ್ಮೂರಿನ ರಾಮದೇವರ ದೇವಸ್ಥಾನದಲ್ಲಿ ನಿನ್ನ ತೊಡೆಯ ಮೇಲೆ ಕುಳಿತು ಆಡಿದ್ದ ಕೆಲವು ಮಾತುಗಳು ನಿನಗೆ ನೆನಪಿದೆಯೋ ಇಲ್ಲವೋ ಹೇಳಲಾರೆ. ನಾನಂತೂ ಮರೆತಿಲ್ಲ.

ಸ್ವಲ್ಪ ಹಾಗೆಯೇ ನೆನಪು ತಂದುಕೋ ನೋಡೋಣ. ಏನು ಹೇಳಿದ್ದೇ ಗೊತ್ತೇ! "ಅಮ್ಮಾ ನಾನು ದೊಡ್ಡವನಾದ ಮೇಲೆ ಪದ್ಯಾ ಬರೆಯುತ್ತೀನಿ. ಕಥೆಯೂ ಬರೆಯುತ್ತೀನಿ. ನಾನೊಬ್ಬ ಸಾಹಿತಿಯಾಗು ತ್ತೀನಿ. ಅಷ್ಟೇ ಅಲ್ಲ. ನಾನು ಬಿ. ಎ. ಪ್ಯಾಸು ಮಾಡುತ್ತೀನಿ. ಕೈತುಂಬಾ ಸಂಬಳಾ ತರ್ತೀನಿ. ಒಂದು ದೊಡ್ಡ ಬಂಗಲೇಮಾಡಿ ನಿನ್ನನ್ನೂ ಅಣ್ಣನನ್ನೂ ಅದರಲ್ಲಿಟ್ಟು ದಿನವೂ ಪೂಜೇ ಮಾಡ್ತೀನಿ! ತಾಯಿ ತಂದೆಗಳು ದೇವರ ಸಮಾನವೆಂದು ನಮ್ಮ ಮೇಷ್ಟ್ರು ಹೇಳಿದ್ದಾರೆ!!" ಇನ್ನೂ ಹೀಗೆಯೇ ಅದೇನೇನೋ ಹೇಳಿದ್ದೆ ನಾನು!! ನೆನೆಸಿಕೊಂಡರೆ ನನಗೇ ನಗು ಬರುತ್ತೆ.

ಪ್ರತಿಯೊಬ್ಬ ವ್ಯಕ್ತಿಯ ಬಾಲ್ಯ ಜೀವನವೂ ಒಂದೊಂದು ರೀತಿ ಯಾಗಿರುತ್ತೆ. ಆ ಚಿಕ್ಕ ವಯಸ್ಸಿನಲ್ಲೇ ಆ ವ್ಯಕ್ತಿಯ ಭಾವೀ ಜೀವನದ ರೂಪರೇಷೆಗಳು ಆತನ ಚಿತ್ತಭಿತ್ತಿಯ ಮೇಲೆ ಅಚ್ಚೊತ್ತಿಬಿಟ್ಟಿರುತ್ತವೆ. ತಮ್ಮ ತಮ್ಮ ಜೀವನದ ಸಾರ್ಥಕತೆ ಹಾಗೂ ನಿರರ್ಥಕತೆಗಳ ಹೊಣೆಗಾರಿಕೆ ಆಯಾ ವ್ಯಕ್ತಿಗಳ ಕ್ರಿಯಾಶಕ್ತಿಯನ್ನೇ ಅವಲಂಬಿಸಿದೆ.

ನಾನು ಹೇಳಬೇಕೆಂದಿರುವುದಿಷ್ಟೇ ಅಮ್ಮಾ. ನನಗೆ ಚಿಕ್ಕಂದಿ ನಿಂದಲೂ ಓದಿ ವಿದ್ಯಾವಂತನೆನಿಸಿಕೊಳ್ಳಬೇಕೆಂಬ ಹಂಬಲ ತೀವ್ರವಾಗಿತ್ತು. ಅದರಂತೆಯೇ ನಾನೊಬ್ಬ ಕವಿಯಾಗಬೇಕೆಂಬ ಹುಚ್ಚೂ ಬಲವಾಗಿ ಹಿಡಿದಿತ್ತು. ಇವೆರಡೂ ನನ್ನ ಜೀವನದ ಆದರ್ಶಗಳು. ನನ್ನ ಈ ಧ್ಯೇಯ ಗಳನ್ನು ಸಾಧಿಸಿಯೇ ತೀರುತ್ತೇನೆಂಬ ದೃಢವಿಶ್ವಾಸವೂ ಅದಕ್ಕೆ ತಕ್ಕ ಶ್ರದ್ಧೆ ಉತ್ಸಾಹಗಳೂ ನನ್ನಲ್ಲಿವೆ. ಈಗಲೀಗ ನನ್ನ ಕನಸು ಎಲ್ಲಾ ನನಸಾಗುತ್ತಲಿವೆ!

ನನ್ನ ಕವಿ ಜೀವನದ ಉತ್ಕರ್ಷ ಇದೀಗ ಪ್ರಾರಂಭವಾಗಿದೆಯೆನ್ನ ಬಹುದು. ನನ್ನ ಬೆಂಗಾಡಿನ ಜೀವನದಲ್ಲಿ ಪುನಃ ಕಾವ್ಯದ ಹೊನಲು ಹರಿಯತೊಡಗಿದೆ. ಚಿಂತೆ, ನೈರಾಶ್ಯಗಳಿಂದ ರೂಕ್ಷವಾಗಿದ್ದ ನನ್ನ ಹೃದಯ ದಲ್ಲಿ ರಸದೊರತೆ ಚಿಮ್ಮುತ್ತಿದೆ. ಅಂತೆಯೇ ನನ್ನ ಜೀವನದಲ್ಲಿ ಕಾವ್ಯಹಾಸು ಹೊಕ್ಕಾಗಿ ಬೆರೆತುಹೋಗಿದೆ. ನನ್ನ ವಿದ್ಯಾರ್ಥಿ ಜೀವನ ಸುಗಮವಾಗಿ ಸಾಗುತ್ತಿದೆ. ನೀವೇನೂ ನನ್ನ ಬಗ್ಗೆ ಹಳಹಳಿಪಡಬೇಡಿ. ನಾನಿಲ್ಲಿ ಸುಖವಾಗಿರುತ್ತೇನೆ.

ಮಾ|| ಅಕ್ಕನವರಿಗೆ ಬಳೇತೊಡಿಸುವ ಸಮಾರಂಭ ಸಾಂಗವಾಗಿ ನೆರವೇರಿದ್ದನ್ನು ಕೇಳಿ ಸಂತೋಷವುಂಟಾಯಿತು. ಅಕ್ಕನವರನ್ನು ನೋಡಿ ಎರಡು ವರ್ಷಗಳ ಮೇಲಾಯಿತು. ದಸರಾ ರಜಕ್ಕೆ ಊರಿಗೆ ಬರಬೇಕೆಂದಿ ದ್ದೇನೆ. ನಿಮ್ಮೆಲ್ಲರನ್ನೂ ನೋಡಬೇಕೆಂದು ಮನಸ್ಸು ತುಡಿದುಕೊಳ್ಳುತ್ತಿದೆ. ಆದರೆ ರಜಾ ಬರಲು ಇನ್ನೆರಡು ತಿಂಗಳಿವೆ. ಅಷ್ಟು ಹೊತ್ತಿಗೆ ಅಕ್ಕನವರ ಹೆರಿಗೆಯಾಗಿರುತ್ತೆಂದು ಭಾವಿಸುತ್ತೇನೆ. ನನಗೊಬ್ಬ ಪುಟ್ಟ ಸೋದರಳಿಯ ಹುಟ್ಟಲೆಂದು ಹಾರೈಸುತ್ತೇನೆ.

ಕಳೆದ ನಾಲ್ಕೈದು ತಿಂಗಳಿಂದ ಬಂದ ವಿದ್ಯಾರ್ಥಿ ವೇತನವನ್ನು ಯಾವ ವಿಲೇವಾರಿಯೂ ಮಾಡದೆ, ಸಮಯಕ್ಕೊದಗಲೆಂದು ಇಟ್ಟಿದ್ದೇನೆ. ಬೆಳಗಿನ ಹೊತ್ತು ಒಂದೆರಡು ಪಾಠದ ಮನೆಗಳನ್ನು ಗೊತ್ತುಮಾಡಿ ಕೊಂಡಿದ್ದೇನೆ. ಅದರಿಂದಲೂ ಸ್ವಲ್ಪ ಹಣ ಸಂದಾಯವಾಗುತ್ತಿದೆ. ಒಟ್ಟು ನೂರು ರೂಪಾಯಿ ಸೇರಿಸಿದ್ದೇನೆ. ಈ ಹಣವನ್ನು ನಿಮಗೆ ಈವತ್ತು ಮನಿಯಾರ್ಡರು ಮಾಡಿದ್ದೇನೆ. ಮಾ|| ಅಕ್ಕನವರ ಬಾಣಂತನದ ಖರ್ಚಿಗೆ ಅದನ್ನು ವಿನಿಯೋಗಿಸಬೇಕೆಂದು ನನ್ನ ಕೋರಿಕೆ. ಅವರಿಗೆ ಇದೇ ಈ ಬಡ ತಮ್ಮ ಸಲ್ಲಿಸುತ್ತಿರುವ ಅಲ್ಪ ಕಾಣಿಕೆ.

ಮನೆಯಲ್ಲಿ ನೀವೆಲ್ಲರೂ ಆರೋಗ್ಯದಿಂದಿರುವಿರೆಂದು ನಂಬುತ್ತೇನೆ. ಚಿ|| ಕಮಲೂ ಸ್ಕೂಲಿಗೆ ಹೋಗುತ್ತಿದ್ದಾಳೆ ತಾನೇ? ಚಿ||ಗಳಾದ ರಾಘಣ್ಣ, ಕೂಸಣ್ಣ, ಇವರಿಗೆ ಚೆನ್ನಾಗಿ ಓದಿಕೊಳ್ಳಬೇಕೆಂದು ಹೇಳುವುದು. ಚಿ|| ಸರಸೂ ಸ್ವತಃ ಜಾಣೆ. ಅವಳಿಗೆ ಯಾರೂ ಹೇಳಬೇಕಾದ್ದಿಲ್ಲ. ನನ್ನ ಪುಟ್ಟ ತಮ್ಮ ಚಿ|| ರಾಧಾಕೃಷ್ಣ ಈಗ ಬಹಳ ತುಂಟನಾಗಿಬಿಟ್ಟಿರಬಹುದು. ಅವ

ನನ್ನು ಹುಷಾರಾಗಿ ನೋಡಿಕೊಳ್ಳುವುದು. ತೀರ್ಥರೂಪರವರಿಗೂ ಮಾ|| ಅಕ್ಕನವರಿಗೂ ನನ್ನ ಸಾಷ್ಟಾಂಗವಂದನೆಗಳನ್ನು ದಯವಿಟ್ಟು ತಿಳಿಸುವುದು. ಚಿರಂಜೀವಿಗಳಿಗೆಲ್ಲಾ ನನ್ನ ಹೃತ್ಪೂರ್ವಕವಾದ ಆಶೀರ್ವಾದಗಳು.

ನಿಮ್ಮೆಲ್ಲರ ಕ್ಷೇಮಲಾಭಾದಿಗಳಿಗೆ ವಾರಕ್ಕೊಮ್ಮೆ ಕಾಗದಾ ಬರೆಯುತ್ತಿರಬೇಕಾಗಿ ಬೇಡುತ್ತೇನೆ.

ಇನ್ನೇನೂ ವಿಶೇಷವಿಲ್ಲ.

ಇಂತೀ ನಮಸ್ಕಾರಗಳು.
"ಶ್ರೀಧರ."

ಕಮಲೂ ಕಾಗದಾ ಓದಿ ಮುಗಿಸಿದಾಗ ಭಾಗ್ಯಮ್ಮನವರ ಕಣ್ಣುಗಳಲ್ಲಿ ಆನಂದಬಾಷ್ಪಗಳು ಸುರಿದುಹೋಗುತ್ತಿದ್ದವು. ಶಾರದೆಯಂತೂ ಬಿಕ್ಕಿ ಬಿಕ್ಕಿ ಅಳತೊಡಗಿದ್ದಳು. ಕಮಲೂ ಇವರಿಬ್ಬರನ್ನೂ ನೋಡಿ ಬೆಪ್ಪು ಬಡಿದು ನಿಂತುಬಿಟ್ಟಿದ್ದಳು. "ಭಂಗಾರದಂತಹ ಹುಡುಗ. ದೇವರು ಎಲ್ಲಾದರೂ ಚೆನ್ನಾಗಿಟ್ಟಿರಲಿ. ಅವನು ಓದಿ ಮುಂದಕ್ಕೆ ಬಂದರೆ ಈ ಮನೆಯ ನಂದಾದೀಪವಾಗಿ ಬೆಳಗುತ್ತಾನೆ. ಚಿರಂಜೀವಿಯಾಗಿ ಬಾಳು ನನ್ನ ಕಂದಾ" ಎಂದು ಮಗನನ್ನು ಬಾಯಿತುಂಬಾ ಹರಸಿದರು ಭಾಗ್ಯಮ್ಮ.

"ನನ್ನ ಮೇಲೆ ಅವನಿಗದೆಷ್ಟು ಪ್ರೀತಿಯಮ್ಮಾ. ಪಾಪ, ತಾನು ಉಪವಾಸ ವನವಾಸ ಮಾಡಿಕೊಂಡು ಸಂಪಾದಿಸಿದ ನಾಲ್ಕು ಕಾಸು ಕೂಡಿ ಹಾಕಿ ನನಗೋಸ್ಕರ ಕಳಿಸಿದ್ದಾನಲ್ಲಾ! ಅವನ ಮನಸ್ಸೆಷ್ಟು ಒಳ್ಳೆಯದಮ್ಮಾ!! ಅಕ್ಕನಮೇಲೆ ಇಷ್ಟು ಅಕ್ಕರೆ ಆದಿವಾರಪಡೋ ತಮ್ಮನನ್ನ ಪಡಕೊಂಡು ಬಂದಿರೋದು ನಿಜವಾಗಲೂ ನನ್ನ ಭಾಗ್ಯ! ನನ್ನ ತೌರು ಮನೆಯ ಭಾಗ್ಯ!! ದೇವರು ಅವನನ್ನು ನೂರು ವರ್ಷ ಚೆನ್ನಾಗಿಟ್ಟಿರಲಿ. ಬೇಗ ಓದು ಮುಗಿದು ಅವನಿಗೊಂದು ಭಾರಿ ಉದ್ಯೋಗ ದೊರೆಯಲಿ" ಎಂದು ಹಾರೈಸಿದಳು ಶಾರದೆ. ಭಾಗ್ಯಮ್ಮ ತುಳಸೀ ಪೂಜೆಯನ್ನು ಮುಗಿಸಿದರು. ಅಷ್ಟು ಹೊತ್ತಿಗೆ ಕಮಲೂ ಅಡಿಗೆ ಮನೆಯಲ್ಲಿ ಎಲ್ಲರಿಗೂ ತಟ್ಟೆ ಹಾಕಿದ್ದಳು. ಹುಡುಗರೆಲ್ಲರೂ ಸಾಲಾಗಿ ಊಟಕ್ಕೆ ಕೂತರು. ಭಾಗ್ಯಮ್ಮ ಬಡಿಸತೊಡಗಿದರು.

೧೬

"ಬೇಗ ಡ್ರೆಸ್‌ಮಾಡ್ಕೋ ಪುಣ್ಯಾತ್ಮಾ. ಹೊತ್ತಾಗಿಹೋಯ್ತು."

"ನಂದೆಷ್ಟುಯ್ಯಾ ಆಗ್ಹೋಯ್ತು. ನೀನು ಎಲೆಕ್ಷನ್ ಪ್ರಾಪಗ್ಯಾಂಡಾ ಸ್ಪೀಚ್ ತಯಾರುಮಾಡಿಕೊಂಡೇನಯ್ಯಾ ?"

"ಸ್ಪೀಚೇನು ರೆಡೀಮಾಡ್ಕೊಳ್ಳೋದು. ಎಕ್ಸ್‌ಟೆಂಪೋರಾಗಿ ಮಾತಾಡೋದು ಲೀಲಾಜಾಲವಾಗಿ ಹೋಗಿರುವಾಗ"

"ಹಾಗಾದರೆ ನಿನ್ನ ಧೈರ್ಯವಪ್ಪ"

"ನೀನ್ಯೇನೂ ಹೆದರಬೇಡ ನಡಿಯಯ್ಯ."

ಗೆಳೆಯರಿಬ್ಬರೂ ಬಟ್ಟೇಹಾಕಿಕೊಂಡು ಒಳ್ಳೆಯ ಹುರುಪಿನಿಂದ ಕಾಲೇಜಿನ ಕಡೆ ಧಾವಿಸಿದರು. ಅಂದು ಕಾಲೇಜು ಯೂನಿಯನ್ನಿನ ಎಲೆಕ್ಷನ್ ಸಮಾರಂಭ. ಕಾಲೇಜು ವಿದ್ಯಾರ್ಥಿಗಳ ಪೈಕಿಯೇ ಅಧ್ಯಕ್ಷರನ್ನೂ ಉಪಾಧ್ಯಕ್ಷರನ್ನೂ ಕಾರ್ಯದರ್ಶಿಗಳನ್ನೂ ಕಾರ್ಯಕಾರೀ ಸಮಿತಿಯ ಸದಸ್ಯರುಗಳನ್ನೂ ವಿದ್ಯಾರ್ಥಿವೃಂದ ಚುನಾಯಿಸಬೇಕಾಗಿತ್ತು. ಮಿತ್ರರಿಬ್ಬರೂ ಚುನಾವಣೆಗೆ ನಿಂತಿದ್ದರು. ಅನಂತರಾಮೈಯ್ಯ ಕಾರ್ಯದರ್ಶಿ ಸ್ಥಾನಕ್ಕೆ ಸ್ಪರ್ಧಿಸಿದ್ದ. ಶ್ರೀಧರ ಕಾರ್ಯಕಾರೀ ಸಮಿತಿಯ ಸದಸ್ಯ ಸ್ಥಾನಕ್ಕೆ ಮಾತ್ರ ಉಮೇದುವಾರನಾಗಿ ನಿಂತಿದ್ದ.

ಕಾಲೇಜು ಯೂನಿಯನ್ನಿನ ಎಲೆಕ್ಷನ್ ಸಮಾರಂಭವೆಂದರೆ ಅದೊಂದು ದೊಡ್ಡ ಸಡಗರ. ಪೌರಸಭೆ ಪ್ರಜಾಪ್ರತಿನಿಧಿ ಸಭೆ ಮತ್ತು ನ್ಯಾಯವಿಧಾಯಕ ಸಭೆ ಮುಂತಾದುವುಗಳಿಗೆ ನಡೆಯುವ ಚುನಾವಣೆಗಳಿಗಿಂತಲೂ ಕಡಿಮೆಯಾದ್ದೇನಲ್ಲ ಕಾಲೇಜು ಯೂನಿಯನ್ನಿನ ಚುನಾವಣೆ. ಆಗ ವಿದ್ಯಾರ್ಥಿಗಳ ಸಂಭ್ರಮ, ಉತ್ಸಾಹ, ಆನಂದಗಳನ್ನಂತೂ ವರ್ಣಿಸಲಶಕ್ಯ. ವಿದ್ಯಾರ್ಥಿ ವೃಂದದಲ್ಲಿ ದೊಡ್ಡ ಕೋಲಾಹಲವನ್ನೆಬ್ಬಿಸಿ ಬಿಡುತ್ತದೆ ಈ ಚುನಾವಣಾ ಸಮಾರಂಭ. ತಮ್ಮ ತಮ್ಮ ಮಿತ್ರರು ಚುನಾವಣೆಗಳಲ್ಲಿ ಆರಿಸಿ ಬರಲೆಂದು ವಿದ್ಯಾರ್ಥಿಗಳು ಕೈಗೊಳ್ಳುವ ಸಂತತ ಪ್ರಚಾರ, ಅವರು ಅಲ್ಲಲ್ಲಿ ಸಭೆ ಸೇರಿಸಿ, ಮಾಡುವ ಉತ್ಸಾಹಪೂರಿತ ಭಾಷಣಗಳು, ಅವರ ಓಡಾಟ ಇವುಗಳನ್ನು ನೋಡಲು ಎರಡು ಕಣ್ಣು ಸಾಲವು.

ಕಳೆದ ಒಂದು ವಾರದಿಂದಲೂ ಚುನಾವಣಾ ಕೋಲಾಹಲ ಅವ್ಯಾಹತವಾಗಿ ಸಾಗುತ್ತಿತ್ತು. ತರಗತಿಗಳಲ್ಲಿ ವಿದ್ಯಾರ್ಥಿಗಳ ಹಾಜರಾತಿಯೇ ಇರುತ್ತಿರಲಿಲ್ಲ. ಇನ್ನು ಪಾಠ ಪ್ರವಚನಗಳ ಮಾತಂತೂ ಹೇಳಬೇಕಾದ್ದೇ ಇಲ್ಲ. ಇದ್ದಕ್ಕಿದ್ದಹಾಗೇ ಎಲೆಕ್ಷನ್ ಬಿರುಗಾಳಿ ಬೀಸಿಬಂದು ಪ್ರಶಾಂತ ವಾಗಿದ್ದ ಕಾಲೇಜು ವಾತಾವರಣ ಕಲಕಿಹೋಯಿತು.

ಮಧ್ಯಾಹ್ನ ನಾಲ್ಕು ಗಂಟೆಯ ಸಮಯ. ಸೀನಿಯರ್ ಬಿ. ಎ. ಹಾಲಿನಲ್ಲಿ ಅಸಾಧ್ಯ ಗದ್ದಲ. ನೂರಾರು ಮಂದಿ ವಿದ್ಯಾರ್ಥಿಗಳು ತಮ್ಮ ತಮ್ಮ ಮಿತ್ರರ ಹೆಸರುಗಳನ್ನು ಅಚ್ಚುಹಾಕಿರುವ ಪ್ಲೆಕಾರ್ಡುಗಳನ್ನಿಟ್ಟು ಕೊಂಡು, ಚುನಾವಣಾ ಪ್ರಚಾರ ಕಾರ್ಯವನ್ನು ಬಹಳ ಭರಾಟೆಯಿಂದ ನಡೆಸುತ್ತಿದ್ದರು. ಪ್ಲಾಟ್‌ಫಾರಮ್ಮಿನ ಮೇಲೆ ಒಬ್ಬೊಬ್ಬರು ಉಮೇದು ವಾರರು ಬಂದು ಯಥೇಚ್ಛವಾಗಿ ತಮ್ಮ ತಮ್ಮ ಬಡಾಯಿ ಕೊಚ್ಚುಕೊಳ್ಳು ತ್ತಿದ್ದರು. ಆತ್ಮಶ್ಲಾಘನೆ ಮಾಡಿಕೊಳ್ಳುವುದರ ಜತೆಯಲ್ಲಿ ಪರೋಕ್ಷವಾಗಿ ಇತರ ಪ್ರತಿಸ್ಪರ್ಧಿಗಳ ಬಗ್ಗೆ ಅಪಪ್ರಚಾರವನ್ನೂ ನಡೆಸುತ್ತಿದ್ದರು. ವೈಯುಕ್ತಿನಿಂದೆ ಲೀಲಾಜಾಲವಾಗಿ ಸಾಗಿತ್ತು. ತನ್ನ ವಿದ್ಯಾರ್ಥಿ ಜೀವನದ ಗುರಿ-ಆಶೆ-ಆಕಾಂಕ್ಷೆಗಳು, ಅವುಗಳನ್ನು ಕಾರ್ಯರೂಪಕ್ಕೆ ತರಲು ತನಗಿರುವ ಕಳಕಳಿ ತಾನು ಚುನಾಯಿತನಾಗಿ ಬಂದರೆ ಯೂನಿಯನ್ನಿಗೆ ತಾನು ಸಲ್ಲಿಸಬೇಕೆಂದಿರುವ ಸೇವೆ, ಸಾಧಿಸಬೇಕೆಂದಿರುವ ಮಹತ್ಕಾರ್ಯಗಳು ಇವುಗಳನ್ನು ಬಗೆಬಗೆಯಾಗಿ ಬಣ್ಣಿಸಿ, ಕಡೆಯದಾಗಿ ನೆರೆದಿದ್ದ ವಿದ್ಯಾರ್ಥಿ ಸಮೂಹದಲ್ಲಿ ತನ್ನ ಪರವಾಗಿ ಓಟಿನ ಭಿಕ್ಷೆ ಬೇಡಿ, ತನ್ನ ಪ್ರಚಾರ ಭಾಷಣ ವನ್ನು ಉಪಸಂಹಾರ ಮಾಡುವುದು ಪ್ರತಿಯೊಬ್ಬ ಉಮೇದುವಾರನ ಕಾರ್ಯಕ್ರಮವಾಗಿ ಹೋಗಿತ್ತು. ಈ ಬಗೆಯ ಚರ್ವಿತ ಚರ್ವಣವಾದ ಭಾಷಣಗಳನ್ನು ಕೇಳಿ ಕೇಳಿ ವಿದ್ಯಾರ್ಥಿಗಳಿಗೆ ಸಾಕಾಗಿಹೋಗಿತ್ತು. 'ನನಗೆ ಓಟು ಕೊಡಿ-ನನಗೆ ಓಟು ಕೊಡಿ' ಎಂಬುದೇ ಪ್ರತಿಯೊಬ್ಬ ಉಮೇದುವಾರನ ಪಲ್ಲವಿಯಾಗಿತ್ತು.

ಹಠಾತ್ತನೆ ವಿದ್ಯಾರ್ಥಿಯೊಬ್ಬ ವೇದಿಕೆಯ ಮೇಲೆ ಬಂದು ನಿಂತ. ವ್ಯಕ್ತಿ ಅತಿ ಸಾಧಾರಣವಾದ ಉಡುಪನ್ನೇ ಧರಿಸಿದ್ದ. ಕೆದರಿದ ಕ್ರಾಪುತಲೆ. ತೀಕ್ಷ್ಣವಾದ ನೋಟವನ್ನು ಹೊರಸೂಸುತ್ತಿರುವ ಕಣ್ಣುಗಳು. ಕನ್ನಡಕ

ವನ್ನು ಹಾಕಿಕೊಂಡಿದ್ದ. ಮುಖದಲ್ಲಿ ಅದ್ಯಾವುದೋ ಉದ್ವೇಗ-ಅಶಾಂತಿ ಎದ್ದು ಕಾಣುತ್ತಿತ್ತು. ಮಿರಿಮಿರಿ ಮಿಂಚುತ್ತಿರುವ ಆತನ ಕಣ್ಣುಗಳಲ್ಲಿ ಆತ್ಮವಿಶ್ವಾಸದ ಕೆಚ್ಚು ತುಂಬಿತ್ತು. ತನ್ನೆರಡು ಕೈಗಳನ್ನೂ ಕೋಟಿನ ಜೇಬಿನಲ್ಲಿ ಇಳಿಬಿಟ್ಟಿದ್ದ. ಅವನು ವೇದಿಕೆಯ ಮೇಲೆ ಬಂದ ಕೂಡಲೇ ಸಭೆಯು ಗದ್ದಲ ನಿಂತುಹೋಯಿತು. "ಅದೋ ಕಮ್ಯೂನಿಸ್ಟ್ ಕೃಷ್ಣ ಮೂರ್ತಿ" ಎಂದು ನೆರೆದಿದ್ದ ವಿದ್ಯಾರ್ಥಿ ಸಮೂಹ ವೇದಿಕೆಯ ಮೇಲಿದ್ದ ವ್ಯಕ್ತಿಯನ್ನು ಗುರ್ತಿಸಿತು.

"ಕೃಷ್ಣಮೂರ್ತಿ ಬಂದಿದ್ದಾನೆ! ಎ ವೆರಿಗುಡ್ ಸ್ಪೀಕರ್!" ಎಂಬುದಾಗಿ ವಿದ್ಯಾರ್ಥಿಗಳಲ್ಲಿ ಗುಜುಗುಜುಯೆದ್ದಿತು. ಕೃಷ್ಣಮೂರ್ತಿ ಯನ್ನು ನೋಡಿದ ಕೂಡಲೇ ವಿದ್ಯಾರ್ಥಿಗಳ ನಾಡಿಗಳಲ್ಲಿ ರಕ್ತ ವೇಗವಾಗಿ ಚಲಿಸತೊಡಗಿತು. ನಿಜವಾಗಿಯೂ ಆತ ಅಂತಹ ವ್ಯಕ್ತಿ! ಸೀನಿಯರ್ ಬಿ. ಎ. ವಿದ್ಯಾರ್ಥಿಯಾಗಿದ್ದರೂ ಇಡೀ ಕಾಲೇಜಿನಲ್ಲೆಲ್ಲಾ ಅದ್ವಿತೀಯ ವಾಚಾಳಿಯೆಂದು ಪ್ರಸಿದ್ಧಿ ಪಡೆದಿದ್ದ. ಕಾಲೇಜಲ್ಲಿ ಅವನು ಭಾಗ ವಹಿಸದಿದ್ದ ಚರ್ಚಾಕೂಟಗಳಿಲ್ಲ. ಮಾಡದಿದ್ದ ಭಾಷಣಗಳಿಲ್ಲ.

ಅವನು ಡಿಬೇಟಿನಲ್ಲಿ ಭಾಗವಹಿಸುತ್ತಾನೆಂಬ ಸುದ್ದಿ ತಿಳಿದರೆ ಸಾಕು ಸಾವಿರಾರು ವಿದ್ಯಾರ್ಥಿಗಳು ಕಿಕ್ಕಿರಿದುಬಿಡುತ್ತಿದ್ದರು. ಕಾಲೇಜಿನ ಹುಡುಗರು ಮಾತ್ರವಲ್ಲದೆ ಹೈಸ್ಕೂಲಿನ ವಿದ್ಯಾರ್ಥಿಗಳೂ ಅವನ ಭಾಷಣ ಕೇಳಲು ಉತ್ಸುಕರಾಗಿ ಬರುತ್ತಿದ್ದರು.

ಅಲ್ಲಕಲ್ಲೋಲವಾಗಿದ್ದ ಸಭೆ ನಿಮಿಷ ಮಾತ್ರದಲ್ಲಿ ನಿಶ್ಯಬ್ದವಾಗಿ ಹೋಯಿತು. ಗಂಗಾ ಪ್ರವಾಹದಂತೆ ಕೃಷ್ಣಮೂರ್ತಿಯ ಭಾಷಣ ನಿರರ್ಗಳವಾಗಿ ಸಾಗಿತು.

"My dear Comrades, I have not come here just to deliver a stereotyped speech which you have heard enough. Nor have I come here to canvass for your vote! I shall finish off in a few words.

You know full well how congress has failed now a days to grapple with the situation. It has become very impor-tent as a political organisation. If you still believe in Congress, your cherished dream of "Purna Swaraj" will ever

remain as a dream! Friends, mark my words. Freedom is not a gift that a mighty Empire is going to bestow on us! On the other hand Freedom has to be won by us.

It has to be clasped from the most unwilling hands! Can congress do this, is my question! can Gandhiji's "Truth and Nonviolence" achieve this!!

My dear friends, don't be angry at me for having blamed your beloved leader and the congress. But the yoke of British Imperialism will not be shattered to pieces so easily as your beloved leaders seem to think!

You can ask me then where is the salvation for our country. I will say, yes! There is a salvation!! Our beloved Socialist leaders like Netaji Bose, M. N. Roy, and Jai Prakash Narain and others have indicated us the way in which we have to achieve our goal of Independence We have to revolutionise the present political, economic and social structure of our country!! Then only our dream of "Purna Swaraj" will be a reality!! This can be achieved by the Socialist Party alone. Hence, my friends, you have to give your support by all possible means to that party alone and strengthen it.

Don't be carried away by the propaganda speeches and slogans of your friends Use your discretion and exercise your valuable vote. Friends with this request I shall retire Mark my words carefully. If you do not vote for the socialist candidates you will certainly feel for it afterwards. Time will come when you have to regret your choice You can afford to forget Hitler or Mussolini!! But not communist Krishna Murthy!!"

"ನನ್ನ ಪ್ರಿಯ ಸೋದರರೇ. ನೀವು ಇದುವರೆಗೂ ಕೇಳಿದಂಥ ನೀರಸವಾದ ಭಾಷಣವನ್ನು ಮಾಡಲು ನಾನು ಬಂದಿಲ್ಲ. ಅಥವಾ ನಿಮ್ಮ ಓಟಿನ ಭಿಕ್ಷೆ ಬೇಡಲೂ ಬಂದಿಲ್ಲ. ನಾನು ಹೇಳಬೇಕೆಂದಿರುವುದನ್ನು ಸ್ವಲ್ಪದರಲ್ಲಿಯೇ ಮುಗಿಸಿಬಿಡುತ್ತೇನೆ. ಈಗ ಕಾಂಗ್ರೆಸ್ಸು ಯಾವ ರೀತಿ ಪರಾಜಯ ಹೊಂದಿತ್ತಿರುವುದೆಂಬುದನ್ನು ನೀವು ನೋಡಿತ್ತಿದ್ದೀರಿ. ದಿನ

ದಿನಕ್ಕೂ ರಾಜಕೀಯ ಸಂಸ್ಥೆಯಾದ ಕಾಂಗ್ರೆಸ್ಸು ಬಹಳ ದುರ್ಬಲ ವಾಗುತ್ತಿದೆ.ಶಕ್ತಿಗುಂದುತ್ತಿದೆ.

ನೀವು ಇನ್ನೂ ಕಾಂಗ್ರೆಸ್ಸಿನಲ್ಲಿ ನಂಬಿಕೆಯಿಡುವುದಾದರೆ, ನಿಮ್ಮ ಆದರ್ಶವಾದ ''ಪೂರ್ಣ ಸ್ವರಾಜ್ಯವು'' ಕೇವಲ ಕನಸಾಗಿಯೇ ಉಳಿಯು ವುದರಲ್ಲಿ ಸಂದೇಹವಿಲ್ಲ. 'ಸ್ವಾತಂತ್ರ್ಯವು' ಸಾಮ್ರಾಜ್ಯ ಶಾಹೀ ಸರ್ಕಾರ ತಾನಾಗಿಯೇ ಕೊಡತಕ್ಕ ಬಹುಮಾನವಲ್ಲ. ಸ್ವಾತಂತ್ರ್ಯ ಕಷ್ಟಪಟ್ಟು ಗಳಿಸಲ್ಪಡಬೇಕು. ಕಾಂಗ್ರೆಸ್ಸಿಗೆ ಇದನ್ನು ಸಾಧಿಸಲು ಸಾಮರ್ಥ್ಯವಿದೆಯೇ ಎಂದು ಕೇಳುತ್ತೇನೆ. ಗಾಂಧೀಜಿಯವರ ಆದರ್ಶಗಳಾದ ''ಸತ್ಯ ಮತ್ತು ಅಹಿಂಸೆ''ಗಳು ಪೂರ್ಣ ಸ್ವರಾಜ್ಯವನ್ನು ಗಳಿಸಿಕೊಡಬಲ್ಲವೆ? ಗೆಳೆಯರೇ, ಕಾಂಗ್ರೆಸ್ಸನ್ನೂ ನಿಮ್ಮ ಮೆಚ್ಚಿನ ನಾಯಕರನ್ನೂ ದೂಷಿಸಿದುದಕ್ಕಾಗಿ ದಯವಿಟ್ಟು ಕೋಪಿಸಿಕೊಳ್ಳಬೇಡಿ. ಸಾಮ್ರಾಜ್ಯಶಾಹೀ ಸರ್ಕಾರ ಅಷ್ಟು ಸುಲಭವಾಗಿ ನಮಗೆ ಸ್ವಾತಂತ್ರ್ಯವನ್ನು ಕೊಟ್ಟುಬಿಡುವುದಿಲ್ಲ.

ಹಾಗಾದರೆ ನಮ್ಮ ದೇಶಕ್ಕೆ ಮುಕ್ತಿ ಎಂದು ಎಂಬುದಾಗಿ ನೀವು ಕೇಳಬಹುದು. ಇದೆ. ನಮ್ಮ ದೇಶಕ್ಕೆ ಮುಕ್ತಿಯಿದೆಯೆಂದು ಘಂಟಾ ಘೋಷವಾಗಿ ಹೇಳಬಲ್ಲೆ. ನಮ್ಮ ನೆಚ್ಚಿನ ಸಮಾಜವಾದೀ ನಾಯಕರು ಗಳಾದ ನೇತಾಜಿ ಬೋಸ್, ಎಂ. ಎನ್. ರಾಯ್, ಮತ್ತು ಜೈಪ್ರಕಾಶ ನಾರಾಯಣ್ ಮುಂತಾದವರು ನಮಗೆ ಮಾರ್ಗದರ್ಶಿಗಳಾಗಿದ್ದಾರೆ. ನಾವು "ಪೂರ್ಣ ಸ್ವರಾಜ್ಯ"ವನ್ನು ಸಂಪಾದಿಸಬಲ್ಲ ಮಾರ್ಗವನ್ನು ತೋರಿಸಿ ಕೊಟ್ಟಿದ್ದಾರೆ

ನಾವು ನಮ್ಮ ಈಗಿನ ರಾಜಕೀಯ, ಆರ್ಥಿಕ, ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಸಂಪೂರ್ಣವಾಗಿ ಬದಲಾಯಿಸಬೇಕು. ಹಾಗೆ ಮಾಡಿದರೆ ನಮ್ಮ ಗುರಿಯಾದ "ಪೂರ್ಣ ಸ್ವರಾಜ್ಯ"ವು ನಮ್ಮ ಕರಗತವಾಗುವುದು. ಸಮಾಜವಾದೀಪಕ್ಷ ಮಾತ್ರ ಇದನ್ನು ಸಾಧಿಸಬಲ್ಲುದು. ಆದ್ದರಿಂದ ಗೆಳೆಯರೇ ನೀವು ನಿಮ್ಮ ಸಂಪೂರ್ಣ ಬೆಂಬಲ ಮತ್ತು ಸಹಕಾರಗಳನ್ನು ಆ ಪಕ್ಷಕ್ಕೆ ಮಾತ್ರ ಕೊಡಬೇಕು.

ನೀವು ನಿಮ್ಮ ಸ್ನೇಹಿತರ ಪ್ರಚಾರ ಭಾಷಣಗಳಿಗೂ, ಘೋಷಣೆಗಳಿಗೂ ಮಾರು ಹೋಗಬೇಡಿ. ನೀವು ನಿಮ್ಮ ಸ್ವಂತ ಬುದ್ಧಿಯನ್ನು ಉಪಯೋಗಿಸಿ ನಿಮ್ಮ ಬೆಲೆಯುಳ್ಳ ಮತವನ್ನು ಚಲಾಯಿಸಿ. ನಾನು ಹೇಳುವುದನ್ನು ಬಹಳ ಎಚ್ಚರಿಕೆಯಿಂದ ಕೇಳಿ. ನೀವು ಸಮಾಜವಾದೀ ಪಕ್ಷದ ಪ್ರತಿನಿಧಿಗಳಿಗೆ ಓಟು ಮಾಡದಿದ್ದರೆ, ಖಂಡಿತವಾಗಿಯೂ ಆ ಮೇಲೆ ಪೇಚಾಡಬೇಕಾಗುತ್ತದೆ. ನೀವು ಹಿಟ್ಲರ್ ಅಥವಾ ಮುಸ್ಸಲಿನೀಗಳನ್ನು ಬೇಕಾದರೂ ಮರೆಯಬಲ್ಲಿರಿ! ಆದರೆ ಸಮತಾವಾದೀ ಕೃಷ್ಣಮೂರ್ತಿಯನ್ನು ಮಾತ್ರ ಎಂದಿಗೂ ಮರೆಯಲಾರಿರಿ! ”...............

ಕೃಷ್ಣಮೂರ್ತಿ ಇಷ್ಟು ಹೇಳಿ ವೇದಿಕೆಯಿಂದಿಳಿದು ಹೋದ. ಅವನ ಭಾಷಣವನ್ನು ಕೇಳಿ ಉದ್ರಿಕ್ತರಾಗಿದ್ದ ಬಿಸಿರಕ್ತದ ವಿದ್ಯಾರ್ಥಿವೃಂದ ಕರತಾಡನಗಳ ಸುರಿಮಳೆಗರೆದರು. “ಎಂತಹ ಸ್ಪಿರಿಟೆಡ್ ಸ್ಪೀಚ್ ಮಾಡಿದನಯ್ಯಾ ಪುಣ್ಯಾತ್ಮಾ” ಎಂದೆಲ್ಲರೂ ಶ್ಲಾಘಿಸತೊಡಗಿರು.

ಹುಡುಗರೆಬ್ಬಿಸಿದ ಈ ದಾಂಧಲೆ ಮುಗಿಯಬೇಕಾದರೆ ಐದು ನಿಮಿಷ ಹಿಡಿಯಿತು. ಸ್ವಲ್ಪಹೊತ್ತಿನ ನಂತರ ಚಂದ್ರವದನೆ ವೇದಿಕೆಯ ಮೇಲೆ ಬಂದು ನಿಂತಳು. ಅವಳನ್ನು ನೋಡಿದ ಕೂಡಲೇ ಕೆಲವು ತಲೆಹೋಕರಾದ ವಿದ್ಯಾರ್ಥಿಗಳು “ಷೇಮ್! ಷೇಮ್!” ಎಂದು ಬೊಬ್ಬೆ ಹೊಡೆಯಲಾರಂಭಿಸಿದರು. ಮತ್ತೆ ಕೆಲವು ವಿದ್ಯಾರ್ಥಿಗಳು ತಡೆಬಡೆಯಿಲ್ಲದೆ ಚಪ್ಪಾಳೆ ಬಡಿಯತೊಡಗಿದರು. ಇನ್ನು ಕೆಲವು ವಿದ್ಯಾರ್ಥಿಗಳು ಕಾಗದದ ಚೆಂಡುಗಳನ್ನು (Paper balls) ವೇದಿಕೆಯ ಮೇಲೆಸೆಯ ತೊಡಗಿದರು. ಇಂತಹ ಭಂಡಾಟಗಳಿಗ್ಯಾವುದಕ್ಕೂ ಜಗ್ಗದಂತಹ ಚೈತನ್ಯವಿತ್ತು ಚಂದ್ರವದನೆಗೆ. ತಾವಷ್ಟು ದಾಂಧಲೆ ನಡೆಸಿದರೂ ಕಟ್ಟಕಡಲಡ ನಿಂತಿರುವ ವಿದ್ಯಾರ್ಥಿನಿಯ ಕೆಚ್ಚೆದೆಯನ್ನು ಕಂಡು ವಿದ್ಯಾರ್ಥಿವೃಂದ ವಿಸ್ಮಯಗೊಂಡಿತು. ತನ್ನ ವರ್ತನೆಯ ಬಗ್ಗೆ ತನಗೇ ಒಂದು ವಿಧವಾದ ಸಂಕೋಚವೆನಿಸಿತು. ಸ್ವಲ್ಪ ಹೊತ್ತಿಗೆಲ್ಲಾ ಗದ್ದಲ ನಿಂತು ಹೋಯಿತು.

ವೇದಿಕೆಯ ಮೇಲೆ ಬಂದು ನಿಂತಿದ್ದ ಚಂದ್ರವದನೆ ಗಂಭೀರವಾಗಿ ಆರಂಭಿಸಿದಳು. “ಗೆಳೆಯರೇ, ಕೇವಲ ಒಬ್ಬ ಹೆಣ್ಣುಮಗಳು ವೇದಿಕೆಯ ಮೇಲೆ ಬಂದು ನಿಂತಕೂಡಲೇ ಇಷ್ಟು ಕೋಲಾಹಲವಾಗಬೇಕೇ! ನಿಮ್ಮ

ಈ ವಿಚಿತ್ರವರ್ತನೆಗೆ ಕಾರಣವಾದರೂ ಏನು! ನೀವೆಲ್ಲರೂ ಕಾಲೇಜು ವಿದ್ಯಾರ್ಥಿಗಳು. ಮುಂದೆ ಪದವೀಧರರಾಗಿ ಸಮಾಜದ ಸತ್ಪ್ರಜೆಗಳೆನ್ನಿಸಿ ಕೊಳ್ಳತಕ್ಕವರು. ಜವಾಬ್ದಾರಿಯನ್ನರಿತವರೂ, ಸುಸಂಸ್ಕೃತರೂ ಎಂದೆನ್ನಿಸಿ ಕೊಂಡ ನೀವೇ ಹೀಗೆ ಅಸಭ್ಯ ರೀತಿಯಲ್ಲಿ ವರ್ತಿಸುತ್ತಿರುವುದು ನಿಜ ವಾಗಿಯೂ ಖಂಡನೀಯವಾದುದು. ನಿಮಗೂ ಮನೆಗಳಲ್ಲಿ ಅಕ್ಕತಂಗಿಯ ರಿರುವುದಿಲ್ಲವೆ! ನಿಮ್ಮ ಅಕ್ಕತಂಗಿಯರನ್ನು ಯಾರಾದರೂ ಹೀಗೆ ಅವಹೇಳನ ಮಾಡಿದಲ್ಲಿ, ಅಪಮಾನಗೊಳಿಸಿದಲ್ಲಿ, ನೋಡಿಕೊಂಡು ಸುಮ್ಮನಿದ್ದುಬಿಡುತ್ತೀರೇನು!! ಅದೇ ದೃಷ್ಟಿಯಲ್ಲಿ ಎಲ್ಲ ಹೆಂಗಸರನ್ನೂ ನೋಡಲು ನಿಮಗೆ ಸಾಧ್ಯವಿಲ್ಲವೇನು!!

ನಿಮ್ಮ ಜತೆಯಲ್ಲೇ ಕುಳಿತು ನಿಮ್ಮಂತೆಯೇ ವಿದ್ಯಾಭ್ಯಾಸ ನಡೆಸು ತ್ತಿರುವ ನಮ್ಮನ್ನೇಕೆ ನೀವಿಷ್ಟು ತುಚ್ಛವಾಗಿ ಕಾಣುತ್ತೀರಿ! ಹೆಂಗಸರಾಗಿ ಬಿಟ್ಟಮಾತ್ರಕ್ಕೆ ನಮಗೆ ಬುದ್ಧಿ ಹೃದಯಗಳಿಲ್ಲವೆ! ಶಿಕ್ಷಣ ಸಂಸ್ಕಾರ ಗಳಿಲ್ಲವೆ!! ನಿಮ್ಮ ಹಾಗೆಯೇ ಆಶೆ ಆಕಾಂಕ್ಷೆಗಳಿಲ್ಲವೆ!! "ನೀವು ಅಬಲೆಯರು. ನಿಮ್ಮ ಕೈಯಿಂದೇನಾದೀತು. ಸಾರ್ವಜನಿಕ ಕಾರ್ಯ ಕ್ಷೇತ್ರಗಳಲ್ಲಿ ನೀವು ದುಡಿಯಲಾರಿರಿ. ಎಲ್ಲಾ ನಮಗೆ ಕಟ್ಟಿಟ್ಟ ಮೀಸಲು" ಎಂಬುದು ನಿಮ್ಮಭಿಪ್ರಾಯವಾಗಿದ್ದರೆ ತಿಳಿಸಿಬಿಡಿ. ಅದರಂತೆಯೇ ನಾವು ಕಾಲೇಜಿನ ಯಾವ ಚಟುವಟಿಕೆಗಳಲ್ಲೂ ಭಾಗವಹಿಸುವುದಿಲ್ಲ. ಆದರೆ ಮಾತ್ರ ಧೈರ್ಯದಿಂದ, ಸೇವಾದೀಕ್ಷೆಯ ಮನೋಭಾವದಿಂದ ಮುನ್ನುಗ್ಗಿ ಬರುವ ವಿದ್ಯಾರ್ಥಿನಿಗಳ ಉತ್ಸಾಹಕ್ಕೆ ತಣ್ಣೀರೆರಚಬೇಡಿ.

ನಾವು ಹೆಂಗಸರಾದ ಮಾತ್ರಕ್ಕೇ ನಮಗೆ ಧಿಕ್ಕಾರ ಬೇಡ. ನಾವು ಯಾವುದಕ್ಕೂ ತರವಲ್ಲವೆಂಬ ಮೂಢಭಾವನೆಯನ್ನು ಬಿಟ್ಟುಬಿಡಿ. ನಿಮ್ಮೊಡಹುಟ್ಟಿದ ಅಕ್ಕತಂಗಿಯರನ್ನು ಕಾಣುವ ಸೋದರೀ ಪ್ರೇಮ ದಿಂದಲೇ ನಮ್ಮನ್ನೂ ನೋಡಿ. ಅವರಿಗೆ ಕೊಡತಕ್ಕ ಗೌರವ ಮರ್ಯಾದೆ ಗಳನ್ನು ನಮಗೂ ಸಲ್ಲಿಸಿ. ನನ್ನ ಪ್ರಾರ್ಥನೆಯಿಷ್ಟೆ. ನನಗೆ ನೀವು ಓಟು ಕೊಡಿ, ಬಿಡಿ; ನನಗದು ಮುಖ್ಯವಲ್ಲ. ನಾನು ಆರಿಸಿ ಬರದಿದ್ದಲ್ಲಿ ನನಗಾಗುವ ನಷ್ಟವೇನೂ ಇಲ್ಲ.

ಯೂನಿಯನ್ನಿನ ಕೆಲಸಕಾರ್ಯಗಳಲ್ಲಿ ನಮ್ಮೊಡನೆ ಕಲೆತು ಯಥಾ ಶಕ್ತಿ ದುಡಿಯಬೇಕೆಂಬ ಹುಚ್ಚು ಬಂತು. ಅಂತೆಯೇ ನಾನೊಬ್ಬ ಉಮೇ ದುವಾರಳಾಗಿ ನಿಂತೆ. ನನ್ನ ಸಹಪಾಠಿಗಳಾದ ಇತರ ವಿದ್ಯಾರ್ಥಿನಿಯರು ನನಗಾಗಲೇ ಎಚ್ಚರಿಕೆ ಕೊಟ್ಟರು. 'ನೀನು ನಿಲ್ಲಬೇಡಾ, ಬಹಳ ಅವಮಾನ ಪಡುವೆಯೆಂದು.' ಆದರೆ ನಾನವರ ಮಾತನ್ನು ಲಕ್ಷ್ಯ ಮಾಡಲಿಲ್ಲ. ಧೈರ್ಯವಾಗಿ ಚುನಾವಣೆಗೆ ನಿಂತೆ.

ತಮ್ಮ ವರ್ತನೆಯಿಂದ ನನಗೆ ವೈಯಕ್ತಿಕವಾಗಿ ಯಾವ ಅವಮಾನವೂ ಇಲ್ಲ. ಇಂದಿನಿಂದಾದರೂ ದೇವರು ನಿಮಗೆ ಸದ್ಬುದ್ಧಿಯನ್ನು ಕೊಡಲೆಂದು ಹಾರೈಸುತ್ತೇನೆ. ಸಹಪಾಠಿಗಳಾದ ಹೆಣ್ಣು ಮಕ್ಕಳನ್ನು ಗೌರವದಿಂದ ಕಾಣುವ ವಿವೇಕವನ್ನು ದಯಪಾಲಿಸಲೆಂದು ಭಗವಂತನಲ್ಲಿ ನನ್ನ ಪ್ರಾರ್ಥನೆ ಸಲ್ಲಿಸಿ ನಾನು ವಿರಮಿಸುತ್ತೇನೆ."

ಇಷ್ಟು ಹೇಳಿ ವೇದಿಕೆಯ ಮೇಲೆ ನಿಂತಿದ್ದ ಚಂದ್ರವನೆ ಬಿರಬಿರನೆ ಲೆಕ್ಚರ್ ಹಾಲಿನಿಂದ ಹೊರಟೇ ಹೋದಳು. ಸೂಜಿ ಕೆಳಗೆ ಬಿದ್ದರೆ ಕೇಳಿ ಸುವಷ್ಟು ನಿಶ್ಶಬ್ದವಾಗಿ ಹೋಗಿತ್ತು ಲೆಕ್ಚರ್ ಹಾಲು. ವಿದ್ಯಾರ್ಥಿ ಗಳೆಲ್ಲರೂ ತಮಗಾದ ತೇಜೋವಧೆಯಿಂದ ಮೂಕರಾಗಿ ಕುಳಿತು ಬಿಟ್ಟಿ ದ್ದರು. ನಡೆದುಹೋದ ಪ್ರಮಾದಕ್ಕಾಗಿ ಎಲ್ಲರ ಮುಖಗಳಲ್ಲೂ ವಿಷಾದ ವ್ಯಕ್ತಪಟ್ಟಿತ್ತು. ಪರಿಸ್ಥಿತಿಯ ಸದುಪಯೋಗಪಡಿಸಿಕೊಳ್ಳಲು ಶ್ರೀಧರನಾಗ ವೇದಿಕೆಯ ಮೇಲೆ ಬಂದು ನಿಂತ. ಗಂಭೀರವಾಗಿ ಹೇಳತೊಡಗಿದ

"ನನ್ನ ಪ್ರಿಯ ಸೋದರ ಸೋದರಿಯರೇ. ನನಗೆ ನಾಲ್ಕು ಮಾತ ನಾಡಲು ಅವಕಾಶ ಕೊಡಿ. ಈಗ ತಾನೇ ನಿಮ್ಮ ಕಣ್ಣೆದುರಿನಲ್ಲೇ ನಡೆದು ಹೋದ ಅಚಾತುರ್ಯಕ್ಕಾಗಿ ನಾನು ಬಹಳ ವಿಷಾದಿಸುತ್ತೇನೆ. ನಮ್ಮ ಹಲವು ಮಿತ್ರರ ಅವಿವೇಕದ ಫಲವಾಗಿ ನಾವೆಲ್ಲರೂ ತಲೆತಗ್ಗಿಸಬೇಕಾಗಿದೆ. ಇದು ನಮ್ಮ ದುರ್ದೈವವೇ ಸರಿ. ನಾನೀಗಾಗಲೇ ಅನೇಕ ಸಲ ಚರ್ಚಾ ಕೂಟಗಳಲ್ಲಿ ಭಾಷಣಗಳಲ್ಲಿ ಸಾರಿಸಾರಿ ಹೇಳಿದ್ದೇನೆ. ತಮಗೂ ಕೇಳಿ ಕೇಳಿ, ಬೇಸರ ಬಂದಿರಬಹುದು. ಆದರೆ ಪ್ರಯೋಜನವಾದರೂ ಏನು! ಅಂದು ಕೇಳಿದ ಮಾತು ಅಂದಿಗೇ ಹೋಯಿತು. ವಿಶ್ವವಿದ್ಯಾನಿಲಯ ಸಂಸ್ಕೃತಿಯ ಕೇಂದ್ರ. ಕಾಲೇಜುಗಳಲ್ಲಿ ಎರಡು ಮೂರು ವರ್ಷಗಳು ವಿದ್ಯಾ

ಭ್ಯಾಸ ನಡೆಸಿ, ನಿಯಮಿತ ಪಠ್ಯಪುಸ್ತಕಗಳನ್ನು ವ್ಯಾಸಂಗಮಾಡಿ, ನಮ್ಮ ನಮ್ಮ ಹೆಸರುಗಳ ಮುಂದೆ ನಾವು ಪಡೆದ ಪದವಿಗಳ ಒಂದೆರಡಕ್ಷರಗಳನ್ನು ಲಗತ್ತಿಸಿಕೊಂಡು ಬಿಟ್ಟರೆ ನಾವು ಕೃತಾರ್ಥರಾಗಿ ಹೋದೆವೆಂದು ನಮ್ಮೆಲ್ಲರ ಗ್ರಹಿಕೆಯಾಗಿದೆ. ಇದು ತಪ್ಪುಭಾವನೆಯೆಂದು ಘಂಟಾಘೋಷವಾಗಿ ಹೇಳಬಯಸುತ್ತೇನೆ. ನಮ್ಮ ಕರ್ತವ್ಯ ಅಷ್ಟಕ್ಕೇ ಮುಗಿದಂತಾಗಲಿಲ್ಲ. ನಮ್ಮ ಹೊಣೆಗಾರಿಕೆ ಇನ್ನೂ ದೊಡ್ಡದು. ನಾವು ಕಾಲೇಜಲ್ಲಿ ಕಲಿಯುವ ಈ ವಿದ್ಯೆಯಿಂದ ಯಾವ ಪುರುಷಾರ್ಥವೂ ಸಾಧಿಸಿದಂತಾಗಲಿಲ್ಲ. ವಿದ್ಯೆ ಯೆಂದರೆ ಕೇವಲ ಪಠ್ಯಪುಸ್ತಕಗಳನ್ನು ಉರುಹೊಡೆಯುವುದು ಮಾತ್ರವಲ್ಲ! ನಿಜವಾದ ವಿದ್ಯೆಯ ಅರ್ಥ ಸಂಸ್ಕೃತಿಯ ವಿಕಾಸ!

ದೇವರು ಪ್ರತಿಯೊಬ್ಬ ವ್ಯಕ್ತಿಗೂ ಯಾವ ವಿಧದಲ್ಲಾದರೂ ಯತ್ಕಿಂಚಿತ್ ಶಕ್ತಿಯನ್ನು ದಯಪಾಲಿಸಿರುತ್ತಾನೆ. ವ್ಯಕ್ತಿಯ ಸ್ವಭಾವ ಜನ್ಯವಾದ ಗುಣ ವಿಶೇಷಗಳನ್ನು ಪ್ರತಿಯೊಬ್ಬರೂ ತಮ್ಮ ಸಂತತವಾದ ಪರಿಶ್ರಮದಿಂದಲೂ, ಶಿಕ್ಷಣದಿಂದಲೂ, ಸಂಸ್ಕಾರಗೊಳಿಸುತ್ತಾ ಹೋಗ ಬೇಕು. ಈ ರೀತಿಯಾಗಿ ಬುದ್ಧಿ ಮತ್ತು ಹೃದಯ ವಿಕಾಸವು ಜತೆಜತೆ ಯಲ್ಲಿಯೇ ನಡೆಯಬೇಕು. ಬುದ್ಧಿ ಬೆಳೆದಂತೆಲ್ಲಾ ಹೃದಯವೂ ಬೆಳೆ ಯುತ್ತಾ ಹೋಗಬೇಕು. ಪ್ರತಿಯೊಬ್ಬ ವ್ಯಕ್ತಿಯ ಭಾವೀ ಜೀವನದ ರೂಪರೇಷೆಗಳೂ, ಆಶೆ-ಆಕಾಂಕ್ಷೆಗಳೂ, ನಡೆನುಡಿಗಳೂ, ನಮ್ಮ ವಿದ್ಯಾರ್ಥಿ ದೆಶೆಯಲ್ಲಿಯೇ ರೂಪುಗೊಳ್ಳಬೇಕು. ಇದೇ ನಿಜವಾದ ಶಿಕ್ಷಣದ-ವಿದ್ಯಾ ಭ್ಯಾಸದ ಅಂತರಾರ್ಥ!

ಹೃದಯ ವಿಶಾಲವಾದಂತೆಲ್ಲಾ ಜೀವನದ ಅನುಭವ ಹೆಚ್ಚಾಗ ತೊಡಗುತ್ತದೆ. ಜೀವನದ ಅನುಭವ ಹೆಚ್ಚಿದಂತೆಲ್ಲಾ ಮಾನವತೆಯ ಪೃಥಕ್‌ದರ್ಶನ ನಮಗೆ ಲಭಿಸುತ್ತದೆ. ಇದಾದ ಕೂಡಲೇ ನಮ್ಮ ಹೃದಯ ಸಾಗರದಷ್ಟು ವಿಸ್ತಾರವಾಗುತ್ತದೆ. ಎಲ್ಲವನ್ನೂ ಒಂದು ವಿಶಾಲ ದೃಷ್ಟಿಯಿಂದ, ಮಾನವತೆಯ ದೃಷ್ಟಿಕೋನದಿಂದ ನೋಡುವ ಪ್ರವೃತ್ತಿ ಯುಂಟಾಗುತ್ತದೆ. ಯಾವಾಗ ಈ ಬಗೆಯ ಹೃದಯ ವೈಶಾಲ್ಯತೆ ಯುಂಟಾಗುತ್ತದೆಯೋ ಆಗ ನಮ್ಮ ಮನಸ್ಸಿನ ಕಲ್ಮಷವಾದ ಸಂಕುಚಿತ ಸ್ವಾರ್ಥ ನಶಿಸಿಹೋಗುತ್ತದೆ.

ಪ್ರಿಯ ಗೆಳೆಯರೇ, ನಾನು ಹೇಳುತ್ತಿರುವುದೆಲ್ಲವೂ ನಿಮಗರ್ಥವಾಗ ದಿರಬಹುದು. ನಾನೊಬ್ಬ ಆದರ್ಶವಾದಿಯೆಂದೂ, ಗೊಡ್ಡು ವೇದಾಂತಿ ಯೆಂದೂ ನಿಮಗನ್ನಿಸಬಹುದು. ಆದರೂ ಚಿಂತೆಯಿಲ್ಲ. ನನ್ನಭಿಪ್ರಾಯ ಗಳು ನಿಮ್ಮ ಮೇಲೆ ಪರಿಣಾಮವುಂಟುಮಾಡಲೀ ಬಿಡಲೀ ನನಗದು ಮುಖ್ಯವಲ್ಲ. ಯಾರ ಅಂಜಿಕೆಯೂ ಇಲ್ಲದೆ ನನ್ನ ಕರ್ತವ್ಯವೆಂದು ಬಗೆದುದನ್ನು ನೆರವೇರಿಸಿದ್ದೇನೆಂಬ ಆತ್ಮತೃಪ್ತಿ ನನಗುಂಟಾದರೆ ನನಗೆ ಸಾಕು. ಈಗ ತಾನೇ ನಮ್ಮ ಪ್ರಿಯ ಸೋದರಿಯೊಬ್ಬರು ಹೇಳಿಹೋದಂತೆ ನಾವೆಲ್ಲರೂ ನಿಜವಾದ ಮಾನವರಂತೆ ವರ್ತಿಸುವುದನ್ನು ಮೊದಲು ಕಲಿತು ಕೊಳ್ಳೋಣ. ಈ ಪುಂಡಾಟ ಭಂಡಾಟಗಳೇನೂ ಉಪಯೋಗಕ್ಕೆ ಬಾರವು. ಇವೆಲ್ಲಾ ನಮ್ಮಂತಹ ಕಾಲೇಜು ವಿದ್ಯಾರ್ಥಿಗಳಿಗೆ ತಕ್ಕುದಲ್ಲ. ನಮ್ಮ ಸಹಪಾಠಿಗಳಾದ ವಿದ್ಯಾರ್ಥಿನಿಯರನ್ನು ಮರ್ಯಾದೆಯಿಂದ, ನಿಷ್ಕಲ್ಮಷ ಹೃದಯದಿಂದ ಕಾಣುವ ಹೃದಯ ವೈಶಾಲ್ಯತೆಯನ್ನು ಬೆಳೆಸಿ ಕೊಳ್ಳೋಣ. ಈ ಕೀಳುಸ್ವಾರ್ಥಕ್ಕೆ ಬಲಿಯಾಗಿ ನಮ್ಮ ಮಾನವತೆಗೇ ಸಂಚಕಾರ ತಂದುಕೊಳ್ಳುವುದು ಬೇಡ. ಇನ್ನು ಮೇಲೆ ಸುಸಂಸ್ಕೃತರಂತೆ ವರ್ತಿಸುತ್ತೇವೆಂದು ಇಂದೇ ಈಗಲೇ ಪ್ರತಿಜ್ಞೆಮಾಡೋಣ. ಇಷ್ಟು ನಿಷ್ಠುರ ವಾಗಿ ನಿಮ್ಮೊಂದಿಗೆ ಮಾತಾಡಬೇಕಾಗಿ ಬಂದುದಕ್ಕೆ ಬಹಳ ವಿಷಾದಿಸು ತ್ತೇನೆ. ಆದರೆ ಗತ್ಯಂತರವಿಲ್ಲ.

ಇನ್ನು ಚುನಾವಣೆಯ ಬಗ್ಗೆ ಒಂದೆರಡು ಮಾತು. ಇದುವರೆಗೂ ಮಾತಾಡಿ ಹೋದ ನನ್ನ ಮಿತ್ರರು ತಮ್ಮ ತಮ್ಮ ತುತೂರಿಗಳನ್ನು ತಾವೇ ಊದಿಕೊಂಡು ಹೋಗಿದ್ದಾರೆ!! (They have blown their own Trumpets !!) ಇದು ನನಗೆ ಬಹಳ ಖೇದವನ್ನುಂಟುಮಾಡಿದೆ. ಹೀಗೆ ಆತ್ಮ ಪ್ರಶಂಸೆ, ಪರನಿಂದೆಮಾಡಿಕೊಳ್ಳುವುದು ಸುಸಂಸ್ಕೃತರ ಲಕ್ಷಣವಲ್ಲ. ಅದಕ್ಕೇ ನಾನು ಹೇಳುತ್ತಿರುವುದು. ನಮ್ಮ ವಿದ್ಯಾರ್ಥಿ ಜೀವನದಲ್ಲಿ-ಎಲ್ಲಿಂದೆಲ್ಲಿಗೆ ಹೋಗಲಿ, ಯಾವ ಪ್ರಸ್ತಾಪ ಬರಲಿ 'ಸಂಸ್ಕೃತಿಯ ಅಭಾವ' ಎದ್ದು ಕಾಣುತ್ತಿದೆ. ಇದು ಯಾರೂ ತುಂಬಿಕೊಡಲಾರದಂಥ ದೊಡ್ಡ ನಷ್ಟ. ಇಂತಹ ನಷ್ಟವನ್ನು ಹೋಗಲಾಡಿಸತಕ್ಕವರು ನಾವು-ವಿದ್ಯಾರ್ಥಿಗಳಲ್ಲದೆ ಮತ್ತಾರೂ ಇಲ್ಲ.

ಮಿತ್ರರೇ, ನಾನಾಡಿದ ಮಾತುಗಳು ತಮಗದೆಷ್ಟೇ ಅಹಿತವಾಗಿರಲಿ, ಕಡೆತನಕ ಸಾವಧಾನವಾಗಿ ಕೂತು ಕೇಳಿದುದಕ್ಕಾಗಿ ನಾನು ತಮಗೆಲ್ಲರಿಗೂ ಚಿರಋಣಿಯಾಗಿದ್ದೇನೆ. ತಮಗೆಲ್ಲರಿಗೂ ನನ್ನ ಹೃತ್ಪೂರ್ವಕ ವಂದನೆಗಳನ್ನರ್ಪಿಸಿ ನಾನು ವಿರಮಿಸುತ್ತೇನೆ." ಶ್ರೀಧರ ಇಷ್ಟು ಹೇಳಿ ಕೆಳಗಿಳಿದು ಬಂದ. ವಿದ್ಯಾರ್ಥಿಗಳು ಅವನ ಭಾಷಣವಾದ ನಂತರ ಚಪ್ಪಾಳೆ ಬಡಿಯುಲಿಲ್ಲ. ಯಾವ ಸಂತೋಷಕ್ಕೆಂದು ಅವರು ಚಪ್ಪಾಳೆ ಹೊಡೆದಾರು! ಇದುವರೆಗಾಗಲೇ ಅವರ ಮುಖಕ್ಕೆ ಚೆನ್ನಾಗಿ ಮಂಗಳಾರತಿಯಾಗಿತ್ತು. ಪೆಚ್ಚು ಮೋರೆ ಹಾಕಿಕೊಂಡು ಎಲ್ಲರೂ ಎದ್ದು ಹೋದರು.

## ೧೭

ಮಧ್ಯಾಹ್ನ ನಾಲ್ಕು ಗಂಟೆಯಾಗಿತ್ತು. 'ಬೃಂದಾವನ'ದಲ್ಲಿ ಮಿತ್ರಗೋಷ್ಠಿ ನೆರೆದಿತ್ತು. ಯೂನಿಯನ್ನಿನ ಚುನಾವಣೆಗಳಲ್ಲಿ ಜಯಶೀಲರಾಗಿದ್ದ ವಿದ್ಯಾರ್ಥಿ ವಿದ್ಯಾರ್ಥಿನಿಯರ ಗೌರವಾರ್ಥವಾಗಿ ಸತ್ಕಾರಕೂಟವೊಂದು ಏರ್ಪಟ್ಟಿತ್ತು. ಆಹ್ವಾನಿತರೆಲ್ಲರೂ ಆಗಮಿಸಿದ್ದರು. ಚಂದ್ರವದನೆ ಅತಿಥಿಗಳೆಲ್ಲರಿಗೂ ರುಚಿಕರವಾದ ಉಪಹಾರವನ್ನಿತ್ತು ಸತ್ಕರಿಸಿದಳು. ಉಪಹಾರವಾದನಂತರ ಚಂದ್ರವದನೆ ಮತ್ತು ಗೆಳತಿಯರಿಂದ ಸಂಗೀತ ನಡೆಯಿತು. ಅದಾದನಂತರ ಹೊಸದಾಗಿ ಚುನಾಯಿತರಾಗಿ ಬಂದ ಸದಸ್ಯರನ್ನು ಅಭಿನಂದಿಸುವ ಭಾಷಣಗಳಾಗಬೇಕಿತ್ತು. ಶ್ರೀಧರನೇ ಆ ಕೆಲಸವನ್ನು ನಿರ್ವಹಿಸಬೇಕೆಂದು ಗೆಳೆಯರೆಲ್ಲರೂ ಅಭಿಪ್ರಾಯಪಟ್ಟರು. ಗೆಳೆಯರ ಒತ್ತಾಯಕ್ಕೊಳಪಟ್ಟ ಶ್ರೀಧರ ನಿರ್ವಾಹವಿಲ್ಲದೆ ಎದ್ದು ನಿಂತ. "ನನ್ನ ಮಾನ್ಯ ಸೋದರ ಸೋದರಿಯರೇ. ಮೊಟ್ಟಮೊದಲು ನಮ್ಮೆಲ್ಲರನ್ನೂ ಇಲ್ಲಿಗೆ ಆಹ್ವಾನಿಸಿ ನಮ್ಮನ್ನು ಆದರ ಪೂರ್ವಕವಾಗಿ ಸತ್ಕರಿಸಿ ಉಪಚಾರ ಮಾಡಿರುವ ಶ್ರೀಮತಿ ಚಂದ್ರವದನಾದೇವಿಗೆ ನಮ್ಮೆಲ್ಲರ ಹೃತ್ಪೂರ್ವಕವಾದ ವಂದನೆಗಳನ್ನು ಸಲ್ಲಿಸುವುದು ನನ್ನ ಕರ್ತವ್ಯವಾಗಿರುತ್ತದೆ. ಅವರು ಕಾಲೇಜಿನ ಪ್ರತಿಯೊಂದು ಕಾರ್ಯಭಾರದಲ್ಲೂ ಎಣೆಯಿಲ್ಲದ ಆಸಕ್ತಿ ತೋರಿಸುತ್ತಿದ್ದಾರೆ. ಕೇವಲ ಆಸಕ್ತಿ ತೋರಿಸುವುದು ಮಾತ್ರವಲ್ಲದೆ ಪ್ರತಿಯೊಂದು ಚಟುವಟಿಕೆಯಲ್ಲೂ ಭಾಗ ವಹಿಸಿ ನಮ್ಮ ಕಾರ್ಯಕಲಾಪಗಳನ್ನೆಲ್ಲ

ಯಶಸ್ವಿಗೊಳಿಸಲು ಬಹಳ ಸಹಕಾರಿಯಾಗಿದ್ದಾರೆ. ಇಂತಹ ಶ್ರದ್ಧಾಭಿಮಾನಿಗಳಾಗಿ ಮುನ್ನುಗ್ಗಿ ಬಂದು ಕೆಲಸ ಮಾಡುವ ಮಹಿಳಾ ಸಹಪಾಠಿಗಳು ಹೆಚ್ಚಬೇಕು ನಮ್ಮ ಸಹಪಾಠೀ ಸೋದರಿಯರಲ್ಲಿ ನನ್ನ ಸವಿನಯ ಬಿನ್ನಹವೊಂದಿದೆ. ನಿಮ್ಮೆಲ್ಲರ ಮೆಚ್ಚಿನ ಗೆಳತಿ ಶ್ರೀಮತಿ ಚಂದ್ರವದನಾ ದೇವಿಯ ಆದರ್ಶವನ್ನೇ ನೀವೆಲ್ಲರೂ ಅನುಸರಿಸಿ, ಕಾಲೇಜಿನ ಚಟುವಟಿಕೆಗಳಲ್ಲಿ ನಿಮ್ಮ ಸಹಕಾರ ಹಸ್ತವನ್ನು ನೀಡಬೇಕೆಂಬುದಾಗಿ ನಾನು ನಿಮ್ಮೆಲ್ಲರ ಪರವಾಗಿ ಪ್ರಾರ್ಥಿಸಿಕೊಳ್ಳುತ್ತೇನೆ.

ಪ್ರಸ್ತುತ ನನ್ನ ಕೆಲಸ ಅಭಿನಂದನಾ ಭಾಷಣವೆಂದಿದೆ. ನಾನು ಕೇಳುತ್ತೇನೆ, ನಾವು ನಾವೇ ಅಭಿನಂದಿಸಿಕೊಳ್ಳಬೇಕಾದ ಪ್ರಮೇಯವಾದರೂ ಇದೆಯೇ ಎಂದು! ಈ ಸಂದರ್ಭದಲ್ಲಿ ಮಹಾತ್ಮರಾದ ಬಸವಣ್ಣನವರ ವಚನವೊಂದು ನನಗೆ ನೆನಪಾಗುತ್ತದೆ. "ಕಳಬೇಡ ಕೊಲಬೇಡ ಹುಸಿಯನುಡಿಯಲುಬೇಡ। ಮುನಿಯಬೇಡ ಅನ್ಯರಿಗೆ ಅಸಹ್ಯಪಡಬೇಡ। ತನ್ನ ಬಣ್ಣಿಸಬೇಡ ಇದಿರ ಹಳಿಯಲುಬೇಡ। ಇದೇ ಅಂತರಂಗ ಶುದ್ಧಿ। ಇದೇ ಬಹಿರಂಗಶುದ್ಧಿ। ಇದೇ ನಮ್ಮ ಕೂಡಲ ಸಂಗನನೊಲಿಸುವ ಪರಿ॥" ಎಂದು ಆ ಮಹಾನುಭಾವರು ಹೇಳಿದ್ದಾರೆ!

ವ್ಯಕ್ತಿಯ ಶಕ್ತಿಸಾಮರ್ಥ್ಯಗಳು ಏನೇ ಇರಲಿ ಆತನ ಮೇಧಾಶಕ್ತಿ ಕ್ರತುಶಕ್ತಿಗಳು ಎಷ್ಟೇ ಇರಲಿ ಅದನ್ನು ನಾಚಿಕೆಯಿಲ್ಲದೆ ತಾನಾಗಿಯೇ ಸಾರಿಕೊಳ್ಳುವುದು ಖಂಡನೀಯವಾದುದು. ಅದು ಸುಸಂಸ್ಕೃತರ ಲಕ್ಷಣವಲ್ಲ. ಹಿಂದೊಮ್ಮೆ ನಾನು ಹೇಳಿದಂತೆ ನಮ್ಮ ನಮ್ಮ ತುತೂರಿಗಳನ್ನು ನಾವೇ ಊದಿಕೊಳ್ಳುವುದು ನಮಗೆ ಸರ್ವಥಾ ಯೋಗ್ಯವಲ್ಲ. ಅದೇ ಮಾತನ್ನೇ ಈ ಸಂದರ್ಭದಲ್ಲಿ ಒತ್ತಿ ಹೇಳಬಯಸುತ್ತೇನೆ. ನಮ್ಮ ಕರ್ತವ್ಯವನ್ನು ನಾವು ನಿಷ್ಪಂಚನೆಯಾಗಿ ನಿರ್ವಹಿಸ ಹೊರಟಿರುವುದು, ಯಾರೊಬ್ಬರ ಮೆಚ್ಚಿಕೆಗೆ ಪಾತ್ರವಾಗಬೇಕೆಂದಾಗಲೀ, ಹೊಗಳಿಕೆಯನ್ನು ಪಡೆಯಬೇಕೆಂದಾಗಲೀ ಅಲ್ಲ. ನಮ್ಮ ನಮ್ಮ ಕೆಲಸ ನಾವು ಮಾಡುವುದಕ್ಕಾಗಿ ನಮ್ಮನ್ನು ಯಾರೂ ಹೊಗಳಬೇಕಾಗಿಲ್ಲ. ಅಭಿನಂದಿಸಬೇಕಾಗಿಲ್ಲ. ನಮ್ಮ ದುಡಿಮೆಗೆ ನಮ್ಮ ಕರ್ತವ್ಯನಿರ್ವಹಣೆಯಿಂದ ದೊರೆಯುವ ಆತ್ಮಸಂತೃಪ್ತಿಯೇ

ಬಹುಮಾನ. ಅದೇನಮ್ಮ ಕಾರ್ಯಪ್ರಚೋದನೆಯ ಮುಖ್ಯ ಸಾಧನ. ಗೆಳೆಯರೇ, ನಾನಿಷ್ಟು ಹೇಳಿ ಮತ್ತೊಮ್ಮೆ ತಮ್ಮೆಲ್ಲರನ್ನೂ ವಂದಿಸಿ ಕೂಡುತ್ತೇನೆ." ಶ್ರೀಧರ ಸ್ವಸ್ಥಾನದಲ್ಲಿ ಕೂತ.

ಅನಂತರ ನೂತನ ಕಾರ್ಯದರ್ಶಿ ಅನಂತರಾಮೈಯ್ಯ ಎದ್ದುನಿಂತ. "ಮಾನ್ಯ ಗೆಳೆಯ ಗೆಳತಿಯರೇ, ಯೂನಿಯನ್ನಿನ ಹಲವು ಉಪಸಮಿತಿಗಳಿಗೆ ಚುನಾವಣೆಗಳಾಗಬೇಕಾಗಿವೆ. ಅದನ್ನು ಪ್ರತ್ಯೇಕವಾಗಿ ಇನ್ನೊಂದಾದರೂ ಇಟ್ಟುಕೊಳ್ಳೋಣವೆಂದಿದ್ದೆ. ಆದರೆ ನನ್ನ ಮಿತ್ರರು ಕೆಲವರು ಅದನ್ನೂ ಇಂದಿನ ಕಾರ್ಯಕ್ರಮದಲ್ಲಿ ಸೇರಿಸಿಬಿಡಬೇಕೆಂದು ಅಭಿಪ್ರಾಯಪಟ್ಟರು. ಅದರಂತೆ ಈ ಕಾರ್ಯಕ್ರಮವನ್ನು ನಿರ್ವಹಿಸಲು ತಮ್ಮೆಲ್ಲರ ಸಹಕಾರವನ್ನು ಕೋರುತ್ತೇನೆ. ಮೊದಲನೆಯದಾಗಿ ಯೂನಿಯನ್ ಪತ್ರಿಕೆಯ ಸಂಪಾದಕವರ್ಗದ ಚುನಾವಣೆಯಾಗಬೇಕಾಗಿದೆ. ಈ ಮಹನೀಯರು ಉಮೇದುವಾರರಾಗಿ ನಿಂತಿದ್ದಾರೆ: ಶ್ರೀಯುತರಾದ ಶ್ರೀಧರ, ಅನಂತರಾಮೈಯ್ಯ ಮತ್ತು ಕೃಷ್ಣಮೂರ್ತಿ. ಅಲ್ಲದೆ ನಮ್ಮ ಮಹಿಳಾ ಸಹಪಾಠಿಗಳ ಪೈಕಿ ಶ್ರೀಮತಿ ಚಂದ್ರವದನಾದೇವಿ. ತಾವೆಲ್ಲರೂ ತಮ್ಮ ಅಭಿಮತವನ್ನೀಯಬೇಕಾಗಿದೆ" ಎಂದ. ನೆರೆದಿದ್ದ ಸದಸ್ಯರೆಲ್ಲರೂ ಏಕಕಂಠದಿಂದ "ಆಗಬಹುದು" ಎಂದು ಕೂಗಿದರು. ಶ್ರೀಧರ ಕನ್ನಡ ವಿಭಾಗದ, ಕೃಷ್ಣಮೂರ್ತಿ ಇಂಗ್ಲಿಷ್ ವಿಭಾಗದ ಮತ್ತು ಚಂದ್ರವದನೆ ಮಹಿಳಾ ವಿಭಾಗದ ಸಂಪಾದಕರಾಗಿ ಕೆಲಸ ಮಾಡತಕ್ಕದ್ದೆಂದೂ ತೀರ್ಮಾನವಾಯಿತು. ಯೂನಿಯನ್ನಿನ 'ಸಾಹಿತ್ಯ ಸಮಿತಿ'ಗೂ (Literary Committee) ಮೇಲೆ ಹೇಳಿದ ಸದಸ್ಯರೇ ಆರಿಸಿಬಂದರು. ಸ್ಪೋರ್ಟ್ಸ್ ಸಬ್ ಕಮಿಟಿಗೆ ದೇವನಾಥ್, ವೆಂಕಟಾದ್ರಿ, ವಿಶ್ವೇಶ್ವರಯ್ಯ ಮತ್ತು ಹೆಗ್ಗಡೆಯೆಂಬ ಸದಸ್ಯರು ಚುನಾಯಿತರಾದರು. ಕಡೆಯದಾಗಿ ಉಳಿದವು 'ವಾದ್ಯಗೋಷ್ಠಿ ಹಾಗೂ ನಾಟಕ' ಸಮಿತಿಗಳು. ಇವುಗಳಿಗೆ ಶ್ರೀಧರ, ಅನಂತರಾಮೈಯ್ಯ, ಮೂರ್ತಿ, ರಂಗನಾಥರೂ, ಮಹಿಳೆಯರ ಪೈಕಿ ಚಂದ್ರವದನೆ, ಸುಮಿತ್ರೆ, ನಳಿನೀ ಮತ್ತು ಮಾಲತಿಯರು ಸದಸ್ಯರಾಗಿ ಆರಿಸಲ್ಪಟ್ಟರು.

ಯೂನಿಯನ್ನಿನ ಹಲವಾರು ಉಪಸಮಿತಿಗಳಿಗೆ ಚುನಾಯಿತರಾದ ವಿದ್ಯಾರ್ಥಿ ವಿದ್ಯಾರ್ಥಿನಿಯರ ಹೆಸರುಗಳನ್ನು ಅನಂತರಾಮೈಯ್ಯ ರಿಕಾರ್ಡ್

ಮಾಡಿಕೊಂಡ. ಕಡೆಯದಾಗಿ ಅವನೇ ಕಾರ್ಯದರ್ಶಿಯಾದ್ದರಿಂದ ಎಲ್ಲರಿಗೂ ವಂದನೆಗಳನ್ನು ಸಲ್ಲಿಸಿ ಕೂತುಕೊಂಡ. ಅಷ್ಟುಹೊತ್ತಿಗಾಗಲೇ ಆರುಗಂಟೆಯಾಗಿತ್ತು. ಎಲ್ಲರೂ ಎದ್ದುನಿಂತು ರಾಷ್ಟ್ರಗೀತೆ ಹಾಡಿದರು. ಅಂದಿನ ಸತ್ಕಾರ ಸಮಾರಂಭ ಮುಗಿಯಿತು.

"ನಾವಿನ್ನು ಬರುತ್ತೇವೆ. ಬಹಳ ಥ್ಯಾಂಕ್ಸ್. ಮಿಸ್ ಚಂದ್ರವದನಾ" ಎಂದು ಹೇಳಿ ಗೆಳೆಯರೆಲ್ಲರೂ ಬೃಂದಾವನದಿಂದ ಹೊರಬಿದ್ದರು. ಚಂದ್ರವದನೆಯ ಗೆಳತಿಯರಲ್ಲಿ ಕೆಲವರು ಮನೆಗಳಿಗೆ ಹೊರಟರು. ಮತ್ತೆ ಕೆಲವರು ಅವಳೊಂದಿಗೆ ಹರಟೆ ಕೊಚ್ಚುತ್ತಾ ಅಲ್ಲೇ ಉಳಿದರು.

## ೧೮

"ಏನು ಯೋಚಿಸ್ತಿದ್ದೀಯಾ ಶ್ರೀಧರಾ!"

"ಏನೂ ಇಲ್ಲಯ್ಯ."

"ಹಾಗಾದ್ರೆ ಏಕೆ ಮಾತಾಡೊಲ್ಲ. ಬಾಯಿಗೆ ಬೀಗ ಹಾಕಿಬಿಟ್ಟಿದ್ದೀಯಲ್ಲಾ."

"ಊರಿಂದ ನಾನು ಬರೆದ ಕಾಗದಕ್ಕೆ ಜವಾಬೇಕೆ ಬರಲಿಲ್ಲವೆಂದು ಯೋಚಿಸುತ್ತಿದ್ದೇನೆ."

"ನೀನು ಹಣಾ ಕಳಿಸಿದ್ದಕ್ಕೆ M. O. ರಶೀತಿ ಬಂತು ತಾನೇ?"

"ಅದು ಬಂತು ಕಣಯ್ಯ. ಆದರೆ ನಮ್ಮಮ್ಮನ ಜವಾಬನ್ನೆದುರು ನೋಡ್ತಿದ್ದೆ. ಯಾಕೋ ಕಾಣೆ. ಅಮ್ಮನೂ ಕಾಗದಾ ಬರೀಲಿಲ್ಲ."

"ನಿಮ್ಮಣ್ಣನಿಗೆ ನಿನ್ನಮೇಲಿನ ಕೋಪ ಇನ್ನೂ ಶಮನವಾಗಿಲ್ಲೆಂದು ಕಾಣುತ್ತೆ. ಆದ್ದರಿಂದ ನಿನ್ನೊಂದಿಗೆ ಯಾರೂ ಪತ್ರವ್ಯವಹಾರ ನಡೆಸಕೂಡದೆಂದು ಮನೆಯವರೆಲ್ಲರಿಗೂ ನಿಮ್ಮಣ್ಣ ಸುಗ್ರೀವಾಜ್ಞೆ ವಿಧಿಸಿರಬೇಕು!"

"ಏನೋಪ್ಪ ಯಾರಿಗ್ಗೊತ್ತು. ಕಣ್ಣುಮರೇಲಿ ನಡೆದಿರೋ ಸಮಾಚಾರ"

"ಏಕೋ ಬಹಳ ಬೇಜಾರಾಗಿದೆ. ಪಿಕ್ಚರ್‌ಗಾದ್ರೂ ಹೋಗೋಣ ಬಾರಯ್ಯ"

"ಯಾವ ಪಿಕ್ಚರ್ರೂ ಬೇಡಾ ನಡಿಯಯ್ಯ. ಬಹಳ ದಿನಗಳಾಗ್ಹೋಯ್ತು ನಾವಿಬ್ಬರೂ ವಾಕ್‌ಹೋಗಿ. ದಿನಾಗಲೂ ಕಾಲೇಜಲ್ಲೇ ಸರಿಹೋಗುತ್ತೆ. ಈವತ್ತು ಹಾಗೇ ಲಲಿತಮಹಲ್ಲಿಗೆ ಹೋಗಿಬರೋಣ ನಡಿ."

"ಬಹಳ ದೂರವಾಗತ್ತಯ್ಯ ಬೇಡ. ಈಗಾಗಲೇ ಆರೂವರೆ ಗಂಟೆ. ಇನ್ನು ಲಲಿತಮಹಲ್ ಸೇರೋಹೊತ್ತಿಗೆ ಎಂಟುಗಂಟೆಯಾಗಿಹೋಗತ್ತೆ. ಈವತ್ತು ಬೇಡ. ಇನ್ಯಾವತ್ತಾದರೂ ಹೋಗೋಣ."

"ಇಷ್ಟಕ್ಕೇ ಸುಸ್ತಾಗಿ ಹೋದೆಯೇನಯ್ಯಾ! ದಿನವೂ ಏನು ಮಹಾ ದೂರ ನೀನು ನಡೆದುಬಿಡೋದು. ಕಾಲೇಜೆದುರಿಗೇ ರೂಮು. ಕಾಲೇಜು ಬಿಟ್ಟರೆ ರೂಮು. ರೂಮು ಬಿಟ್ಟರೆ ಕಾಲೇಜು. ಇಷ್ಟರಲ್ಲೇ ಮುಗಿದುಹೋಯಿತು. ಒಂದು ದಿನವಾದ್ರೂ ವಾಕಿಂಗ್ ಹೋಗೋಣ ಬಾರಯ್ಯಾಂತ ನೀನು ಕರೆದದ್ದೇ ನೋಡಿಲ್ಲಪ್ಪ."

"ಸರಿ ನಡಿಯಯ್ಯ ಹೋಗ್ಗೋಣ. ಲಲಿತಮಹಲ್ಲಿಗಿಲ್ಲದಿದ್ರೆ ಲಲಿತಾದ್ರಿಗೆ ಹೋಗೋಣ ನಡಿ."

ರೂಮು ಬಾಗಿಲು ಹಾಕಿಕೊಂಡು ಗೆಳೆಯರಿಬ್ಬರೂ ಸಂಚಾರ ಹೊರಟರು. ಸ್ವಲ್ಪ ದೂರ ಇಬ್ಬರೂ ಮೌನವಾಗಿ ಕಾಲುಹಾಕಿದರು. ಅಂದಿನ ಸಂಜೆ ಬಹಳ ಮನೋಹರವಾಗಿತ್ತು. ನಿಷದ್‌ಬಾಗಿನಲ್ಲಿ ಅರಮನೆ ಆರ್ಕೆಸ್ಟ್ರ ನಡೆಯುತ್ತಿತ್ತು. ಸಾವಿರಾರು ಜನ ಪಾರ್ಕಿನಲ್ಲಿ ಕುಳಿತು ವಾದ್ಯ ಸಂಗೀತವನ್ನು ಕೇಳಿ ಸಂತೋಷಪಡುತ್ತಿದ್ದರು. ವಿದ್ಯಾರ್ಥಿಗಳು ತಂಡತಂಡವಾಗಿ ಹೊರಟಿದ್ದರು. ನವೀನ ದಂಪತಿಗಳು ಜತೆಜತೆಯಾಗಿ ಹೊರಟಿದ್ದರು. ಸಣ್ಣಪುಟ್ಟ ಮಕ್ಕಳು ಸರ್ಕಲ್‌ನಲ್ಲಿದ್ದ ಫೌಂಟನ್ನನ್ನು ಸುತ್ತುಗಟ್ಟಿ ಅದರಿಂದ ಚಿಮ್ಮುತ್ತಿದ್ದ ಬಣ್ಣಬಣ್ಣದ ನೀರನ್ನು ನೋಡಿ ಬೆರಗಾಗುತ್ತಿದ್ದರು.

"ನಿಷದ್‌ಬಾಗ್‌ನಲ್ಲೇ ಕೂತ್ಕೋಳ್ಳೊಣಯ್ಯ" ಅನಂತರಾಮೈಯ್ಯ ಸೂಚಿಸಿದ.

"ನಿಷದ್‌ಬಾಗ್‌ನಲ್ಲಿ ಕೂತ್ಕೊಳ್ಳೋದು ಇದ್ದೇ ಇದೆಯಯ್ಯ. ಲಲಿತಮಹಲ್‌ಗೆ ಹೋಗೋಣ ಈವತ್ತು" ಶ್ರೀಧರ ಮರುನುಡಿದ. ನಿರ್ವಾಹವಿಲ್ಲದೆ ಅನಂತರಾಮೈಯ್ಯ ಗೆಳೆಯನನ್ನು ಹಿಂಬಾಲಿಸಿದ. ಕಾರಂಜಿ ಕೆರೆ

ಹತ್ತಿರ ಹೋಗುತ್ತಿದ್ದಾಗ ಏನನ್ನೋ ಜ್ಞಾಪಿಸಿಕೊಂಡ ಅನಂತರಾಮೈಯ್ಯ ಮಾತು ತೆಗೆದ. "ಆವತ್ತು ಲೌಂಜಿನಲ್ಲಿ ಹೇಳಿದ್ದು ಜ್ಞಾಪಕವಿದೆಯೇ ಶ್ರೀಧರಾ."

"ಹಾಗೆಂದರೆ ನನಗರ್ಥವಾಗೋಲ್ಲಯ್ಯ. ಲೌಂಜಿನಲ್ಲಿ ಎಷ್ಟೋ ಮಾತಾಡ್ತೇವೆ. ಅದನ್ನೆಲ್ಲಾ ನೆನಪಿನಲ್ಲಿಟ್ಟುಕೊಳ್ಳಲು ಸಾಧ್ಯವೆ ?"

"ಮಧುರಾಮಣಿ ಐಯ್ಯರ್ ಸಂಗೀತಕ್ಕೆ ಹೋಗಿದ್ದೆವಲ್ಲಾ, ಆವತು ಹೇಳಿದ್ದು ಕಣಯ್ಯ."

"ಏನು ಹೇಳಿದ್ದೆ ಆವತ್ತು ?"

"ಅದೇ ನಿಮ್ಮ ಮನೇ ವಿಷಯ. ನಮ್ಮಣ್ಣ ನನ್ಮೇಲೆ ಕೋಪಿಸ್ಕೊಂಡಿದ್ದಾರೆ. ಊರಿಗೆ ಹೊರಟು ಬರೋವಾಗ ಅವರೊಡನೆ ಜಗಳ ಮಾಡ್ಕೊಂಡು ಬಂದೇಂತ ಹೇಳಿದ್ಯಲ್ಲಾ ಅದು..........."

"ಓಹೋ ಅದೇ...........ಸರಿಸರಿ..........." ಶ್ರೀಧರ ಏನನ್ನೋ ಜ್ಞಾಪಿಸಿಕೊಂಡು ತುಸು ನಕ್ಕ.

"ನಾನು ಹೇಳಿದ್ದು ಸರೀತಾನೇ ಶ್ರೀಧರಾ."

"ಸರಿಯೇ. ಆದರೆ ಈವತ್ತೇಕೆ ತೆಗೆದೆಯಯ್ಯಾ ಆ ಪ್ರಸ್ತಾಪ. ಅದಕ್ಕೆ ಈವತ್ತೇ ಮುಹೂರ್ತ ಹುಡುಕಿಟ್ಟುಕೊಂಡಿದ್ದೀಯೇನು ?"

"ಇಲ್ಲಿ ಕೇಳಯ್ಯ ಸ್ವಲ್ಪ. ನಾನು ಆ ಪ್ರಸ್ತಾಪವೆತ್ತಿದಾಗಲೆಲ್ಲಾ ಆಗಲಿ ಇನ್ನೊಂದಿನಾ ಹೇಳ್ತೀನೀಂತಲೇ ನೀನಿದುವರೆಗೂ ತಟಾಯಿಸ್ಕೊಂಡು ಬಂದಿದ್ದೀಯ. ಈವತ್ತು ಒಳ್ಳೇ ಚಾನ್ಸು ಸಿಕ್ಕಿದೆ ನನಗೆ ಹೇಗೂ ಲಾಂಗ್ ವಾಕ್ ಹೊರಟಿದ್ದೀವಿ. ಬೇಕಾದಷ್ಟು ಮಾತಾಡಬಹುದು."

"ಒಳ್ಳೇ ನಕ್ಷತ್ರಿಕನ ಹಾಗೆ ಗಂಟುಬಿದ್ದಿದ್ದೀಯಲ್ಲಯ್ಯಾ ನನಗೆ."

"ಹೌದಯ್ಯಾ ಒಪ್ತೇನೆ." ಗೆಳೆಯರಿಬ್ಬರೂ ಹೊಟ್ಟೆತುಂಬಾ ನಕ್ಕರು.

"ಸಬ್ ಡಿವಿಜನ್ ಸಾಹೇಬರು ಶೇಷಗಿರಿರಾಯರ ಹೆಸರು ಕೇಳಿದ್ದೀಯೇನಯ್ಯ ನೀನು. ಅವರು ನಮ್ಮೂರಿಗೆ ಬಂದು ಈಗ್ಯೈದಾರು ವರ್ಷಗಳಾದವು"

"ಯಾರು, ಮರಿಮಲ್ಲಪ್ಪ ಹೈಸ್ಕೂಲು ಹೆಡ್ಮಾಸ್ಟ್ರು ಗೋವಿಂದರಾಯರ ಸಂಬಂಧವೇ ?"

"ಹೌದ್ಹಾದು. ಶೇಷಗಿರಿರಾಯರೂ ಗೋವಿಂದರಾಯರೂ ಚಿಕ್ಕಪ್ಪ ದೊಡ್ಡಪ್ಪನವರ ಮಕ್ಕಳಂತೆ."

"ಸರಿ ಹಾಗಾದ್ರೆ. ನನಗ್ಗೊತ್ತಿರಲಿಲ್ಲ. ಏನವರ ಸಮಾಚಾರ?"

"ಹೇಳ್ತೀನಿ ಸ್ವಲ್ಪ ಸುಧಾರಿಸ್ಕೋ ಪುಣ್ಯಾತ್ಮಾ. ಅವರ ಎರಡನೇ ಮಗಳನ್ನ ನನಗೆ ತಂದುಕೊಳ್ಳಬೇಕೆಂದಿದ್ದರು ನಮ್ಮಣ್ಣ. ನಾನು ರಜದಲ್ಲಿ ಊರಿಗೆ ಹೋಗಿದ್ದಾಗ ಮದುವೇ ಪ್ರಸ್ತಾಪ ನಡೀತಿತ್ತು. ಶೇಷಗಿರಿ ರಾಯರೂ ಒಪ್ಪಿದ್ದರಂತೆ. ನಮ್ಮಿಬ್ಬರ ಜಾತಕಗಳನ್ನೂ ಜೋಯಿಸರಿಗೆ ತೋರಿಸಿದ್ದಾಯಿತಂತೆ. ಜಾತಕಗಳು ಕೂಡಿಬರುತ್ತವಂತೆ. ಆದರೆ ನಾನು ಮದುವೆಗೆ ಒಪ್ಪದೇ ಹೋದ್ದರಿಂದ ಸಂಧಾನ ಮುರಿದುಬಿತ್ತು."

"ಅದೇಕಯ್ಯಾ ಹಾಗೆ ಮಾಡಿಬಿಟ್ಟೆ! ಒಳ್ಳೇ ಸಂಬಂಧ. ಮಾವ ನವರೂ ದೊಡ್ಡ ಹುದ್ದೆಯಲ್ಲಿದ್ದಾರೆ. ವರದಕ್ಷಿಣೇ ತಗೊಳ್ಳೋದು ನಿನಗಿಷ್ಟ ವಿಲ್ಲದಿದ್ರೆ ನಿನ್ನ ಓದಿಗಾದರೂ ಸಹಾಯ ಮಾಡ್ತಿದ್ರು. ನಿನಗೆ ಶ್ರೀಮಂತರ ಮನೇ ಹೆಣ್ಣು ದೊರೆಯುತ್ತಿದ್ದಳಲ್ಲಾ."

"ಅದೆಲ್ಲಾ ಸರಿಯೇ ಅನಂತರಾಮೈಯ್ಯ. ನನಗೀ ಸಂಬಂಧ ಇಷ್ಟ ವಿಲ್ಲವಲ್ಲಾ, ಅದಕ್ಕೇನು ಹೇಳ್ತಿ."

"ಅದೇ ನನಗೆ ಕೋಪ ಬರೋದು ಶ್ರೀಧರಾ. ಕಾರಣವಿಲ್ಲದೇನೇ ಮುಗುಮ್ಮಾಗಿ 'ನನಗಿಷ್ಟವಿಲ್ಲಾನ್ನೋದು' ಈಗಿನ ಹುಡುಗರ ಫ್ಯಾಷನ್ನಾಂತ ಕಾಣುತ್ತೆ. ಎಲ್ಲಾ ವಿಷಯಗಳಿಗೂ ಅನುಕೂಲವಾಗಿರೋವಾಗ ನಿನಗೇ ನಯ್ಯಾ ಒಪ್ಕೊಳ್ಳೋಕೆ ಧಾಡಿ!"

"ನನ್ನಭಿಪ್ರಾಯ ಬೇರೇ ಅನಂತರಾಮೈಯ್ಯ."

"ಏನದು ಹೇಳಿದರೆ ತಾನೇ ಗೊತ್ತಾಗೋದು. ಹುಡುಗೀನ ನೀನು ಒಪ್ಪಲಿಲ್ಲವೇನಯ್ಯಾ?"

"ಹುಡುಗೀನ ಒಪ್ಪೋ ವಿಚಾರವಲ್ಲಾ ನಾನು ಹೇಳಿದ್ದು. ಹುಡುಗೀನ ನೋಡಿದ್ದೇನೆ. ಲಕ್ಷಣವಾಗೇ ಇದ್ದಾಳೆ. ಈ ವರ್ಷ S.S. L.C ಪರೀಕ್ಷೆಗೆ ಕಟ್ಟಿದ್ದಾಳೆ. ಜತೆಗೆ ಸಂಗೀತಾನೂ ಕಲೀತಿದ್ದಾಳೆ."

" ಇನ್ನಿದಕ್ಕಿಂತಲೂ ಕ್ವಾಲಿಫಿಕೇಷನ್ಸ್ ಬೇಕೇನಯ್ಯಾ ನಿನಗೆ?"

" ಕ್ವಾಲಿಫಿಕೇಷನ್ನೇನೋ ಸಾಕು. ಆದರೆ ನನಗೀಗಲೇ ಮದುವೆ ಯಾಗಲು ಇಷ್ಟವಿಲ್ಲ. ಸುಮ್ಮನೇ ನೂರೆಂಟು ಹೇಳಿ ಏನು ಪ್ರಯೋಜನಾ ಅನಂತರಾಮೈಯ್ಯ."

" ಯಾವತ್ತಿದರ್ದೂ ಮದುವೆಯಾಗಲೇಬೇಕಲ್ಲ. ಆಜನ್ಮ ಬ್ರಹ್ಮಚಾರಿ ಯಾಗಿರುತ್ತೇನೆಂದು ಭೀಷ್ಮ ಪ್ರತಿಜ್ಞೆಯನ್ನೇನಾದರೂ ಮಾಡಿದ್ದೀಯೇನು!"

" ಈಗ ಸದ್ಯಕ್ಕೆ ಭೀಷ್ಮ ಪ್ರತಿಜ್ಞೆಯನ್ನೇ ಮಾಡಿದ್ದೇನೆ."

" ಹಾಗಂದ್ರೆ ನನಗರ್ಥವಾಗಲಿಲ್ಲ."

" ಅಂದ್ರೆ ನನ್ನ ಕೋರ್ಸು ಮುಗಿಯೋ ತನಕ."

" ನಿನ್ನ ಕೋರ್ಸಿಗೂ ಮದುವೆಗೂ ಯಾವ ಸಂಬಂಧ? ಮದುವೆ ಯಾದ ಕೂಡ್ಲೇ ನಿನ್ನ ಹೆಂಡತಿಯೇನೂ ಮನೆಗೆ ಬಂದು ಬಿಡೋಲ್ಲವಲ್ಲ. ಸಂಸಾರ ತಾಪತ್ರಯಾ ಪ್ರಾರಂಭವಾಗಿ ಬಿಡುತ್ತೆ; ಅದರಲ್ಲಿ ನನ್ನ ವಿದ್ಯಾ ಭ್ಯಾಸಾ ನಡೆಯೋಲ್ಲಾಂತ ಹೇಳೋಕ್ಕೆ."

" ಸಂಬಂಧವಿದೆಯಯ್ಯಾ ಇದೆ. ಮದುವೆಯೊಂದು ಕಾಲ್ತೊಡಕು. ಅದರಲ್ಲೊಮ್ಮೆ ಸಿಕ್ಕಿಬಿದ್ದೆನೆಂದರೆ ಮುಗೀತು. ಪಾರಾಗುವ ದಾರಿಯೇ ಇಲ್ಲ. ನನ್ನ ಆಶೆ ಆಕಾಂಕ್ಷೆಗಳೊಂದೂ ಈಡೇರುವ ಹಾಗಿಲ್ಲ."

ನಿನ್ನ ಆಶೇ-ಆಕಾಂಕ್ಷೆಗಳೇನೆಂಬುದನ್ನು ಬಾಯಿಬಿಟ್ಟು ಹೇಳಿಬಿಡು. ತಿಳುಕೊಳ್ಳೋಣ."

"ನನ್ನ ಕೋರ್ಸು ಮುಗಿದ ಮೇಲೆ, ಸಾಧ್ಯವಾಗುವುದಾದರೆ ಅದಕ್ಕೂ ಮುಂಚೆಯೇ, "ವಯಸ್ಕರ ವಿದ್ಯಾಭ್ಯಾಸ" ಕಾರ್ಯವನ್ನು ಕೈಗೊಳ್ಳಬೇ ಕೆಂದಿದ್ದೇನೆ. ಹಳ್ಳಿಹಳ್ಳಿಗೂ ಹೋಗಿ ನಿರಕ್ಷರಕುಕ್ಷಿಗಳಾದ ನಮ್ಮ ದೇಶ ಬಾಂಧವರಿಗೆ ವಿದ್ಯಾದಾನ ಮಾಡಬೇಕೆಂದಿದ್ದೇನೆ. ಅದು ನನ್ನ ಬಹು ದಿನಗಳ ಹಂಬಲಾಗಿದೆ. ನನ್ನ ಧ್ಯೇಯಸಾಧನೆಗಾಗಿ ಸರಿಯಾದ ಸಮಯ ಕಾಯುತ್ತಿದ್ದೀನಿ ಅಷ್ಟೆ."

"ಇದ್ದಕ್ಕಿದ್ದ ಹಾಗೇ ನಿನಗೇಕೆ ಈ ಹುಚ್ಚು ಹಿಡೀತಯ್ಯಾ ! ಅದೆಲ್ಲಾ ಆ ಮೇಲೆ ಮಾಡುವಿಯಂತೆ ಪುಣ್ಯಾತ್ಮ. ಈಗ ಸದ್ಯ ನಿನ್ನ ದಾರಿ ನೀನು ನೋಡಿಕೋ. ಮೊದಲು ನಿನ್ನ ಕೋರ್ಸು ಮುಗೀಲಿ. ನಿನ್ನ ತಂದೆತಾಯಿ

ಗಳೆಲ್ಲಾ-ನಿನ್ನ ಮನೆಯವರೆಲ್ಲಾ-ನಿನ್ನನ್ನೇ ನಂಬಿಕೊಂಡಿದ್ದಾರೆ ಪಾಪ. ವಯಸ್ಕರ ವಿದ್ಯಾಭ್ಯಾಸ – ಸಮಾಜಸೇವೆ – ದೇಶೋದ್ಧಾರಾಂತ ಹೇಳಿಕೊಂಡು ನಿನ್ನ ತಲೇಮೇಲೆ ನೀನೇ ಕಲ್ಲುಹಾಕ್ಕೋಬೇಡ. ನಿನ್ನನ್ನೇ ನಂಬಿ ಕೂತಿರೋರನ್ನ ನಡುನೀರಿನಲ್ಲಿ ಕೈಬಿಡೋ ಪ್ರಯತ್ನ ಮಾಡಬೇಡ."

"ನಿನ್ನ ಬಾಯಲ್ಲೇ ಹೀಗೆ ಬರೋದು ನೋಡಿ ನನಗೆ ಬಹಳ ವಿಷಾದವೆನಿಸುತ್ತೆ ಅನಂತರಾಮಯ್ಯ."

"ನಾನು ಹೇಳಿದ್ರಲ್ಲೇನಾದರೂ ತಪ್ಪಿದೆಯೇನಯ್ಯಾ?"

"ತಪ್ಪು ಒಪ್ಪುಗಳ ಮಾತಲ್ಲಯ್ಯ ನಾನು ಹೇಳಿದ್ದು. ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳೆಂದೆನ್ನಿಸಿಕೊಂಡ ನಾವು ನಮ್ಮ ಕರ್ತವ್ಯವೇನೆಂಬುದನ್ನು ಮನಗಂಡಿದ್ದೇವೆಯೇಂತ ನನ್ನ ಪ್ರಶ್ನೆ."

"ನಿನ್ನಭಿಪ್ರಾಯ ತಿಳೀಲಿಲ್ಲ."

"ನಮ್ಮ ದೇಶದಲ್ಲಿ ಶೇಕಡಾ ಎಂಭತ್ತಕ್ಕಿಂತಲೂ ಹೆಚ್ಚು ಜನ ನಿರಕ್ಷರ ಕುಕ್ಷಿಗಳಾಗಿ–ಅಜ್ಞಾನ–ಅಂಧಶ್ರದ್ಧೆಗಳಲ್ಲಿ ತೊಳಲುತ್ತಿರುವಾಗ-ವಿದ್ಯಾವಂತರೆನ್ನಿಸಿಕೊಂಡ ನಾವು-ಅವರನ್ನು ನಿರ್ಲಕ್ಷಿಸಿರುವುದು ನ್ಯಾಯವೇನಯ್ಯಾ?"

"ಹಾಗಾದರೆ ಏನುಮಾಡಬೇಕಂತೀ."

"ಪ್ರತಿಯೊಬ್ಬ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಯೂ ಪ್ರತಿಜ್ಞೆ ಮಾಡಬೇಕು. ತಾನು ವಿದ್ಯಾರ್ಥಿಯಾಗಿರುವ ಅವಧಿಯಲ್ಲಿ ಕನಿಷ್ಠಪಕ್ಷ ಒಂದುನೂರು ಜನರನ್ನಾದರೂ ಅಕ್ಷರಸ್ಥರನ್ನಾಗಿ ಮಾಡುತ್ತೇನೆ. ಒಂದು ನೂರು ಮಂದಿಗಾದರೂ ವಿದ್ಯಾದಾನವನ್ನು ಮಾಡುತ್ತೇನೆ-ಎಂಬುದಾಗಿ. ಹೀಗೆ ಸಾವಿರಾರು ಜನ ವಿದ್ಯಾರ್ಥಿಗಳು ಕಂಕಣಬದ್ಧರಾಗಿ ಕಾರ್ಯೋನ್ಮುಖರಾದರೆಂದರೆ, ನಮ್ಮ ದೇಶದ ಅತಿಪ್ರಮುಖ ಜಾಡ್ಯವಾದ 'ಅಜ್ಞಾನ'ವೆಂಬುದು ಅದೆಷ್ಟೋ ಕಡಿಮೆಯಾದೀತು. ಲಕ್ಷಾಂತರ ಮಂದಿ ದೇಶಬಾಂಧವರು ವಿದ್ಯಾವಂತರಾಗುವರು. ಸಾವಿರಾರು ವರ್ಷಗಳಿಂದ ನಮ್ಮ ಹಳ್ಳಿಯ ಜನರ ಮನಸ್ಸಿನಲ್ಲಿ ಬೇರೂರಿಬಿಟ್ಟಿರುವ ಮೂಢನಂಬಿಕೆ, ಸಂಪ್ರದಾಯಶರಣತೆ, ಅಂಧಶ್ರದ್ಧೆ, ದ್ವೇಷಾಸೂಯೆಗಳು ಮುಂತಾದ ಹಲವಾರು ವಿಷಸರ್ಪಗಳು, ನಮ್ಮ ದೇಶಬಾಂಧವರನ್ನು ಕಚ್ಚಿ ತಿನ್ನುತ್ತಿವೆ. ಇವೆಲ್ಲಕ್ಕೂ ಅವರ ಅಜ್ಞಾನವೇ ಕಾರಣ. ಜ್ಞಾನದ ಬೆಳಕನ್ನು–ತಿಳಿವಿನ

ನಂದಾದೀಪವನ್ನು ಪ್ರತಿಯೊಂದು ಹಳ್ಳಿಯಲ್ಲಿಯೂ ಹಚ್ಚತಕ್ಕದ್ದು ವಿದ್ಯಾವಂತರೆಂದೆನ್ನಿಸಿಕೊಂಡ ನಮ್ಮಗಳ ಅವಶ್ಯ ಕರ್ತವ್ಯವಾಗಿದೆ. ಹಳ್ಳಿಗಳಲ್ಲಿ ವಿದ್ಯಾಪ್ರಚಾರ ನಡೆಸುವುದರಿಂದ, ನಮ್ಮ ದೇಶಬಾಂಧವರನ್ನು ಅಕ್ಷರಸ್ಥರನ್ನಾಗಿ ಮಾಡುವುದರಿಂದ' ಹಳ್ಳಿಯ ಜೀವನದಲ್ಲೇ ಒಂದು ಅದ್ಭುತ ಕ್ರಾಂತಿಯುಂಟಾಗುವುದೆಂದು ಹೇಳಬಲ್ಲೆ."

ಶ್ರೀಧರ ಆವೇಶದಿಂದ ಹೇಳುತ್ತಿದ್ದ. ಅನಂತರಾಮಯ್ಯ ಮೌನವಾಗಿ ಕಾಲು ಹಾಕುತ್ತಿದ್ದ. ಲಲಿತಮಹಲು ಸಿಕ್ಕಿತು. ಅಷ್ಟು ಹೊತ್ತಿಗೆ ಚೆನ್ನಾಗಿ ಕತ್ತಲಾಗಿಬಿಟ್ಟಿತ್ತು. ಚಾಮುಂಡೀ ಬೆಟ್ಟದ ಮೇಲೆ ಸಾಲು ದೀಪಗಳು ಉರಿಯುತ್ತಿದ್ದವು. ಇಡೀ ರಾಜಧಾನಿಯೇ ಲಕ್ಷ ದೀಪಗಳಿಂದ ರಾರಾಜಿಸತೊಡಗಿತು. ಲಲಿತಮಹಲಿನ ವಾತಾವರಣ ಅತ್ಯಂತ ಪ್ರಶಾಂತವಾಗಿತ್ತು. ತಂಬೆಲರು ಹಾಯಾಗಿ ಬೀಸಿಬರುತ್ತಿತ್ತು. ಲಲಿತಮಹಲಿನ ಮುಂದುಗಡೆಯಿರುವ ಉದ್ಯಾನದ ಹಾಸುಗಲ್ಲಿನ ಮೇಲೆ ಗೆಳೆಯರಿಬ್ಬರೂ ಮಂಡಿಸಿದರು.

"ಎಷ್ಟು ಹಿತವಾಗಿದೆಯಯ್ಯಾ ಮನಸ್ಸಿಗೆ" ಉಲ್ಲಸಿತನಾದ ಶ್ರೀಧರ ನುಡಿದ.

"ಹೌದು ಚೆನ್ನಾಗಿದೆ" ಎಂದಿಷ್ಟೆ ಹೇಳಿ ಸುಮ್ಮನಾದ ಅನಂತ ರಾಮೈಯ್ಯ.

"ಯಾಕಯ್ಯಾ ತೆಪ್ಪಗಿದ್ದೀಯ. ನನ್ನ ಲೆಕ್ಚರ್ ನಿನಗೆ ರುಚಿಸ ಲಿಲ್ಲವೇನು ?"

ರುಚಿಸಿತು ಕಣಯ್ಯ. ಆದರೆ ನೀನು ಹೇಳೋದೆಲ್ಲಾ ಸಾಧ್ಯವೇಂತ ಯೋಚಿಸ್ತಿದ್ದೆ."

"ಯಾಕೆ ಸಾಧ್ಯವಿಲ್ಲ ಹೇಳು. ಪ್ರಪಂಚದಲ್ಲಿ ಎಂತೆಂತಹ ಮಹ ತ್ಕಾರ್ಯಗಳನ್ನೆಲ್ಲಾ ಸಾಧಿಸಿಬಿಟ್ಟಿದ್ದಾರೆ ಮಹಾನುಭಾವರು! ಅವರು ಮಾಡಿದ ತ್ಯಾಗದಲ್ಲಿ-ಅವರು ನಡೆಸಿದ ಸಾಧನೆಯಲ್ಲಿ-ಸಾವಿರದಲ್ಲೊಂದು ಪಾಲಾಗುತ್ತೋ ಇಲ್ಲವೋ ನಾನು ಹೇಳಿದ್ದು".

"ನಿನಗೇನೋ ಈ ಹುಚ್ಚು ಹಿಡಿದಿರಬಹುದು. ಎಲ್ಲರಿಗೂ ಈ ಹುಚ್ಚು ಹಿಡೀಬೇಕಲ್ಲ."

“ಒಬ್ಬರಿಗೆ ಸಾಧ್ಯವಾದದ್ದು ಹತ್ತು ಜನಕ್ಕೂ ಸಾಧ್ಯವಾಗೋಲ್ಲವೇ ಅನಂತರಾಮಯ್ಯ. ಮುಖ್ಯ ಯಾವ ಕೆಲಸ ಮಾಡೋಕ್ಕೂ ಮನಸ್ಸೊಂದಿರ ಬೇಕು ನೋಡು. ‘ಮನಮುಳ್ಳೊಡುಂಟು ಮಾರ್ಗಂ’, ಮನಸ್ಸು ಮಾಡಿದರೆ ಯಾವುದೂ ಅಸಾಧ್ಯವಿಲ್ಲಪ್ಪ.”

“ಹಾಗಾದ್ರೆ ನೀನಾಗಲೇ ಸಮ್ಮರ್ ಪ್ರೋಗ್ರಾಂ ಹಾಕಿಬಿಟ್ಟಿದ್ದೀ ಯಾನ್ನು!”

ಓಹೋ, ಈ ವರ್ಷ ಬೇಸಿಗೇ ರಜದಲ್ಲಿ ನನ್ನ ‘ಲಿಟರೆಸೀ ಕ್ಯಾಂಪೈನ್’ ಷುರೂ ಮಾಡೇಬಿಡ್ತೀನಿ. ಇದಕ್ಕೆ ನಿನ್ನ ಸಹಕಾರವೂ ಇದೆಯೆಂದು ನಂಬಿದ್ದೇನೆ. ಏನು ಹೇಳ್ತೀಯ ಅನಂತರಾಮೈಯ್ಯ”.

“ಅಗತ್ಯವಾಗಿ ಆಗಬಹುದು. ಬಸವನ ಹಿಂದೆ ಬಾಲಾಂತ ನಿನ್ನ ಹಿಂದೆ ನಾನಿರದಿದ್ರೆ ಹೇಗೆ ಹೇಳು. ನೀನು ಕೈಹಾಕುವ ಚಳುವಳಿಗಳಿ ಗೆಲ್ಲಾ ನನ್ನ ಸಹಕಾರ-ಸಹಾನುಭೂತಿಗಳು ಇದ್ದೇ ಇವೆ,”

“ಭಲೇ ಅನಂತರಾಮೈಯ್ಯ. ಬಹಳ ಸಂತೋಷವಾಯಿತು ನಿನ್ನ ಮಾತು ಕೇಳಿ.”

ಗೆಳೆಯರಿಬ್ಬರೂ ಅದಾವುದೋ ವಿಚಿತ್ರವಾದ ಅನುಭವಕ್ಕೊಳ ಗಾಗಿದ್ದರು. ಅನಿರ್ವಚನೀಯವಾದ ಆನಂದದ ತೆರೆಗಳು ಇಬ್ಬರ ಹೃದಯ ಗಳಲ್ಲೂ ಉಕ್ಕಿಬರುತ್ತಿದ್ದವು.

“ಅನಂತರಾಮೈಯ್ಯ”, ಮೃದುವಾಗಿ ಗೆಳೆಯನ ಹೆಸರನ್ನುಚ್ಚರಿಸಿದ ಶ್ರೀಧರ.

“ಏನು ಶ್ರೀಧರಾ?”

“ನಮ್ಮಿಬ್ಬರಿಗೂ ದೇವರು ಎಂಥಾ ಗಂಟು ಹಾಕಿದ್ದಾನಯ್ಯಾ! ನೆನೆಸಿಕೊಂಡ್ರೆ ನಮಗೇ ಆಶ್ಚರ್ಯವಾಗುತ್ತೆ. ನಮ್ಮ ಸ್ನೇಹ ಹೇಗೆ ಆರಂಭ ವಾಯಿತೆಂಬುದೇ ಒಂದು ರಹಸ್ಯವಾಗಿದೆ.”

“ಇದೊಳ್ಳೇ ಚೆನ್ನಾಗಿ ಹೇಳಿದೆಯಯ್ಯಾ! ಋಷಿಮೂಲ, ನದೀ ಮೂಲ, ಇದೆಲ್ಲಾ ಕೇಳಬಾರ್ದೂಂತ ಹೇಳ್ತಾರೆ. ಹಾಗೇ ಸ್ನೇಹದ ಮೂಲವೂ ಒಂದು ಚಿದಂಬರ ರಹಸ್ಯ ಕಣಯ್ಯ! ಹೇಗೋ ಸ್ನೇಹ

ಹುಟ್ಟುತ್ತೆ, ಬೆಳೆದುಬಿಡುತ್ತೆ. ಅದರ ಮೂಲ ಕಟ್ಟಿಕೊಂಡು ನಮಗೇನಾಗ ಬೇಕಾಗಿದೆ ಹೇಳು".

"ನೀನ್ಯೇನೇ ಹೇಳು. ನಮ್ಮಿಬ್ಬರದೂ ಆದರ್ಶ ಸ್ನೇಹ ಅನಂತ ರಾಮೈಯ್ಯ. ನಮ್ಮಿಬ್ಬರಿಗಿರುವ ಈ ಸ್ನೇಹ ಎಲ್ರಿಗೂ ಸುಲಭವಾಗಿ ಬರೋಲ್ಲ. ಅದರ ಮಹತ್ವ ಎಷ್ಟು ಹೇಳಿದರೂ ಸ್ವಲ್ಪವೇ. ಈ ಸಮಯ ದಲ್ಲಿ ಶ್ರೀಮರ್ತಿ ವಿ. ಸೀಯವರು ಬರೆದಿರುವ ಕವಿತೆಯ ಸಾಲೊಂದು ನನಗೆ ನೆನಪಾಗತ್ತೆ." "ಸ್ವರ್ಗದೊಳಗೀ ಸ್ನೇಹ ದೊರೆವುದೇನು?

ಈ ಪರಿಯ ಸೌಹಾರ್ದ ಕೆಳೆಯುವೈಭವವು!"

ನಿಜ. ಕವಿ ಹಾಡಿರುವಂತೆ ಸ್ವರ್ಗದಲ್ಲೂ ಇಂತಹ ಸ್ನೇಹ ದೊರೆಯ ಲಾರದು. ನಿಜವಾಗಲೂ ನಮ್ಮಿಬ್ಬರಿಗಿರುವ ಸ್ನೇಹ ಯಾವ ರಾಜಾಧಿ ರಾಜರಿಗೂ ಇಲ್ಲದಂತಹ ವೈಭವ!!"

"ಸರಿಸರಿ, ನೀನೊಬ್ಬ ಹುಚ್ಚ! ಯಾವುದಾದರೂ ಹೊಗಳೋಕ್ಕೆ ಶುರೂ ಮಾಡಿಬಿಟ್ರೆ ತಗೊಂಡು ಹೋಗಿ ಅಂತರಿಕ್ಷದಲ್ಲಿ ಕೂಡಿಸಿಬಿಡ್ತೀಯ. ತೆಗಳೋಕ್ಕೆ ಶುರೂ ಮಾಡಿದ್ಯೋ ತಗೊಂಡು ಹೋಗಿ ಅಧಃ ಪಾತಾಳಕ್ಕೇ ನೂಕಿಬಿಡ್ತೀಯ. ನಿನ್ನಲ್ಲಿ ಯಾವುದೂ ಎಕ್ಸ್‌ಟ್ರೀಮ್ಮು....! "ಹೌದಯ್ಯ. ನನ್ನ ಸ್ವಭಾವವೇ ಸ್ವಲ್ಪ ಎಕ್ಸ್‌ಟ್ರೀಮ್ ಟೈಪೂಂತ ಒಪ್ಪಿಕೊಳ್ತೀನಲ್ಲಾ! "ಮ್ಯಾನ್ ಈಸ್ ಎ ಮಿಕ್ಸ್‌ಚರ್ ಆಫ್ ಆಪೋಸಿಟ್ಸ್" ಅಂತ ಅದಕ್ಕೇ ಹೇಳೋದು."

"ಏಳು ಸಾಕು. ಆಗಲೇ ಒಂಭತ್ತೂವರೆ ತೋರಿಸ್ತಾ ಇದೆ ಗಡಿಯಾರ".

ಗೆಳೆಯರಿಬ್ಬರೂ ಎದ್ದು ಮನೆಯ ದಾರಿ ಹಿಡಿದರು.

"ಆವತ್ತಿನ ಹಾಗೆ ಐಯ್ಯರ್ ಚಕ್ಕರ್ ಹಾಕಿಬಿಟ್ಟಿರ್ತಾನೋ ಏನೋ. ಮಧ್ಯಾಹ್ನ ಒಂದು ಮಾತು ಹೇಳೋದು ಮರತ್ಹೋಯ್ತು" ಶ್ರೀಧರನಂದ.

"ಹಾಕಿದ್ರೆ ಹಾಕ್ಲಿ ಬಿಡಯ್ಯ. ಸಾಯಂಕಾಲ ತಿಂದ ತಿಂಡಿ ಹಾಗೇ ಕೂತಿದೆ. ನನಗೆ ಹಸಿವೇ ಇಲ್ಲ." ಆನಂತರಾಮೈಯ್ಯ ನುಡಿದ.

"ಏನಯ್ಯಾ ಇಷ್ಟು ದೊಡ್ಡ ವಾಕ್ ಮಾಡಿದರೂ ಸಾಯಂಕಾಲದ ತಿಂಡಿ ಇನ್ನೂ ಜೀರ್ಣವಾಗಿಲ್ಲಾಂತೀಯಾ!"

"ನಿನಗೂ ನನಗೂ ವ್ಯತ್ಯಾಸವಿಲ್ಲವೇನಯ್ಯ. ನೀನೊಬ್ಬ ಫಿಸಿಕಲ್ ಕಲ್ಚರಿಸ್ಟು. ವೆಂಕಟಸುಬ್ಬಯ್ಯನವರ ತುಂಡು! ನೀನು ಕಲ್ಲು ತಿಂದರೂ ಅರಗಿಸಿಕೊಳ್ತೀಯ. ನನಗೆ ಹಾಗಲ್ಲ. ಮೊದಲಿನಿಂದಲೂ ಸ್ವಲ್ಪ ಸೂಕ್ಷ್ಮ ನನ್ನ ದೇಹಸ್ಥಿತಿ. ಅದ್ರಲ್ಲೂ ಈಗೆರಡು ವರ್ಷಗಳಿಂದ ಈ ಹೋಟಲೂಟ ಮಾಡೀ ಮಾಡೀ ನನ್ನ ಆರೋಗ್ಯವೆಲ್ಲಾ ಹಾಳಾಗಿ ಹೋಗಿದೆ. ರಾತ್ರಿ ಇಷ್ಟು ಹೊತ್ತಾದರೆ ಸಣ್ಣಗೆ ಹೊಟ್ಟೇ ನೋವು ಷುರುವಾಗುತ್ತೆ."

"ಹೀಗೇ ಇದ್ರೆ ಹೇಗೆ ಅನಂತರಾವ್ನೈಯ್ಯ. ಖಾಯಿಲೇನ ತಿರಸ್ಕಾರ ಮಾಡುವ ಹಾಗಿಲ್ಲ. ಡಾಕ್ಟರಿಗೆ ತೋರಿಸಿ ಸರಿಯಾದ ಔಷಧಿ ತಗೋಬೇಕಪ್ಪ."

"ಡಾಕ್ಟರಿಗೆ ತೋರಿಸ್ಬೇಕು—ತೋರಿಸ್ಬೇಕೂಂತಲೇ ಒಂದು ವರ್ಷದಿಂದ ತಳ್ಳಿಕೊಂಡು ಬಂದಿದ್ದೇನೆ. ನಾನೆಂತಹ ಮೊಂಡನಿರಬೇಕು ಹೇಳು. ಇನ್ನು ಸಾಧ್ಯವಿಲ್ಲ. ಬೇಗ ಏನಾದರೂ ಮಾಡಿ ಔಷಧೀ ತೊಗೋಬೇಕು."

ಅಷ್ಟು ಹೊತ್ತಿಗೆ ಅವರು ದೊಡ್ಡ ಗಡಿಯಾರವನ್ನು ಸಮೀಪಿಸಿದ್ದರು. ಅದರಲ್ಲಿ "ಠಣ್, ಠಣ್" ಎಂದು ಹತ್ತು ಬಾರಿಸಿತು. ಗೆಳೆಯರಿಬ್ಬರೂ ಬೇಗ ಬೇಗ ಹೆಜ್ಜೆ ಹಾಕತೊಡಗಿದರು.

## ೧೯

ಸಂಜೆ ಐದರ ಸಮಯ. ಶ್ರೀಧರ ಕನ್ನಡಿಯ ಮುಂದೆ ನಿಂತು ಕ್ರಾಪು ಬಾಚಿಕೊಳ್ಳುತ್ತಿದ್ದ. ಹಾಗೆಯೇ ಬೇಂದ್ರೆಯವರ 'ಕುಣಿಯೋಣ ಬಾರಾ' ಕವಿತೆಯನ್ನು ಗುಣುಗುಣಿಸುತ್ತಿದ್ದ.

"ತಾಳ್ಯಾಕ ತಂತ್ಯಾಕ ||
ರಾಗದ ಚಿಂತ್ಯಾಕ ||
ಹೆಜ್ಯಾಕ-ಗೆಜ್ಯಾಕ ಕುಣಿಯೋಣು ಬಾ ||
ಘಾಳೀನು ತೀಡ್ಯಾವು |
ನಮ್ಹಂಗೆ ಆಡ್ಯಾವು |
ಈ ಕುಣಿತ ಜೋಡ್ಯಾವು ಕುಣಿಯೋಣು ಬಾ ||
ಕೇಕಿ ಹಾಕಿತು ಕಾಕ |

ಇರಲಾರೆನೇಕಾಕಿ |

ಬಾ ಬಾರ ನನ್ನಾಕಿ-ಕುಣಿಯೋಣು ಬಾ ||"

"ಏನು ಕವಿರಾಜರೇ, ಬಹಳ ಖುಷಿಯಾಗಿದ್ದೀರಲ್ಲಾ ಈವತ್ತು! ಎಲ್ಲಿಗೋ ಹೊರಟಿರೋ ಹಾಗೆ ಕಾಣುತ್ತಲ್ಲಾ ಸವಾರಿ. 'ನಿಮ್ಮಾಕೀ'ನ ಹುಡುಕ್ಕೊಂಡು 'ಬೃಂದಾವನ'ದ ಕಡೆ ದಯಮಾಡಿಸ್ತೀರೋ" ಎನ್ನುತ್ತಾ ರೂಮು ಬಾಗಿಲು ತಳ್ಳಿಕೊಂಡೇ ಅನಂತರಾಮೈಯ್ಯ ನುಗ್ಗಿದ. ಶ್ರೀಧರನಿಗೆ ಮುಖ ಪೆಚ್ಚಾಗಿ ಹೋಯಿತು. ಕೊಠಡಿಯಲ್ಲಿ ತಾನೊಬ್ಬನೇ ಇದ್ದಿದ್ದರಿಂದ ಅವನು ಸ್ವೇಚ್ಛೆಯಾಗಿ ಹಾಡತೊಡಗಿದ್ದ. ಅನಂತರಾಮೈಯ್ಯ ಅಷ್ಟು ಬೇಗ ಬಂದುಬಿಡುತ್ತಾನೆಂದು ಅವನೆಣಿಸಿರಲಿಲ್ಲ. ಅನಂತರಾಮೈಯ್ಯ ಟೆನ್ನಿಸ್ ರಾಕೆಟ್ ಗೂಟಕ್ಕಿಟ್ಟು ಶ್ರೀಧರನ ಹತ್ತಿರ ಬಂದ.

"ಯಾಕಯ್ಯಾ ಬಂದುಬಿಟ್ಟೆ. ಯಾರೂ ಪಾರ್ಟನರ್ ಸಿಗಲಿಲ್ಲವೇ" ಅಂದ ಶ್ರೀಧರ.

ಸಿಕ್ಕರಯ್ಯ. ಆದರೆ ನಾನೇ ಬಂದುಬಿಟ್ಟೆ. ರಣಜಿತ್‌ನಲ್ಲಿ 'ಸ್ವಯಂ ಸಿದ್ಧ' ಬಂದಿದೆಯಂತೆ. ಶಾಂತಾಆಪ್ಟೇ ಆಕ್ಟ್ ಮಾಡಿದ್ದಾಳೆ. ಪಿಕ್ಚರ್ ಚೆನ್ನಾಗಿದೇಂತ ಹೇಳಿದರು ನಮ್ಮ ಸ್ನೇಹಿತರು. ಒಬ್ಬನೇ ಹೋಗೋಕ್ಕೆ ಬೇಜಾರು. ಹಾಗೇ ನಿನ್ನೂ ಎಳಕೊಂಡು ಹೋಗೋಣಂತಾ ಬಂದೆ. ಬಾರಯ್ಯ ನೋಡಿಕೊಂಡು ಬರೋಣ ಪಿಕ್ಚರ್ ಹೇಗಿದ್ಯೋ".

ನೀನು ಹೋಗಿಬಾ ಅನಂತರಾಮೈಯ್ಯ. ನಾನು ಸ್ವಲ್ಪ ಸುತ್ತಾಡಿ ಕೊಂಡು ಬರ್ತೀನೆ."

ನಾನೊಬ್ಬನೇ ಹೋಗೋಲ್ಲಯ್ಯ. ಹೋಗಲಿ ಪ್ರೋಗ್ರಾಂ ಕ್ಯಾನ್ಸಲ್ ಮಾಡಿ ಬಿಡ್ತೀನಿ. ನಾಳೆನಾಳಿದ್ರಲ್ಲಿ ಹೋದ್ರಾಯ್ತು. ಇಬ್ರೂ ವಾಕಿಂ ಗಾದ್ರೂ ಹೋಗೋಣಬಾ. ಯಾವ ಕಡೆ ಹೋಗಬೇಕೆಂದಿದ್ದೀಯ?"

"ಇನ್ನೂ ಯಾವ ಕಡೇಂತಲೇ ಯೋಚನೆ ಮಾಡಿಲ್ಲಯ್ಯ."

"ಈ ನಡುವೆ ಇನ್‌ಸ್ಟಿಟ್ಯೂಟಗೆ ಹೋಗೋದೇ ಬಿಟ್ಟು ಬಿಟ್ಟಿಯ ಲ್ಲಯ್ಯಾ. ನಿಮ್ಮ ಮೇಷ್ಟ್ರು ವೆಂಕಟಸುಬ್ಬಯ್ಯ ಮನ್ನೆ ಸಿಕ್ಕಿದ್ದರು. ಏಕೆ ನಿಮ್ಮ ಫ್ರೆಂಡು ಈನಡುವೆ ಇನ್‌ಸ್ಟಿಟ್ಯೂಟಗೆ ಬರ್‍ತಿಲ್ಲಾಂತ ನನ್ನ ಕೇಳಿದರು.

"ಅದಕ್ಕೆ ನೀನೇನೆಂದೆ ?"

"ಅನ್ನೋದೇನು. ಕಾಲೇಜಲ್ಲಿ ಅವನಿಗೆ ಬಹಳ ಕೆಲಸವಿರುತ್ತೆ. ಅವನಿಗೆ ಟೈಮೇ ಇರೋಲ್ಲಾ ಇನ್ಸ್ಟಿಟ್ಯೂಟಗೆ ಬರೋಕ್ಕೇಂತ ನಿನ್ನ ಪರವಾಗಿ ನಾನೇ ಹೇಳಿಬಿಟ್ಟೆ."

"ನೀನು ಹೇಳಿದ್ದು ಸರೀನ್ನು ಒಂದ್ವಿಧದಲ್ಲಿ. ನನಗಿನ್ನುಮೇಲೆ ವಿರಾಮ ದೊರೆಯುವ ಹಾಗೇ ಇಲ್ಲ. ಬೆಳಿಗ್ಗೆ ಟ್ಯೂಷನ್ನು, ಹತ್ತರಿಂದ ನಾಲ್ಕರವರೆಗೆ ಕಾಲೇಜು. ಆಮೇಲೆ ಯೂನಿಯನ್ನು. ಇಲ್ಲದಿದ್ರೆ ಏನಾದ್ರೂ ಲೆಕ್ಚರೋ ಡಿಬೆಟ್ಟೋ ಇರುತ್ತೆ. ಇದರ ಜತೆಗೆ ಆ ಮ್ಯಾಗ್‌ಸೈನ್ ಕೆಲಸ. ನಾನಾಗಿಯೇ ಮಾಡಿಕೊಂಡಿದ್ದು. ಅದಂತೂ ನನ್ನ ತಲೆಗೇ ಚಿಟ್ಟು ಹಿಡಿಸಿಬಿಟ್ಟದೆ."

"ಅದ್ಯೇಕಯ್ಯಾ ಹಾಗಂತೀ. ನೀನೇ ಕೋರಿ ಕೋರಿ ಸಂಪಾದಕ ನಾದೆಯಲ್ಲಯ್ಯಾ."

"ಸಂಪಾದಕನಾದ್ದೇನೋ ಸರಿ. ನನ್ನಾರ್ಟಿಕಲ್ ಪಬ್ಲಿಷ್‌ಮಾಡ್ಲಿಲ್ಲ ತನ್ನಾರ್ಟಿಕಲ್ ಪಬ್ಲಿಷ್ ಮಾಡ್ಲಿಲ್ಲಾಂತ ಎಲ್ಲರೂ ನನ್ನ ಮೇಲೆ ತಿರುಗಿ ಬಿದ್ದಿದ್ದಾರಯ್ಯ. ಎಲ್ಲರ ಆರ್ಟಿಕಲ್ಸೂ ಪಬ್ಲಿಷ್‌ಮಾಡೋಕ್ಕೆ ಎಲ್ಲಾಗುತ್ತೆ. ಯೂನಿಯನ್ ಪತ್ರಿಕೆಯಲ್ಲಿ ಕನ್ನಡಕ್ಕೆ ಕೊಟ್ಟರೋ ಜಾಗ ತೀರಾ ಸ್ವಲ್ಪ. ಇದ್ದದ್ರಲ್ಲಿ ಉತ್ತಮವಾದ ಲೇಖನಗಳನ್ನಾರಿಸಿ ಅಚ್ಚು ಹಾಕಿಸ್ತೀನಿ. ಇದರಿಂದ ಎಲ್ಲರ ನಿಷ್ಠೂರವನ್ನೂ ತಲೆಗೆ ಕಟ್ಟಿಕೊಂಡಿದ್ದೀನಿ. ಮೊನ್ನೆ ಯಾರೋ ಒಬ್ಬ ವಿದ್ಯಾರ್ಥಿ ನನ್ಹತ್ರ ಬಂದು "ನಿಮಗೆ ಹುಡುಗಿಯರಂದ್ರೆ ಬಹಳ ಇಷ್ಟವೆಂದು ಕಾಣುತ್ತೆ. ಅದಕ್ಕೇ ಈ ಸಲ ಲೇಡೀಸ್ ಆರ್ಟಿಕಲ್ಸೇ ಬಹಳ ಹಾಕಿದ್ದೀರಿ" ಅಂತ ಆಕ್ಷೇಪಣೆ ಮಾಡಿದ.

"ಲೇಖನ ಬರೆಯೋಕ್ಕೆ ಗಂಡಸರೂ ಹೆಂಗಸರೂಂತ ಭೇದವೇನೂ ಇಲ್ಲ. ಉತ್ತಮ ಲೇಖನ ಯಾರೇ ಬರೆಯಲಿ, ಅದನ್ನು ಪತ್ರಿಕೆಯಲ್ಲಿ ಅಚ್ಚುಹಾಕಿಸುವುದು ನನ್ನ ಕರ್ತವ್ಯ. ನೀವೂ ಲೇಖನ ಬರೆದುಕೊಡಿ. ಅದು ಯೋಗ್ಯವಾಗಿದ್ದಲ್ಲಿ ಪತ್ರಿಕೆಯಲ್ಲಿ ಪ್ರಕಟಿಸುತ್ತೇನೆ" ಎಂದು ಆ ವಿದ್ಯಾರ್ಥಿಗೆ ಹೇಳಿಕಳಿಸಿದೆ. ನೋಡಪ್ಪಾ ನನ್ನ ಧರ್ಮಸಂಕಟ ಹೀಗಿದೆ.

ಕನ್ನಡ ವಿಭಾಗಕ್ಕೆ ಏಕಪ್ಪಾ ಸಂಪಾದಕನಾದೇಂತ ಪೇಚಾಡ್ತಿದ್ದೇನೆ."

"ಪೇಚಾಡ್ಡೋದೇಕಯ್ಯ. ನಿನ್ನ ಕರ್ತವ್ಯ ನೀನು ಮಾಡು. ಬೇಕಾದ ವರು ಬೇಕಾದ್ದು ಅಂದುಕೊಳ್ಳಲಿ ಬಿಡು"

"ಅನಂತರಾಮೈಯ್ಯ."

"ಏನಯ್ಯ."

"ಹಾಗೇ ಸರಸ್ವತೀಪುರದಕಡೆ ವಾಕ್‌ಹೋಗಿ ಬರೋಣ, ಬರ್ತೀಯ."

"ಓಹೋ ನಾನಾಗಲೇ ಹೇಳ್ಲಿಲ್ವೇ! 'ಇರಲಾರೆನೇಕಾಕಿ| ಬಾ ಬಾರ ನಸ್ನಾಕೀಂತ' ನೀನು ಖುಷಿಯಾಗಿ ಹಾಡಿಕೊಳ್ಳುತ್ತಿದ್ದಾಗಲೇ ಗೊತ್ತಯ್ಯಾ ನನಗೆ! ನಿನ್ನ ಧ್ಯಾನವೆಲ್ಲಾ 'ಆ ನಿಸ್ನಾಕೆಯ' ಮೇಲೇ ಇದೇ ಅಲ್ವೇ!"

"ಸಾಕೈಯ್ಯ ನಿನ್ನ ಹಾಸ್ಯ. ನಿನಗೆ ಯಾವಾಗ ಹಾಸ್ಯ ಮಾಡ್ಬೇಕು-ಯಾವಾಗ ಮಾಡಕೂಡದು ಅನ್ನೋದೇ ಇಲ್ಲಾ. ನಾನೀಗ ಸೀರಿಯಸ್ಸಾಗಿ ಹೇಳ್ತಿದ್ದೇನೆ. ಬರ್ತೀಯೋ ಇಲ್ಲೋ ಅಷ್ಟು ಹೇಳು ನನಗೆ."

"ನಿನ್ನ 'ಬೃಂದಾವನ'ಕ್ಕೆ ಬಂದು, ನಿನ್ನ ಪ್ರೈವೆಸೀ ಮೇಲಿ ಇಂಟ್ರೂಡ್ ಮಾಡೋಕ್ಕೆ ನನಗಿಷ್ಟವಿಲ್ಲಯ್ಯ. ನಿನ್ನ ಪಾಡಿಗೆ ನೀನು ಹೋಗು. ನಾನು ಪಿಕ್ಚರ್‌ಗೆ ಹೊಗ್ತೀನಿ."

"ಹಾಗೇ ಮಾಡಯ್ಯ. ಪಿಕ್ಚರ್‌ಗೆ ಬರಲಿಲ್ಲಾಂತ ಏನೂ ತಿಳ್ಕೋ ಬೇಡ. ನೀನು ನೋಡಿಕೊಂಡು ಬಾ ಈವತ್ತು. ಪಿಕ್ಚರ್ ಚೆನ್ನಾಗಿದ್ರೆ ನಾಳೆ ಸೆಕೆಂಡ್ ಷೋಗೆ ಇಬ್ರೂ ಹೋಗಿ ಬರೋಣ. ಆಗಬಹುದು ತಾನೇ."

"ಅಗತ್ಯವಾಗಿ ಆಗಬಹುದು."

"ನಾನಿನ್ನು ಬರ್ತೀನಿ ಅನಂತರಾಮೈಯ್ಯ."

"ರೈಟ್........ಹೊರಡಯ್ಯ."

ಒಬ್ಬೊಬ್ಬರು ಒಂದೊಂದು ದಾರಿ ಹಿಡಿದರು. ಶ್ರೀಧರ ಸರಸ್ವತೀಪುರದ ಕಡೆ ಹೆಜ್ಜೆ ಹಾಕತೊಡಗಿದ. ಅನಂತರಾಮೈಯ್ಯ ರಣಜಿತ್ ಟಾಕೀಸಿನ ಕಡೆ ಧಾವಿಸಿದ.

## ೨೦

"ಸಾರ್........ಸಾರ್."

"ಯಾರದು........?"

"ನಾನು ಸಾರ್. ಪ್ರಸನ್ನ."

"ಓಹೋ ನೀನೋ........! ಏನು ಪ್ರಸನ್ನ ಈಗ ಬಂದೆ!"

ಶ್ರೀಧರ ಕೊಠಡಿಯ ಬಾಗಿಲು ತೆಗೆದು ಹೊರಗಿಣಿಕಿ ನೋಡಿದ. ಅವನು ಪಾಠ ಹೇಳಿಕೊಡುತ್ತಿದ್ದ ಪ್ರಸನ್ನ ಹೊರಗೆ ನಿಂತಿದ್ದ. ಅವನ ಜತೆಯಲ್ಲಿ ಯಾರೋ ಹೊಸಬರೊಬ್ಬರು ನಿಂತಿದ್ದರು. ಅವರನ್ನು ನೋಡಿ ಶ್ರೀಧರ "ಇವರು ಯಾರು ಪ್ರಸನ್ನ. ಏಕೆ ಬಂದಿದ್ದಾರೆ" ಎಂದು ಕೇಳಿದ.

"ಇವರು ಧಾರವಾಡದಿಂದ ಬಂದಿದ್ದಾರೆ ಸಾರ್. ನಮ್ಮ ಮನೆ ಹತ್ರಾ ಇರೋ ಪ್ಯಾರಡೈಸ್ ಲಾಡ್ಜ್‌ನಲ್ಲಿ ಇಳಕೊಂಡಿದ್ದಾರೆ. ಬೆಳಿಗ್ಗೆ ನಮ್ಮನೇಗೆ ಬಂದು 'ಮಹಾರಾಜಾ ಕಾಲೇಜಿನಲ್ಲಿ ಶ್ರೀಧರಮೂರ್ತಿ‌ೀಂತ ಒಬ್ಬ ಸ್ಟೂಡೆಂಟಿದ್ದಾರೆ, ಅವರಿರೋದೆಲ್ಲಿ ಗೊತ್ತೇನಯ್ಯಾ ನಿನಗೇಂತ ಕೇಳಿದರು. ನಾನದಕ್ಕೆ "ಗೊತ್ತು, ಅವರೇ ನನಗೆ ಪ್ರೈವೆಟ್ ಟ್ಯೂಷನ್ ಹೇಳಿಕೊಡೋದು. ನನ್ನ ಜತೇಲಿ ಬಂದ್ರೆ ಅವರಿರೋ ರೂಮು ತೋರಿಸ್ತೀನೀಂತ ಅವರಿಗೆ ಹೇಳಿದೆ. ಈಗ ನನ್ನ ಜತೇಲಿ ಕರಕೊಂಡು ಬಂದಿದ್ದೀನಿ ಸಾರ್" ಎಂದು ಪ್ರಸನ್ನ ಹೇಳಿದ. ಶ್ರೀಧರ ಆಗುಂತಕರ ಕಡೆ ಒಮ್ಮೆ ನೋಡಿದ. ಅವರು ಸಂಪೂರ್ಣ ಖಾದೀ ಧಾರಿಗಳಾಗಿದ್ದರು. ಕೈಯಲ್ಲೊಂದು ಚೀಲ ಹಿಡಿದಿದ್ದರು.

"ಓಹೋ ಸರಿ ಸರಿ........ನಮಸ್ಕಾರ ಬನ್ನೀ ಒಳಗೆ" ಎಂದು ಶ್ರೀಧರ ಅವರನ್ನು ಸ್ವಾಗತಿಸಿದ.

ಬಂದಿದ್ದ ವ್ಯಕ್ತಿ ಬಹಳ ಸಂಕೋಚದಿಂದ "ನಿಮಗೆ ತೊಂದರೆಯಾಯಿತಲ್ಲಾ" ಎನ್ನುತ್ತಾ ಕೊಠಡಿಯನ್ನು ಹೊಕ್ಕರು.

"ತೊಂದರೆಯೇನೂ ಇಲ್ಲ ಬನ್ನಿ" ಶ್ರೀಧರ ಮರುನುಡಿದ. ಅವರನ್ನು ಕುರ್ಚಿಯ ಮೇಲೆ ಕೂಡಿಸಿದ.

"ನಾನಿನ್ನು ಬರ್ತೀನೆ ಸಾರ್ ನಮಸ್ಕಾರ" ಎನ್ನುತ್ತಾ ಮನೆಯ ಕಡೆ ಓಟಕಿತ್ತ ಪ್ರಸನ್ನ. ಶ್ರೀಧರ ಬಂದಿದ್ದ ವ್ಯಕ್ತಿಯೊಡನೆ ಮಾತುಕತೆ ಷುರುಮಾಡಿದ.

“ನೀವಿಲ್ಲಿಗೆ ಬಂದು ಎಷ್ಟು ದಿನಗಳಾಯಿತು? ನನ್ನಿಂದೇನಾಗ ಬೇಕಾಗಿದೆ. ತಿಳಿಸಿದರೆ, ಕೈಲಾದ ಸಹಾಯ ಮಾಡ್ತೇನೆ.”

“ನಾನು ನಿಮ್ಮೂರಿಗೆ ಬಂದು ನಾಲ್ಕೈದು ದಿನಗಳಾಯಿತು ರಾಯರೇ. ನಿಮ್ಮ ವಿಳಾಸವನ್ನ ಪತ್ತೇಹಚ್ಚಿದೆ. ಯಾರೂ ಸರಿಯಾಗಿ ನೀವಿರೋಜಾಗಾ ತಿಳಿಸಲಿಲ್ಲ. ಈವತ್ತು ಬೆಳಿಗ್ಗೆ ಆ ಹುಡಗಾ ಹೇಳಿದ. ಅದರ ಮೇಲೆ ನಿಮ್ಮ ಭೇಟಿಮಾಡಿಕೊಂಡು ಹೋಗೋಣವೆಂದು ಬಂದೆ. ನಾನು ಧಾರವಾಡದಲ್ಲಿರೋ “ರಸಿಕರಂಜಿನೀ ಗ್ರಂಥಮಾಲೆ”ಯ ಪ್ರಕಾಶಕ ರಾಯರೇ. ನನ್ನ ಮಾಲೆಗೆ ಚಂದಾದಾರನ್ನ ಕೂಡಿಸುವ ಸಲುವಾಗಿ ಅಖಿಲ ಕರ್ಣಾಟಕದ ಪ್ರವಾಸ ಕೈಗೊಂಡಿದ್ದೇನೆ. ನಿಮ್ಮೂರಲ್ಲೂ ಕೆಲವು ಚಂದಾದಾರರನ್ನು ದೊರಕಿಸಿಕೊಳ್ಳಬೇಕೆಂಬ ಆಶೆಯಿಂದ ಬಂದಿದ್ದೇನೆ.”

“ಹಾಗೋ ಬಹಳ ಸಂತೋಷ. ನೀವೆಷ್ಟು ದಿನಾ ಇರ್ತೀರಿ ಇಲ್ಲಿ?”

ಬಂದ ಕೆಲಸವಾಗೋತನಕಾ ಇರಲೇಬೇಕಲ್ಲರಾಯರೇ. ಕಡೇಪಕ್ಷ ನಿಮ್ಮೂರಲ್ಲಿ ಒಂದುನೂರು ಚಂದಾದಾರರಾದ್ರೂ ದೊರಕಿದರೆ ನಾನಿಷ್ಟು ದೂರ ಬಂದದ್ದಕ್ಕೆ ಸಾರ್ಥಕವಾದೀತು.”

“ನೀವು ಬಹಳ ಆಪ್ಟಿಮಿಸ್ಟಿಕ್ಕಾಗಿ ಹೇಳ್ತಿದ್ದೀರಿ. ಒಂದುನೂರ ಜನ ಚಂದಾದಾರ್ರು ಸಿಕ್ತಾರೆಯೇ ಹೇಳಿ ನಮ್ಮೂರಲ್ಲಿ!”

“ಅದೇಕೆ ರಾಯರೇ ಹಾಗಂತೀರಿ. ಇಡೀ ಕರ್ಣಾಟಕಕ್ಕೆಲ್ಲಾ ರಾಜಧಾನಿಯಾಗಲಿದೆ ನಿಮ್ಮೂರು. ಎಷ್ಟೋಂದು ಜನ ವಿದ್ಯಾವಂತರೂ, ಸಾಹಿತ್ಯ ಪ್ರೇಮಿಗಳೂ ಇದ್ದಾರೆ ಇಲ್ಲಿ! ನೀವು ಹೇಳೋದು ನನಗಾಶ್ಚರ್ಯ ವಾಗುತ್ತೆ.”

“ಇರಲಿ ನೋಡೋಣ ಹೇಗಾಗುತ್ತೋ. ಅಂತೂ ಮೊದಲೇ ನಿಮಗೆ ಸೂಚನೆ ಕೊಟ್ಟೆ. ಪಾಪ ಬರ್ತಿದ್ದ ಹಾಗೆಯೇ ನಿಮಗೆ ನಿರಾಶೆಯುಂಟು ಮಾಡಲು ನನಗಿಷ್ಟವಿಲ್ಲದಿದ್ರೂ ಇರೋ ಸಂಗತಿ ನಿಮಗೆ ತಿಳಿಸಬೇಕಷ್ಟೆ.”

“ನೀವಂದದ್ದು ಖರೇ ರಾಯರೇ. ಇದರಲ್ಲಿ ನಿಮ್ಮ ಸಹಾಯ ಬಹಳ ಅಗತ್ಯವಿದೆ. ನೀವು ಭಾಷಾಭಿಮಾನಿಗಳೂ ತರುಣ ಸಾಹಿತಿಗಳೂ ಆಗಿದ್ದೀರಿ. ನಿಮ್ಮ ಲೇಖನ, ಕಥೆ, ಕವಿತೆಗಳನ್ನ ಪತ್ರಿಕೆಗಳಲ್ಲಿ ಓದಿದ್ದೇನೆ. ಪತ್ರಿಕೆಗಳ ಮೂಲಕ ನಿಮ್ಮ ಪರಿಚಯ ಈಗಾಗಲೇ ನನಗಿತ್ತು. ಈಗ

ನನ್ನ ಸುದೈವದಿಂದ ವ್ಯಕ್ತಿ ಪರಿಚಯವುಂಟಾದ್ದಕ್ಕೆ ಬಹಳ ಸಂತೋಷ ವಾಗಿದೆ ರಾಯರೆ.

ನಿಮ್ಮ ಕಾಲೇಜಿನ ವಿದ್ಯಾರ್ಥಿಗಳ ಮೇಲೂ, ಉಪಾಧ್ಯಾಯ ವೃಂದದ ಮೇಲೂ ನಿಮ್ಮ ಪ್ರಭಾವವನ್ನು ಬೀರಿದ್ದೀರಿ. ಹತ್ತು ಜನರಿಗೆ ಬೇಕಾದವರೆನ್ನಿಸಿಕೊಂಡಿದ್ದೀರಿ. ನೀವು ಸ್ವಲ್ಪ ನನ್ನ ಜತೇಲಿ ದಯ ಮಾಡಿಸಿ, ನಾಲೆಗೆ ಚಂದಾದಾರನ್ನ ಕೂಡಿಸಿಕೊಟ್ಟರೆ ಬಹಳ ಉಪಕಾರ ವಾಗುತ್ತೆ. ನಿಮಗೆ ತೊಂದರೆಕೊಡ್ತಿದ್ದೇನೆ. ದಯವಿಟ್ಟು ಕ್ಷಮಿಸಿರಾಯರೇ."

"ಇಷ್ಟು ಕೇಳಿಕೊಳ್ಳಬೇಕೇ ಸ್ವಾಮೀ ನೀವು. ಇದು ನನಗಿಷ್ಟವಾ ಗಿರೋ ಕೆಲಸವೇ. ಇಷ್ಟವೊಂದೇ ಅಲ್ಲ. ನನ್ನ ಅವಶ್ಯ ಕರ್ತವ್ಯವೆಂದೇ ಭಾವಿಸಿದ್ದೇನೆ. ಕನ್ನಡಿಗನಾಗಿದ್ದುಕೊಂಡು, ಕನ್ನಡ ತಾಯಿಯ ಹಾಲುಂಡು ಬೆಳೆದ ನನ್ನಿಂದ ನನ್ನ ತಾಯಿಗೆ ಇಷ್ಟು ಮಾತ್ರ ಸಹಾಯವಾಗದಿದ್ದರೆ ನನ್ನ ಜನ್ಮ ಏಕೆ! ಖಂಡಿತ ಬರ್ತೀನೆ. ನಾಳೆ ಬೆಳಿಗ್ಗೆ ನನ್ನ ಕೆಲಸ ವೇನಿದ್ರೂ ಒತ್ತಟ್ಟಿಗಿಟ್ಟು ನಿಮ್ಮ ಜತೇಲಿ ಬರ್ತೀನೆ. ಬನ್ನಿ ಮನೆಮನೆಗೂ ತಿರುಗೋಣ. ನನಗೆ ಪರಿಚಯವಿರುವ ಮನೆಗಳಿಗೆಲ್ಲಾ ಕರಕೊಂಡು ಹೋಗ್ತೀನಿ. ನಮ್ಮ ಕಾಲೇಜು ವಿದ್ಯಾರ್ಥಿಗಳಿಗೂ ಹೇಳ್ತೀನಿ. ನನ್ನ ಕೈಲಾದ ಸಹಾಯ ನೀಡಲು ಸಿದ್ಧನಾಗಿದ್ದೀನಿ."

"ಬಹಳ ಸಂತೋಷ ರಾಯರೇ. ನಿಮಗೆ ಆಭಾರಿಯಾಗಿರುವೆ. ನಾಳೆ ಬೆಳಗ್ಗೆ ಎಷ್ಟೊತ್ತಿಗೆ ಬರಲಿ?"

ಈಗಾಗಲೇ ಒಂಭತ್ತು ಗಂಟೆಯಾಯಿತಲ್ಲಾ. ಇನ್ನೆಲ್ಲಿಗೆ ಹೋಗ್ತೀರಿ. ನಮ್ಮ ಹೋಟಲಲ್ಲೇ ಊಟಮಾಡಿ ರೂಮಿನಲ್ಲಿ ಮಲಕ್ಕೊಳ್ಳಿ. ಇನ್ನಷ್ಟು ದೂರ ಏಕೆ ನಡಕೊಂಡು ಹೋಗ್ತೀರಿ."

"ಹಾಸಿಗೇ ಟ್ರಂಕೂ ಎಲ್ಲಾ ಹೋಟಲಲ್ಲೇ ಇದೆ ರಾಯರೇ."

"ಇರಲಿ ಚಿಂತೆಯಿಲ್ಲ. ರೂಮಿಗೆ ಬೀಗ ಹಾಕಿ ಬಂದಿದ್ದೀರೀ ತಾನೇ?"

"ಬೀಗವೇನೋ ಹಾಕಿದ್ದೇನೆ. ನಿಮಗೆ ತ್ರಾಸಾಗುತ್ತಲ್ಲಾ"

"ತ್ರಾಸವೂ ಇಲ್ಲ ಏನೂ ಇಲ್ಲ. ಬನ್ನೀ ನಾವೆಲ್ಲಾ ಒಂದು ತಾಯ ಮಕ್ಕಳು ತಾನೇ. ಧಾರವಾಡದವರಾಗಲೀ, ಮಂಗಳೂರಿನವರಾಗಲೀ,

ಮೈಸೂರಿನವರಾಗಲೀ ಎಲ್ಲರೂ 'ಕನ್ನಡ ಕುಲ'ಕ್ಕೆ ಸೇರಿದವರು ತಾನೇ."

"ಅಷ್ಟಲ್ಲದೇನು ರಾಯರೇ"

"ನಿಮ್ಮ ಹೆಸರೇ ಹೇಳಲಿಲ್ಲವಲ್ಲಾ !"

"ವೆಂಕಟೇಶ ನಾಡಕರ್ಣೀಂತ."

"ಬಹಳ ಸಂತೋಷ."

ಅಷ್ಟು ಹೊತ್ತಿಗೆ ವಾಕಿಂಗ್ ಹೋಗಿದ್ದ ಅನಂತರಾಮೈಯ್ಯ ಬಂದ. ಕೊಠಡಿಯಲ್ಲಿದ್ದ ಆಗುಂತಕರನ್ನು ನೋಡಿ ಅವನಿಗಾಶ್ಚರ್ಯವಾಯಿತು. ಯಾರೋ ಶ್ರೀಧರನ ಬಳಗನಿರಬಹುದೆಂದುಕೊಂಡು ಸುಮ್ಮನಾದ. ಶ್ರೀಧರ ಇಬ್ಬರಿಗೂ ಪರಸ್ಪರ ಪರಿಚಯ ಮಾಡಿಕೊಟ್ಟ.

"ಹೊತ್ತಾಗಲಿಲ್ವೇ ಊಟಕ್ಕೆ. ಏಳು ಶ್ರೀಧರಾ ಹೋಗೋಣ" ಎಂದ ಅನಂತರಾಮೈಯ್ಯ. "ಇನ್ನೇನು ಹೊರಡೋದೇ" ಎನ್ನುತ್ತಾ ಶ್ರೀಧರ ಎದ್ದ. ಧಾರವಾಡದ ಅತಿಥಿಗೊಂದು ಟವಲ್ಲುಕೊಟ್ಟು ತಾನೊಂದು ಟವಲ್ಲು ಭುಜದ ಮೇಲೆ ಹಾಕಿಕೊಂಡು ಶ್ರೀಧರ ಹೊರಡಲು ಸಿದ್ಧನಾದ. ಮೂವರೂ ಅನ್ನಪೂರ್ಣೇಶ್ವರೀ ಲಾಡ್ಜಿನ ದಾರಿ ಹಿಡಿದರು.

* * * *

ಮರುದಿನ ಬೆಳಿಗ್ಗೆ ಏಳು ಗಂಟೆಗೆಲ್ಲಾ ತಿಂಡೀ ಕಾಫೀ ಮುಗಿಸಿಕೊಂಡು ಶ್ರೀಧರನೂ ನಾಡಕರ್ಣಿಯೂ ಹೊರಟು ಬಿಟ್ಟರು. ಮೊದಲು ಶ್ರೀಧರ ಕೆಲವು ಉಪಾಧ್ಯಾಯರ ಮನೆಗಳಿಗೆ ಹೋದ. ಶ್ರೀಧರನ ಬಲವಂತಕ್ಕೋಸ್ಕರ ಅವರೆಲ್ಲರೂ ಮಾಲೆಗೆ ಚಂದಾದಾರರಾಗಲೊಪ್ಪಿದರು. ಒಬ್ಬಿಬ್ಬರು ಚಂದಾ ಹಣವನ್ನು ಕೊಟ್ಟು ರಸೀದಿಯನ್ನು ಪಡೆದರು. ಉಳಿದವರು ಹಣಕಳಿಸಿಕೊಡುವುದಾಗಿ ವಾಗ್ದಾನ ಮಾಡಿದರು. ಹೀಗೆ ಹತ್ತು ಮಂದಿ ಚಂದಾದಾರರು ದೊರೆತರು. ಶ್ರೀಧರ ದೊಡ್ಡ ಬಂಗಲೆಯೊಂದನ್ನು ಪ್ರವೇಶಿಸಿದ. ಮನೆಯ ಯಜಮಾನರು ಯಾರೋ ಏನೋ ಅವನಿಗೊಂದೂ ತಿಳಿಯದು. ಬೀದಿಯ ಬಾಲಿಲಲ್ಲಿ ನಿಂತು ಒಂದೆರಡು ಬಾರಿ "ಸಾರ್....ಸಾರ್" ಎಂದು ಕೂಗಿದ. ಕೂಡಲೇ ಉತ್ತರ ಬರಲಿಲ್ಲ. ಮತ್ತೊಮ್ಮೆ "ಸಾರ್....ಸಾರ್...." ಎಂದು ಕೂಗಿದ. ಸ್ವಲ್ಪ ಹೊತ್ತಿನಂತರ ಬೀದಿಯ ಬಾಗಿಲು ತೆರೆಯಿತು. ನಡುವಯಸ್ಸು ದಾಟಿದ್ದ ವ್ಯಕ್ತಿಯೊಂದು ಹೊರಗಿಣಿಕಿನೋಡಿತು. ಅವರ ವೇಷ ಭೂಷಣಗಳನ್ನು

ನೋಡಿದರೆ ಸರ್ಕಾರದ ಯಾವುದೋ ದೊಡ್ಡ ಹುದ್ದೆಯಲ್ಲಿದ್ದು ಅದೇ ತಾನೇ ನಿವೃತ್ತಿಯಾಗಿದ್ದವರಂತೆ ಕಂಡು ಬಂದರು. ಅವರನ್ನು ಕಂಡಕೂಡಲೇ ಶ್ರೀಧರನೂ ನಾಡಕರ್ಣಿಯೂ ಕೈಮುಗಿದು ನಮಸ್ಕಾರ ಮಾಡಿದರು. ಮನೆಯ ಯಜಮಾನರು ಪ್ರತಿವಂದಿಸಿ, "ಬನ್ನಿ ಕೂತ್ಕೊಳ್ಳೀ" ಎಂದು ಸ್ವಾಗತಿಸಿದರು. ಹಾಲಿನಲ್ಲಿದ್ದ ಆರಾಮುಕುರ್ಚಿಯಲ್ಲಿ ತಾವು ಕುಳಿತು, ಆಗುಂತಕರ ಕಡೆ ನೋಡಿ "ಕೂತ್ಕೊಳ್ಳಿ" ಎಂದರು. ಇಬ್ಬರೂ ಕುರ್ಚಿಗಳ ಮೇಲೆ ಕೂತರು.

"ನೀವು ಯಾರು ? ನನ್ನಿಂದೇನಾಗಬೇಕಿತ್ತು?"

"ಇವರು ಮಿ|| ನಾಡಕರ್ಣೀಂತ, ಧಾರ್‌ವಾಡದಿಂದ ಬಂದಿದ್ದಾರೆ. 'ರಸಿಕರಂಜಿನೀ ಗ್ರಂಥಮಾಲೆ'ಯ, ಪ್ರಕಾಶಕರು. ಈ ಊರಲ್ಲಿ ಕೆಲವರು ಚಂದಾದಾರರನ್ನು ಮಾಡಿಕೊಳ್ಳಲು ಬಂದಿದ್ದಾರೆ. ತಾವೂ ಈ ಮಾಲೆಗೆ ದಯ ವಿಟ್ಟು ಚಂದಾದಾರರಾಗಿ ಪ್ರೋತ್ಸಾಹಿಸಬೇಕು ಸಾರ್'' ಶ್ರೀಧರ ನುಡಿದ. ಅಷ್ಟು ಹೊತ್ತಿಗೆ ನಾಡಕರ್ಣಿ ತನ್ನ ಬಗಲಲ್ಲಿದ್ದ ಕೈಚೀಲದಿಂದ ಹೊಸದಾಗಿ ಮಾಲೆಯಲ್ಲಿ ಪ್ರಕಟವಾಗಿದ್ದ ಕಥೇ ಪುಸ್ತಕವೊಂದನ್ನು ಹೊರತೆಗೆದು "ಇದು ನಮ್ಮ ಮಾಲೆಯ ಇತ್ತೀಚಿನ ಪುಸ್ತಕಾ ಸಾರ್. ಇನ್ನೂರು ಪುಟಗಳ ಕಾದಂಬರಿ." ಎಂದು ಪರಿಚಯಮಾಡಿ ಕೊಡುತ್ತಾ ಪುಸ್ತಕವನ್ನು ಮನೆಯ ಯಜಮಾನರ ಕೈಗಿತ್ತ. ಯಜಮಾನರು ಪುಸ್ತಕದ ಆಕರ್ಷಣೀಯವಾದ ವರ್ಣರಂಜಿತ ರಕ್ಷಾಕವಚ, ಅಂದವಾದ ಮುದ್ರಣ— ಇವನ್ನೆಲ್ಲಾ ನೋಡಿ ಸುಪ್ರೀತರಾಗಿ ಹೋದರು. ಪುಸ್ತಕವನ್ನು ಒಂದೆರಡು ಸಲ ತಿರುಗಿಸಿ ನೋಡಿದರು. "ಪರವಾಗಿಲ್ಲ. ಪುಸ್ತಕದ "ಗೆಟ್ ಅಪ್" ಬಹಳ ಚೆನ್ನಾಗಿದೆ. ನಿಮ್ಮ ಮಾಲೆಗೆ ಈಗೆಷ್ಟು ಜನ ಚಂದಾದಾರರಿದ್ದಾರೆ" ಎಂದು ಪ್ರಶ್ನಿಸಿದರು.

"ಈಗ ಸದ್ಯಕ್ಕೆ ಮುನ್ನೂರು ಮಂದಿಯಿದ್ದಾರೆ ಸಾರ್. ವರ್ಷ ವರ್ಷಕ್ಕೂ ಚಂದಾದಾರರ ಸಂಖ್ಯೆ ಕಡಿಮೆಯಾಗುತ್ತಿದೆಯೇ ಹೊರತು ಏರುವುದೇ ಇಲ್ಲ. ಬಹಳ ಕಷ್ಟಾ ಸಾರ್ ಮಾಲೆ ನಡೆಸೋದು. ಸಾವಿರಾರು ರೂಪಾಯಿ ಸಾಲಾ ತಲೆಗೆ ಕಟ್ಟಿಕೊಂಡು ಹೇಗೋ ಪುಸ್ತಕ ಪ್ರಕಟನೆಯ ಕೆಲಸ ಮುಂದುವರಿಸುತ್ತಿದ್ದೇವೆ."

"ವರ್ಷಕ್ಕೆಷ್ಟು ಪುಸ್ತಕಾ ಕೊಡ್ತೀರಿ? ವಾರ್ಷಿಕ ಚಂದಾ ಎಷ್ಟು?"

"ವರ್ಷಕ್ಕೆ ಆರು ಪುಸ್ತಕಗಳನ್ನ ಕೊಡ್ತೀವಿ. ಅಂಚೇವೆಚ್ಚ ಸೇರಿ ವರ್ಷಕ್ಕೆ ಆರು ರೂಪಾಯಿ ಮಾತ್ರ."

ಯಜಮಾನರಿಗೇನು ಹೊಳೆಯಿತೋ ಏನೋ. "ಮಂಜುಳಾ-ಮಂಜುಳಾ" ಎಂದು ತಮ್ಮ ಮಗಳನ್ನು ಕೂಗಿದರು. ಕೂಡಲೇ ಮಂಜುಳಾ ಹಾಜರಾದಳು.

"ಏನಮ್ಮಾ ಕಥೇಪುಸ್ತಕ ಬೇಕೂಂತ ಹೇಳ್ತಿದ್ಯಲ್ಲಾ. ಇವರು ಧಾರವಾಡದಿಂದ ಬಂದಿದ್ದಾರಂತೆ. ವರ್ಷಕ್ಕೆ ಆರು ಪುಸ್ತಕಗಳನ್ನ ಕೊಡ್ತಾರಂತೆ. ನೋಡಮ್ಮಾ ಬೇಕಾದರೆ ನಾವೂ ಚಂದಾದಾರರಾಗೋಣ" ಎಂದರು ಯಜಮಾನರು. ಮಂಜುಳಾ ತನ್ನ ತಂದೆಯ ಕೈಯಲ್ಲಿದ್ದ ಪುಸ್ತಕವನ್ನು ತೆಗೆದುಕೊಂಡು ಹಿಂದೆ ಮುಂದೆ ತಿರುಗಿಸಿ ನೋಡಿದಳು. ಕಡೆಗೆ ಬೇಸರದ ದನಿಯಲ್ಲಿ, "ಏನೂ ಬೇಡಣ್ಣಾ. ದುಡ್ಡುಕೊಟ್ಟೇಕೆ ತಗೋಬೇಕು. ನಮ ಸ್ಕೂಲ್ ಲೈಬ್ರರಿಗೇ ಹೊಸ ಹೊಸ ಪುಸ್ತಕಗಳು ಬಂದಿವೆ. ಹೇಗಿದ್ರೂ ಮನೆಗೆ ಕೊಡ್ತಾರೆ. ತಂದು ಓದಿ ಕೊಟ್ಟರಾಯಿತು." ಎಂದು ಹೇಳಿ ಪುಸ್ತಕವನ್ನು ಪುನಃ ತನ್ನ ತಂದೆಯ ಕೈಗಿತ್ತು ಒಳಕ್ಕೆ ಹೊರಟು ಹೋದಳು. ತಮ್ಮ ಮಗಳ ಉತ್ತರ ಕೇಳಿ ರಾಯರ ಮುಖ ಪೆಚ್ಚಾದುದು ಹಾಗಿರಲಿ, ಶ್ರೀಧರನೂ, ನಾಡಕರ್ಣಿಯೂ "ಆ ಹುಡುಗಿಯ ವಾದ ಕೇಳಿ ಬೆರಗಾಗಿ ಹೋದರು. 'ಆ ಹುಡುಗಿ ಅದೆಷ್ಟು ಚಾಲಾಕಿನಿಂದ ಮಾತಾಡ್ತಾಳೆ. ದುಡ್ಡು ಕೊಟ್ಟು ಕಥೇ ಪುಸ್ತಕ ಏಕೆ ಕೊಂಡುಕೊಳ್ಳಬೇಕೂಂತ ತನ್ನ ತಂದೆಗೇ ಸವಾಲು ಹಾಕ್ತಾಳಲ್ಲಾ ಹುಡುಗಿ" ಎಂದು ಇಬ್ಬರೂ ಮೂಗಿನ ಮೇಲೆ ಬೆರಳಿಟ್ಟುಕೊಂಡರು. ತಮ್ಮ ಮಗಳು ಇಷ್ಟು ಹೇಳಿ ಹೋದ ಮೇಲೆ ರಾಯರ ಕೆಲಸ ಬಹಳ ಸುಲಭವಾಗಿ ಹೋಯಿತು. "ಇಲ್ಲಿ ನೋಡೀಂದ್ರೆ. ನೀವೇನೋ ಪಾಪ ಮನೆ ಮನೇ ಸುತ್ತಿ ಚಂದಾದಾರರನ್ನು ಕೂಡಿಸುತ್ತಿದ್ದೀರಿ. ನೋಡಿ ನನ್ನ ಮಗಳು ನಿಮ್ಮೆದುರಿಗೇ ಹೇಗೆ ಕರಾರುವಾಕ್ಕಾಗಿ ಬೇಡಾಂತ ಹೇಳಿಬಿಟ್ಟಳು. ನಮ್ಮನೇಲಿರೋದು ನಾನು ನನ್ನ ಮಗಳಿಬ್ಬರೇ. ನನಗಂತೂ ರಾತ್ರಿ ಒಂದರ್ಧ ಗಂಟೆ ಪೇಪರೋದೋಕ್ಕೆ ಪುರಸತ್ತು ಸಿಗೋದೇ ಕಷ್ಟ. ಹೀಗಿರೋವಾಗ ಕಥೇ ಪುಸ್ತಕ ಓದೋಕ್ಕಲ್ಲಿ

ವಿರಾಮವಿರುತ್ತೇ ಹೇಳಿ. ಏನೂ ತಿಳಕೋಬೇಡಿ ಹೀಗೆ ಹೇಳಿದ್ದಕ್ಕೆ"
ಎಂದು ಹೇಳಿ ರಾಯರು ಎದ್ದು ಒಳಕ್ಕೆ ಹೋಗುವ ತರಾತುರಿಯಲ್ಲಿದ್ದರು.
ಶ್ರೀಧರನಿಗಂತೂ ಆ ದೊಡ್ಡ ಮನುಷ್ಯರ ವರ್ತನೆ ಕಂಡು ರೇಗಿಹೋಯಿತು.
ಕೂಡಲೇ ಅವನೆದ್ದು ನಿಂತು, "ನೀವ್ಯೇನೂ ಅಷ್ಟು ಸಂಕೋಚ ಪಡಬೇ
ಕಾಗಿಲ್ಲ ಸಾರ್. ನಮ್ಮದೇನೂ ಬಲವಂತವಿಲ್ಲ. ಏನೋ ಎಲ್ಲರ ಮನೆಗೂ
ಹೋಗೋ ಹಾಗೆಯೇ ನಿಮ್ಮನೇಗೂ ಬಂದೆವು. ನಿಮಗಿಷ್ಟವಿಲ್ಲದಿದ್ರೆ
ಬೇಡ. ಮೊದಲೇ ನೀವು ಬೇಡವೆಂದು ಹೇಳಿಬಿಟ್ಟಿದ್ದಿದ್ದರೆ ಇಷ್ಟೆಲ್ಲಾ
ಮಾತಾಡಿ ತಮ್ಮ ಅಮೂಲ್ಯವಾದ ಕಾಲವನ್ನು ವ್ಯರ್ಥಮಾಡುತ್ತಿರಲಿಲ್ಲ.
ನಾವು ಕೊಟ್ಟ ತೊಂದರೆಗಾಗಿ ದಯವಿಟ್ಟು ಕ್ಷಮಿಸಿ. ನಾವಿನ್ನು ಬರ್ತೇವೆ"
ಎಂದುಬಿಟ್ಟ. ಒಂದು ನಿಮಿಷವೂ ಅಲ್ಲಿ ನಿಲ್ಲದೆ ದುರ್ದಾನ ತೆಗೆದುಕೊಂಡ
ಬ್ರಾಹ್ಮಣನಂತೆ ಬಿರಬಿರನೆ ಬಂಗಲೆಯಿಂದ ಹೊರಬಿದ್ದ. ಪಾಪ ನಾಡ
ಕರ್ಣಿಯೂ ಪೆಚ್ಚುಮೋರೆ ಹಾಕಿಕೊಂಡು ಅವನನ್ನು ಹಿಂಬಾಲಿಸತೊಡ
ಗಿದ. ದಾರಿಯಲ್ಲಿ ಬ್ಬರಿಗೂ ಮಾತು ಬೆಳೆಯಿತು.

"ಅವರಿಗೆಷ್ಟು ತಿರಸ್ಕಾರ ನೋಡಿ ಕನ್ನಡ ಪುಸ್ತಕಗಳೆಂದರೆ!
ಕನ್ನಡಿಗರಿಗೇ ಕನ್ನಡ ಪುಸ್ತಕಗಳನ್ನು ಕೊಂಡು ಓದುವ ಅಪೇಕ್ಷೆಯಿರ
ದಿದ್ದರೆ ಇನ್ನು ಬೇರೇ ಭಾಷೆಯವರು ಬಂದು ನಮ್ಮ ಪುಸ್ತಕಗಳನ್ನು
ಕೊಂಡು ಓದುತ್ತಾರೆಯೇ ಹೇಳಿ! ಎಂತಹ ಅಭಿಮಾನಶೂನ್ಯರಾದ ಜನ
ನಮ್ಮನರು!!" ಶ್ರೀಧರ ಬಹಳ ನೋವಿನಿಂದ ನುಡಿದ.

"ಏನು ಮಾಡೋದು ರಾಯರೇ. ಒಬ್ಬೊಬ್ಬರ ಮರ್ಜಿ ಒಂದೊಂದು
ತರಹ. ಸಾರ್ವಜನಿಕ ಸೇವೆಗೆಂದು ಸೊಂಟಕಟ್ಟಿ ನಿಂತವರು ಎಲ್ಲರ
ಮರ್ಜಿಯನ್ನೂ ಅನುಸರಿಸಿಕೊಂಡು ಹೋಗಬೇಕಾಗುತ್ತೆ. ಅವರು
ಚಂದಾದಾರರಾಗದಿದ್ರೆ ಕೆಡ್ತು. ಆದ ನಷ್ಟವೇನು ಬಿಡಿ."

"ಹಾಗಲ್ಲಾ ಮಿ|| ನಾಡಕರ್ಣಿ. ನಾವು ಪ್ರಸ್ತಾಪ ಮಾಡಿದ
ಕೂಡಲೇ ಆತ ನಿರ್ದಾಕ್ಷಿಣ್ಯವಾಗಿ ನನಗೆ ಬೇಡಾಂತ ಹೇಳಿಬಿಟ್ಟಿದ್ದಿದ್ದರೆ
ನಾವಾತನನ್ನು ತಗೊಂಡು ಹೋಗಿ ಗಲ್ಲಿಗೆ ಏರಿಸಿಬಿಡುತ್ತಿದ್ದೆವೇ? ಇದೆಲ್ಲಾ
ಅವರವರಿಷ್ಟ. ಬಲವಂತವೇನೂ ಇಲ್ಲವಲ್ಲ. ಒಂದು ಮಾತ್ನಲ್ಲಿ ಹೇಳಿ

ಕಳಿಸೋದು ಬಿಟ್ಬಿಟ್ಟು ಏನೇನೋ ಬಳಸಿಕೊಂಡು ಒಂದರ್ಧಗಂಟೆ ಮಾತಾಡಿದ ಪುಣ್ಯಾತ್ಮ."

ಇಬ್ಬರೂ ಪುತ್ತೊಂದು ಬಂಗಲೆಯನ್ನು ಹೊಕ್ಕರು. ಗೇಟಿನಲ್ಲಿ ಕಾಲಿಡುತ್ತಿರುವಾಗಲೇ "ಬೌವ್" ಎಂದು ನಾಯಿಯೊಂದು ಬಗುಳಿತು. ನಾಯಿಯನ್ನು ಕಟ್ಟಿಹಾಕಿರಲಿಲ್ಲವಾದ್ದರಿಂದ ಅದು ಗೇಟಿನ ಹತ್ತಿರ ಬಂದು ಒಂದೇಸಮನೆ ಬೊಗಳತೊಡಗಿತು. "ಈ ಮನೆಯ ಸಹವಾಸವೇ ಬೇಡ ಸದ್ಯ. ಮುಂದಿನ ಮನೆಗೆ ಹೋಗೋಣ ಮಿ|| ನಾಡಕರ್ಣಿ" ಎಂದ ಶ್ರೀಧರ. ಅಷ್ಟುಹೊತ್ತಿಗೆ ಮನೆಯ ವರಾಂಡಾದಲ್ಲಿ ಕುಳಿತು ಪತ್ರಿಕೆ ಯನ್ನೋದುತ್ತಿದ್ದ ವ್ಯಕ್ತಿಯೊಂದು ಎದ್ದು ಗೇಟಿನ ಬಳಿ ಬಂದು ನಿಂತಿತು. ಮನೆಯ ಯಜಮಾನನನ್ನು ನೋಡಿದ ಕೂಡಲೇ ನಾಯಿ ಬಾಲ ಮುದುರಿ ಕೊಂಡು ತೆಪ್ಪಗೆ ಎಲ್ಲೋ ಅಡಗಿಕೊಂಡು ಬಿಟ್ಟಿತು. "ಕಮಾನ್....ಪ್ಲೀಸ್ ಗೆಟಿನ್" ಎನ್ನುತ್ತಾ ಮನೆಯ ಮಾಲೀಕರು ಗೇಟು ತೆಗೆದರು. ಬಂದಿದ್ದ ವರನ್ನು ಒಳಕ್ಕೆ ಕರೆದುಕೊಂಡು ಹೋದರು ತಾವೊಂದು ಆರಾಮಾಸನ ದಲ್ಲಿ ಕುಳಿತು, ತಮ್ಮ ಮುಂದಿದ್ದ ಕುರ್ಚಿಗಳ ಕಡೆ ತೋರಿಸುತ್ತಾ "ಪ್ಲೀಸ್ ಟೇಕ್ ಯುವರ್ ಸೀಟ್ಸ್" ಎಂದರು. ಶ್ರೀಧರನೂ ನಾಡಕರ್ಣಿಯೂ ಮಂಡಿಸಿದರು. ಯಥಾಪ್ರಕಾರ ನಾಡಕರ್ಣಿ ಸಾದ್ಯಂತವಾಗಿ ತನ್ನ ವರದಿ ಯೊಪ್ಪಿಸಿದ. ಎಲ್ಲವನ್ನೂ ಸಾವಧಾನವಾಗಿ ಕೇಳುತ್ತಿದ್ದ ಮಾಲೀಕರ ಮುಖದಲ್ಲಿ ಮುಗುಳ್ನಗೆ ಮೂಡಿದುದನ್ನು ನೋಡಿ, ಅವರು ಚಂದಾದಾರ ರಾದರೂ ಆಗಬಹುದೆನ್ನುವ ಆಶಾಂಕುರವೊಂದುದಯಿಸಿತು ಶ್ರೀಧರನ ಮನಸ್ಸಿನಲ್ಲಿ. ಎಲ್ಲವನ್ನೂ ಕೇಳಿಯಾದಮೇಲೆ ಮನೆಯ ಮಾಲೀಕರು ಅಪ್ಪಣೆ ಕೊಡಿಸಿದರು. "ಇಲ್ಲಿ ನೋಡೀ ಮಿಸ್ಟರ್. ದೋ ಐ ಆಮ್ ಎ ಕ್ಯಾನರೀಸ್ ಸ್ಪೀಕಿಂಗ್ ಮ್ಯಾನ್, ನನಗಷ್ಟಾಗಿ ಕನ್ನಡ ಬರೋಲ್ಲ. ನಮ್ಮ ಗ್ರಾಂಡ್ ಫಾದರ್ಸೆಲ್ಲಾ ಪಕ್ಕಾ ಮೈಸೂರಿನವರೇ. ದೆ ವರ್ ಬಾರ್ನ್ ಅಂಡ್ ಬ್ರೆಡಪ್ ಇನ್ ಮೈಸೂರ್ ಓನ್ಲಿ. ನನಗೆ ಈ ಅಫಿಷಿಯಲ್ ವರ್ಕಿನ ಗಲಾಟೇಲಿ ಸ್ಟೋರೀ ಬುಕ್ಸು ಓದೋಕ್ಕೆಲ್ಲಿ ಪುರಸತ್ತು ಹೇಳಿ. ಆದರೆ ನಮ್ಮ ಲೇಡೀಸ್‌ಗೆ ಸ್ಟೋರಿ ಬುಕ್ಸೆಂದ್ರೆ ಬಹಳ ಇಷ್ಟ. ನಮ್ಮ ಮನೇ ಹೆಂಗಸ್ರೆಲ್ಲಾ ಓದ್ತಾರೆ ನಾವಲ್ನ. ಅಟ್ ಲೀಸ್ಟ್ ಫಾರ್ ದಿ ಸೇಕ್

ಆಫ್ ವಿಮೆನ್, ನಾನು ನಿಮ್ಮ ಮಾಲೆಗೆ ಸಬ್‌ಸ್ಕ್ರೈಬರ್ ಆಗಬೇಕೆಂದಿದ್ದೀನಿ. ನನ್ನ ನೇಮ್ ಬರ್ಕೊಳ್ಳಿ. ಹಾಗೇ ಒಂದು ರಶೀತೀನೂ ಬರೀರಿ.''

ಇಷ್ಟು ಮಾತ್ರ ಅವರ ಬಾಯಲ್ಲಿ ಬಂದೀತೇ ಎಂದು ಚಾತಕಪಕ್ಷಿಯಂತೆ ಎದುರುನೋಡುತ್ತಿದ್ದ ನಾಡಕರ್ಣಿ ತಕ್ಷಣ ತನ್ನ ಚೀಲದೊಳಗಿಂದ ರಸೀತಿ ಪುಸ್ತಕವನ್ನು ಹೊರತೆಗೆದು ಬರೆಯತೊಡಗಿದ. ಮನೆಯ ಯಜಮಾನರು ಒಳಕ್ಕೆ ಹೋಗಿ ಹಣ ತಂದು ನಾಡಕರ್ಣಿಯ ಕೈಗಿತ್ತರು. ಮಾಲೆಯಲ್ಲಿ ಇತ್ತೀಚೆಗೆ ಪ್ರಕಟವಾಗಿದ್ದ ಪುಸ್ತಕವನ್ನೂ ರಸೀತಿಯನ್ನೂ ನಾಡಕರ್ಣಿ ಮನೆಯ ಯಜಮಾನರ ಕೈಗಿತ್ತು, "ಬಹಳ ಥ್ಯಾಂಕ್ಸ್ ಸಾರ್" ಎಂದು ಕೃತಜ್ಞತೆ ಸೂಚಿಸಿದ. ಇಬ್ಬರೂ ಒಟ್ಟಿಗೇ ''ನಮಸ್ಕಾರಾ ಸಾರ್. ನಾವಿನ್ನು ಬರ್ತೀವೆ'' ಎಂದು ಹೇಳಿ ಆ ಬಂಗಲೆಯಿಂದ ಹೊರಟರು. ದಾರಿಯಲ್ಲಿ ಹೋಗುತ್ತಿದ್ದಾಗ ಶ್ರೀಧರ ನುಡಿದ. "ಕೇಳಿದಿರಾ ಮಿಸ್ಟರ್ ನಾಡಕರ್ಣಿ ಆತ ಹೇಳಿದ್ದು. ಕನ್ನಡ ಸಾಹಿತ್ಯವೆಲ್ಲಾ ಕೇವಲ ಹೆಣ್ಣು ಮಕ್ಕಳಿಗೇ ಮೀಸಲಾದ್ದು. ಗಂಡಸರ್ಯಾರೂ ಅದನ್ನೋದುವ ಆವಶ್ಯಕತೆಯಿಲ್ಲವೆಂದು ಆತನಭಿಪ್ರಾಯಾಂತ ಕಾಣುತ್ತೆ. ಆತನ ಅಜ್ಞಾನಕ್ಕೆ ನಾನು ಬಹಳ ದುಃಖಪಡುತ್ತೇನೆ ಮಿ|| ನಾಡಕರ್ಣಿ!"

''ನಮ್ಮ ಜನರಲ್ಲಿನ್ನೂ ಆ ದುರಭಿಪ್ರಾಯ ಹೋಗಿಲ್ಲ ರಾಯರೇ. ನನ್ನ ಪ್ರವಾಸದಲ್ಲಿ ನೋಡ್ತಿದ್ದೇನಲ್ಲಾ. ಎಲ್ಲರೂ ಹಾಗೇ ಹೇಳ್ತಾರೆ. ಮನೇಲಿರೋ ಹೆಣ್ಣು ಮಕ್ಕಳಿಗೆ ಹೊತ್ತುಹೋಗೋಕ್ಕೊಂದು ಹವ್ಯಾಸ ಕಥೇಪುಸ್ತಕಗಳೂಂತ ಬಹಳ ಜನ ತಿಳಕೊಂಡಿದ್ದಾರೆ. ಗಂಡಸರಾದವರಿಗೆ ತಾವೂ ಸಾಹಿತ್ಯ ಅಗತ್ಯವಾಗಿ ಓದಬೇಕು. ಓದಿ ಆನಂದಪಡಬೇಕು. ಸಂಸ್ಕಾರ ಹೊಂದಬೇಕು ಅನ್ನುವ ಆಸೆಯೇ ಇರೋವುಟ್ಟಿಗೆ ಕಾಣೆ.''

ಇಬ್ಬರೂ ಮನೆಯೊಂದನ್ನು ಹೊಕ್ಕರು. ಮನೇ ತಕ್ಕಮಟ್ಟಿಗೆ ದೊಡ್ಡದಾಗಿಯೇ ಇತ್ತು. ಮನೆಯಲ್ಲಿ ಹೆಚ್ಚು ಗದ್ದಲವಿರಲಿಲ್ಲ. ''ಸಾರ್ ಸಾರ್'' ಎಂದು ಶ್ರೀಧರ ಎರಡು ಮೂರು ಸಲ ಕೂಗುವ ಹೊತ್ತಿಗೆ ಮನೆಯಲ್ಲಿದ್ದ ವ್ಯಕ್ತಿ, ಬೀದಿ ಬಾಗಿಲು ತೆರೆದು, 'ಯಾರದು?' ಎಂದು ಸಿಡುಕಿನಿಂದ ಪ್ರಶ್ನಿಸಿದ. ಆತ ಹೊರಗೆ ಹೊರಡಲು ಉಡುಪು ಧರಿಸಿಕೊಳ್ಳುತ್ತಿದ್ದ

ಹಾಗೆ ಕಂಡುಬಂತು. ಆಗತಾನೇ ಷರಾಯಿ ಹಾಕಿಕೊಂಡು ಕಾಲಿಗೆ ಕಾಲುಚೀಲ ಸಿಕ್ಕಿಸಿಕೊಳ್ಳುತ್ತಿದ್ದ. ತನ್ನ ಕೆಲಸಕ್ಕೆ ತಡೆಯುಂಟಾಯಿತಲ್ಲಾ ಎಂಬುದೇ ಅವನ ಕೋಪಕ್ಕೆ ಕಾರಣವಾಗಿತ್ತು. ಶ್ರೀಧರ ವಿನಯದಿಂದ ಹೇಳತೊಡಗಿದ. "ಯಾರೂ ಇಲ್ಲಾ ಸಾರ್. ಇವರೊಬ್ಬ ಪಬ್ಲಿಷರ್. ಧಾರವಾಡದಿಂದ ಬಂದಿದ್ದಾರೆ ಇವರ ಮಾಲೆಗೆ ನೀವೇನಾದರೂ ಚಂದಾ ದಾರರಾಗುತ್ತೀರೇನೋ ಎಂಬಾಸೆಯಿಂದ ಬಂದಿದ್ದೇವೆ."

ಶ್ರೀಧರನಂದುದನ್ನು ಕೇಳಿ ಆ ವ್ಯಕ್ತಿಯ ಮುಖದಲ್ಲಿ ಸಂತೋಷ ವಾಗಲೀ, ಅಸಮಾಧಾನವಾಗಲೀ ಯಾವುದೊಂದು ಪ್ರತಿಕ್ರಿಯೆಯೂ ತೋರಿ ಬರಲಿಲ್ಲ. ಬಂದಿದ್ದವರಿಗೆ 'ದಯವಿಟ್ಟು ಕುಳಿತುಕೊಳ್ಳಿ' ಎಂದು ಕೂಡಾ ಹೇಳಲಿಷ್ಟಪಡದೆ ಆತ ಹಾಲಿನಿಂದ ಕೊಠಡಿಗೂ, ಕೊಠಡಿಯಿಂದ ಹಾಲಿಗೂ ಶತಪಥ ತಿರುಗಾಡ ಹತ್ತಿದ. ಶ್ರೀಧರನೂ ನಾಡಕರ್ಣಿಯೂ ಆ ವ್ಯಕ್ತಿಯ ವಿಚಿತ್ರ ವರ್ತನೆಯನ್ನು ಕಂಡು ಚಕಿತರಾದರು. ಮುಂದೇನು ಹೇಳು ತ್ತಾನೋ ನೋಡೋಣವೆಂದು ನಿರೀಕ್ಷಿಸುತ್ತಾ ನಿಂತರು. ಆತ ತನ್ನ ಅಲಂಕಾರವನ್ನೆಲ್ಲಾ ಮುಗಿಸಿಕೊಂಡು ಹಾಲಿಗೆ ಬಂದ. ಮೇಜಿನ ಮೇಲಿದ್ದ ಪ್ಲೇಯರ್ಸ್ ಸಿಗರೇಟು ಪ್ಯಾಕಿಂದ ಒಂದು ಸಿಗರೇಟು ಹೊರತೆಗೆದು, ಅದನ್ನು ಬಾಯಲ್ಲಿ ಕಚ್ಚಿಕೊಂಡು ಅದಕ್ಕೆ ಕಡ್ಡಿಗೀರಿದ. ಒಂದು ದಮ್ ಹೊಗೇ ಹೊರಗೆ ಬಿಡುತ್ತಾ ಹೇಳಿದ ಆ ವ್ಯಕ್ತಿ. "ಈಗ ಮಂತ್ ಎಂಡ್. ಐ ಹ್ಯಾವ್ ನೋ ಮನೀ ವಿತ್ ಮಿ. ಐ ಆಮ್ ವೆರಿ ಸಾರಿ." ಇಷ್ಟು ಹೇಳಿ ಆತ ಹ್ಯಾಟು ಕೈಗೆತ್ತಿಕೊಂಡು ಹೊರಡಲು ಸಿದ್ಧನಾದ.

"ಪರವಾಗಿಲ್ಲಾ ಸಾರ್. ಪುಸ್ತಕಾ ಕೊಟ್ಟುಹೋಗಿರ್ತೇನೆ ನೀವು ಮುಂದಿನ ತಿಂಗಳು ಸಂಬಳಾ ತಗೊಂಡಮೇಲೆ ಎಂ. ಓ. ಮಾಡಬಹುದು. ಅಡ್ಡಿಯಿಲ್ಲ." ಎಂದು ಗೋಗರೆದ ನಾಡಕರ್ಣಿ. ಆ ವ್ಯಕ್ತಿಗಾಗ ಆ ಬಡ ಪ್ರಕಾಶಕನ ಮೇಲೆ ಮರುಕವುಂಟಾಯಿತೇನೋ. "ಹಾಗಾದ್ರೆ ನಿಮ್ಮಡ್ರೆಸ್ ಕೊಟ್ಟುಹೋಗಿ. ಮುಂದಿನ ತಿಂಗಳು ನಿಮಗೆ ಎಂ ಓ. ಮಾಡ್ತೀನಿ" ಎನ್ನುತ್ತಾ ಮೇಜಿನಮೇಲಿದ್ದ ಲೆಟರ್ ಪ್ಯಾಡನ್ನೆತ್ತಿ ನಾಡಕರ್ಣಿಯ ಕೈಗಿತ್ತ. ನಾಡಕರ್ಣಿ ಬಹಳ ಶ್ರದ್ಧಾಭಕ್ತಿಗಳಿಂದ ತನ್ನ ವಿಳಾಸವನ್ನು ಬರೆದುಕೊಟ್ಟ.

"ಬಹಳ ಥ್ಯಾಂಕ್ಸ್ ಸಾರ್ ನಿಮಗೆ ತೊಂದರೇ ಕೊಟ್ಟೆವು ಕ್ಷಮಿಸಿ."
ಎನ್ನುತ್ತಾ ಇಬ್ಬರೂ ಆ ವ್ಯಕ್ತಿಗೆ ಕೈಜೋಡಿಸಿ ನಮಸ್ಕಾರ ಹಾಕಿ ಹೊರಟರು.

"ನೋಡಿದಿರಾ ಮಿ|| ನಾಡಕರ್ಣಿ. ನಮ್ಮ ಜನ ಹೇಗೆ ವರ್ತಿಸುತ್ತಾರೆ! ಅಷ್ಟು ಠಾಕುಠೀಕಾಗಿ ಡ್ರೆಸ ಹಾಕ್ಕೊಂಡು ಓಡಾಡ್ತಿದ್ದನಲ್ಲಾ ಆತ. ಒಳ್ಳೇ ಜಂಟಲ್‌ಮನ್ ಇದ್ದಹಾಗೆ ಕಂಡುಬಂದನಲ್ಲಾ ! ಮನೆಗೆ ಬಂದ ವರಿಗೆ "ದಯವಿಟ್ಟು ಕೂತ್ಕೊಳ್ಳಿ" ಅಂತ ಹೇಳಿಬಿಟ್ಟಿದ್ದರೆ ಅವನ ಗಂಟೇನು ಮುಳುಗಿ ಹೋಗುತ್ತಿತ್ತೋ ಕಾಣೆ. ಆತ ಎಷ್ಟು ವಿದ್ಯಾವಂತನಾದರೇನು ? ಎಷ್ಟು ಸಂಪಾದಿಸಿದರೇನು ? ಮನುಷ್ಯನಿಗೆ ಆರ್ಡಿನರೀ ಕರ್ಟ್ಸಿೀ ಕೂಡಾ ಇಲ್ಲವಲ್ಲಾಂತ ನನಗಾಶ್ಚರ್ಯ."

"ಹೌದು ರಾಯರೇ ನೀವನ್ನುವುದು ಖರೆ. ಪಾಪ ನಿಮಗಿದೆಲ್ಲಾ ಹೊಸ ಅನುಭವ. ಜನರ ರೀತಿನೀತಿಗಳೆಲ್ಲಾ ಆಶ್ಚರ‍್ಯವಾಗಿ ಕಾಣೋದು ನಿಮಗೆ ಸಹಜವೇ. ನಮಗಿದೆಲ್ಲಾ ಸರ್ವೇಸಾಮಾನ್ಯವಾಗಿ ಹೋಗಿದೇ ರಾಯರೇ. ಏನು ಮಾಡೋದು ಹೇಳಿ. ನಮ್ಮ ವೃತ್ತಿಯೇ ಅಂಥದು. ಹತ್ತು ಜನರಿಗೆ ಉಪಕಾರ ಮಾಡೋ ಕೆಲಸಕ್ಕೆ ಕೈ ಹಚ್ಚಿರೋ ಜನರ ಪಾಡೆಲ್ಲಾ ಹೀಗೇ. ಭಿಕ್ಷುಕರ ಹಾಗೆ ಎಲ್ಲರ ಮನೆ ಬಾಗಿಲಿಗೂ ಹೋಗ ಬೇಕಾಗುತ್ತೆ. ಅವರ ಸಮಯ ಸಂದರ್ಭ ಕಾಯಬೇಕಾಗುತ್ತೆ ಒಂದಲ್ಲ ಹತ್ತು ಸಲ ಸುತ್ತಬೇಕಾಗುತ್ತೆ. "ಕಾರ್ಯವಾಸೀ ಕತ್ತೇ ಕಾಲು ಕಟ್ಟ ಬೇಕೂ"ನ್ನೋದು ನಿಮಗೆ ಗೊತ್ತೇ ಇದೆಯಲ್ಲಾ. ನಮ್ಮ ಕೆಲಸವಾಗ ಬೇಕಾದರೆ ಇದೆಲ್ಲಾ ಅನುಭವಿಸಿಯೇ ತೀರಬೇಕು, ರಾಯರೇ."

"ಏನನುಭವಿಸೋದೋ ಏನೋ ಮಿ|| ನಾಡಕರ್ಣಿ. ನಿಮ್ಮ ಜತೇಲಿ ಒಂದು ಹತ್ತು ಮನೇ ಸುತ್ತೋ ಹೊತ್ತಿಗೇ ನನಗೆ ಸಾಕಾಗಿ ಹೋಯಿತು. ನನ್ನ ತಾಳ್ಮೆಯೆಲ್ಲಾ ಹಾರಿಹೋಗಿದೆ. ಅಂಥಾದ್ದರಲ್ಲಿ ನೀವದೆಷ್ಟು ತಾಳ್ಮೆ ಯಿಂದ ಈ ಬವಣೆಗಳನ್ನೆಲ್ಲಾ ಅನುಭವಿಸಿದ್ದೀರೋ ನನಗೆ ತಿಳಿಯದು. ಅಂತೂ ನಿಮಗಿರುವ ಪೇಷನ್ಸ್ ನೋಡಿ ನನಗಾಶ್ಚರ‍್ಯವಾಗುತ್ತೆ."

"ಇದೆಲ್ಲಾ ನನಗೆ ರೂಢಿಯಾಗಿಬಿಟ್ಟಿದೇ ರಾಯರೇ."

ಅಷ್ಟು ಹೊತ್ತಿಗೆ ಹನ್ನೆರಡು ಗಂಟೆಯಾಗಿತ್ತು. ಬಿಸಿಲಿನ ಝಳ ವಿಪರೀತವಾಗಿತ್ತು. ಬೆಳಿಗ್ಗೆಯಿಂದ ಸುತ್ತಿ ಸುತ್ತಿ ಇಬ್ಬರೂ ಬಹಳ ದಣಿದಿದ್ದರು.

"ಬನ್ನೀ ಮಿ|| ನಾಡಕರ್ಣಿ. ಈ ಹೋಟಲಲ್ಲಿ ಒಂದಿಷ್ಟು ಕಾಫೀ ಹಾಕ್ಕೊಂಡು ಮುಂದಕ್ಕೆ ಪ್ರಯಾಣ ಮಾಡೋಣ" ಎನ್ನುತ್ತಾ ಶ್ರೀಧರ ದಾರಿಯಲ್ಲಿ ಸಿಕ್ಕ ವೆಲ್‌ಕಮ್ ಹೋಟಲನ್ನು ಪ್ರವೇಶಿಸಿದ. ಮಾಣಿಯೊಬ್ಬ ಅವರಿದ್ದೆಡೆಗೆ ಬಂದು "ಏನು ಬೇಕು ಸಾರ್" ಎಂದು ವಿಚಾರಿಸಿದ. "ಮೊದಲೆರಡು ಆರೆಂಜ್ ಕ್ರಷ್ ಕೊಡಯ್ಯ. ಪ್ರಾಣ ಬರತ್ತೆ" ಎನ್ನುತ್ತಾ ಶ್ರೀಧರ ತನ್ನ ಕರವಸ್ತ್ರದಿಂದ ಮುಖದ ಮೇಲಿನ ಬೆವರನ್ನೊರಸಿಕೊಂಡ. ಶ್ರೀಧರನ ಅವಸ್ಥೆಯನ್ನು ನೋಡಿ, "ತಮಗೆ ನನ್ನಿಂದ ಬಹಳ ತ್ರಾಸಾಯಿತು ರಾಯರೇ. ಕ್ಷಮಿಸಿ" ಎಂದ ನಾಡಕರ್ಣಿ.

"ತ್ರಾಸವೇನು ಬಂತು ಮಿ|| ನಾಡಕರ್ಣಿ. ನೀವಂದಹಾಗೆ ಸಾರ್ವಜನಿಕ ಕೆಲಸ ಕಾರ್ಯಗಳ ಹಣೆಬರಹವೇ ಅಷ್ಟು. ಇದಕ್ಕೆಲ್ಲಾ ಹೆದರಿಕೊಂಡರೆ ಹೇಗೆ?"

"ನಿಮಗೀವತ್ತು ಕಾಲೇಜಿಲ್ಲವೇ ರಾಯರೇ?"

"ಇಲ್ಲ. ಈವತ್ತು ಶನಿವಾರ. ಕಾಲೇಜಿಗೆ ರಜ"

"ಸರಿ ಹಾಗಾದರೆ ನನ್ನಿಂದೇನೂ ನಿಮಗೆ ಕಾಲೇಜು ತಪ್ಪಲಿಲ್ಲವಲ್ಲ."

ಅಷ್ಟು ಹೊತ್ತಿಗೆ ಮಾಣಿ ಎರಡು ಗ್ಲಾಸುಗಳಲ್ಲಿ ಆರೆಂಜ್ ಕ್ರಷ್ ತಂದ. ಇಬ್ಬರೂ ಒಂದೇ ಗುಟುಕಿನಲ್ಲಿ ಗ್ಲಾಸುಗಳನ್ನು ಬರಿದುಮಾಡಿದ್ದರು. ಶ್ರೀಧರ ಎಷ್ಟು ಬೇಡವೆಂದರೂ ಕೇಳದೆ ನಾಡಕರ್ಣಿಯೇ ದುಡ್ಡು ಕೊಟ್ಟ.

"ಇನ್ನು ಸಾಕು ರಾಯರೇ. ಆಗಲೇ ಊಟದ ಹೊತ್ತಾಗಿದೆ. ಊ ಮಾಡಿ ಸ್ವಲ್ಪ ವಿಶ್ರಾಂತಿ ತೆಗೆದುಕೊಂಡು ಮಧ್ಯಾಹ್ನ ನಾಲ್ಕರಮೇಲೆ ಹೊರಟರಾಯಿತು" ನಾಡಕರ್ಣಿ ಹೇಳಿದ.

"ಹಾಗೇ ಮಾಡೋಣ. ನಾನಿನ್ನೂ ಸುತ್ತಲಿಕ್ಕೆ ತಯಾರಿದ್ದೇನೆ. ಸ್ವಲ್ಪ ಹೊಟ್ಟೆ ತಂಪಾಯಿತು. ಇನ್ನೂ ಒಂದೆರಡು ಗಂಟೆ ಸುತ್ತಬಲ್ಲೆ."

'ಬೇಡ ರಾಯರೇ. ಸದ್ಯ ನಿಮ್ಮಿಂದ ಇಷ್ಟು ಸಹಾಯವಾಯ್ತಲ್ಲಾ ಈಗಾಗಲೇ ಒಂದಿಪ್ಪತ್ತು ಚಂದಾದಾರರನ್ನು ದೊರಕಿಸಿಕೊಟ್ಟಿದ್ದೀರಿ. ಸಂಜೆ ಸ್ವಲ್ಪ ಹೀಗೇ ಜತೇಲಿ ಬಂದು ಬಿಟ್ರೆ ನನ್ನ ಕೆಲಸ ಸುಸೂತ್ರವಾಗಿ ನಡೆದು ಹೋಗತ್ತೆ. ಬನ್ನಿ ಈಗ ರೂಮಿಗೆ ಹೋಗೋಣ."

"ಅಗತ್ಯವಾಗಿ ಬರ್ತೀನಿ ಮಿ|| ನಾಡಕರ್ಣಿ"

ಇಬ್ಬರೂ ಕೊಠಡಿಯ ಕಡೆ ಬೇಗಬೇಗ ಕಾಲು ಹಾಕತೊಡಗಿದರು.

## ೨೧

"ಅಮ್ಮಾ.......ಅಮ್ಮಾ.......!!" ನಿದ್ದೆಬರದೆ ಹಾಸಿಗೆಯ ಮೇಲೆ ನರಳುತ್ತಿದ್ದಳು ಶಾರದೆ. ಗಾಢನಿದ್ರೆಯಲ್ಲಿದ್ದ ಭಾಗ್ಯಮ್ಮನವರಿಗೆಚ್ಚರ ವಾಗಲಿಲ್ಲ ಸ್ವಲ್ಪ ಹೊತ್ತಿನಂತರ "ಅಮ್ಮಾ.......ಅಮ್ಮಾ.......ಸ್ವಲ್ಪ ಏಳಮ್ಮಾ" ಎಂದು ಪಕ್ಕದಲ್ಲಿ ಮಲಗಿದ್ದ ತನ್ನ ತಾಯನ್ನು ತಟ್ಟಿ ಎಬ್ಬಿಸಿದಳು ಶಾರದೆ. ಭಾಗ್ಯಮ್ಮ ಹೌಹಾರಿಬಿದ್ದು ಹಾಸಿಗೆಯ ಮೇಲೆದ್ದು ಕೂತರು. "ಏನಮ್ಮಾ ಶಾರದಾ. ನೋವು ಶುರುವಾಗಿದೆಯೇ ತಾಯೀ" ಎಂದು ಗಾಬರಿಗೊಂಡು ಕೇಳಿದರು.

"ಏನೋಮ್ಮ ನನಗೆ ಹೇಳೋಕ್ಕೆಬರಲ್ಲ. ಆಗಿಂದಲೂ ಒಂದೇಸಮನೆ ಹೊಟ್ಟೇ ಚಳುಕು ಶುರುವಾಗಿದೆ. ಬಹಳ ಸಂಕಟವಾಗುತ್ತೆ" ಎಂದಳು ಶಾರದೆ.

ಮಗಳಿಗೆ ಹೆರಿಗೆಯ ನೋವು ಆರಂಭವಾಗಿ ಹೋಗಿದೆಯೆಂದು ಭಾಗ್ಯಮ್ಮ ನಿರ್ಧರಿಸಿಬಿಟ್ಟರು. ಕೂಡಲೇ ಎದ್ದು ದೀಪಹಾಕಿ ಗಂಟೆ ನೋಡಿದರು. ಆಗಿನ್ನೂ ನಾಲ್ಕುಗಂಟೆ. ಆ ಅವೇಳೆಯಲ್ಲಿ ಆಸ್ಪತ್ರೆಗೆ ಹೋಗುವುದಾದರೂ ಹೇಗೆಂದು ಕ್ಷಣಕಾಲ ಯೋಚಿಸಿದರು. ತಮ್ಮ ಮಗಳಿಗದೇ ಚೊಚ್ಚಲು ಹೆರಿಗೆ. ಹೇಗಾಗುತ್ತೋ ಏನೋ. ಆಸ್ಪತ್ರೆಗೆ ಸೇರಿಸಿಬಿಡುವುದೇ ಕ್ಷೇಮವೆಂದು ಅವರು ಯಾವ ಸೂಲಗಿತ್ತಿಯನ್ನೂ ಗೊತ್ತುಮಾಡಿರಲಿಲ್ಲ. ಭಾಗ್ಯಮ್ಮನವರಿಗೇನೂ ದಿಕ್ಕುತೋಚದೆ ನೆಟ್ಟಗೆ ಹೋಗಿ ತಮ್ಮ ಯಜಮಾನರನ್ನೆಬ್ಬಿಸಿದರು. ಸುಬ್ಬಣ್ಣ ಗಾಭರಿಯಿಂದ ಎದ್ದು ಕುಳಿತರು. "ಏನಾಯ್ತೇ! ಏಕೆ ಎಬ್ಬಿಸಿದೆ!" ಎಂದು ಕಾತರರಾಗಿ ಕೇಳಿದರು. "ಅಯ್ಯೋ ಬೇಗ ಏಳೀಂದ್ರೆ: ಶಾರದೆ ನೋವುತಿಂತಿದ್ದಾಳೆ. ಹತ್ತಿರ ಯಾವ ಸೂಲಗಿತ್ತಿಯೂ ಇಲ್ಲ. ಆಸ್ಪತ್ರೆಗೆ ಹೋಗಬೇಕಾಗತ್ತೋ ಏನೋ. ಈ ಅವೇಳೆಯಲ್ಲಿ ಗಾಡಿಯೆಲ್ಲಿ ಸಿಗತ್ತೆ. ನನಗೆ ಕೈಕಾಲೇ ಆಡೋಲ್ಲ" ಎಂದರು ಭಾಗ್ಯಮ್ಮ.

"ಈಗ ನನ್ನನ್ನೇನುಮಾಡಂತೀ. ಬೆಳಗಾಗಲಿ. ಹೋಗಿ ಗಾಡೀ ಕರಕೊಂಡು ಬರ್ತೀನಿ. ಶಾರದೆಯನ್ನ ಅಸ್ಪತ್ರೆಗೆ ಕರಕೊಂಡು ಹೋಗೋಣ. ಈಗ ಸ್ವಸ್ಥವಾಗಿ ಹೋಗಿ ಮಲಕ್ಕೊ" ಎಂದು ಹೇಳಿ ಸುಬ್ಬಣ್ಣ ಮುಸು ಕೆಳೆದು ಮಲಗಿಬಿಟ್ಟರು. ಆಗ ಭಾಗ್ಯಮ್ಮನವರಿಗೆ ನಿಶ್ಚಿಂತೆಯಾಗಿರಲು ಸಾಧ್ಯವಾದೀತೇ. ದೇವರಮನೆಗೆ ಹೋಗಿ ನಂದಾದೀಪ ಹಚ್ಚಿಟ್ಟರು. ಮಂದಾಸನದ ಮುಂದೆ ಅಡ್ಡಬಿದ್ದು "ಸದ್ಯ ಶಾರದೆಯ ಹೆರಿಗೆ ಸುಸೂತ್ರವಾಗಿ ಆಗಿಹೋಗಲಿ ದೇವರೇ" ಎಂದು ಪ್ರಾರ್ಥನೆ ಸಲ್ಲಿಸಿದರು. ಹೋಗಿ ತಮ್ಮ ಮಗಳಪಕ್ಕದಲ್ಲಿ ಕೂತುಕೊಂಡರು. ಶಾರದೆಗಾಗಲೇ ನೋವು ಜಾಸ್ತಿಯಾಗಿ ಹೋಗಿತ್ತು. ಅವಳ ಮುಲುಗಾಟವನ್ನು ಕೇಳಿ ಭಾಗ್ಯಮ್ಮ ಭಯಪಟ್ಟು ಹೋದರು. "ಏನಮ್ಮಾ ಶಾರದಾ ಸ್ವಲ್ಪ ಹಾಲುಕುಡೀತೀಯಾ ತಾಯೀ. ಇಲ್ಲಾ ಒಂದಿಷ್ಟು ಕಾಫೀ ಕಾಸಿ ಕೊಡಲೇ ಹೇಳು" ಎಂದು ಕೇಳಿದರು. ತನಗೇನೂ ಬೇಡವೆಂದು ತಲೆಯಲ್ಲಾಡಿಸಿದಳು ಶಾರದೆ. ಎಲ್ಲೋ ದೂರದಲ್ಲಿ ಕೊಕ್ಕೊಕ್ಕೋ ಎಂದು ಕೋಳಿಯ ಕೂಗು ಕೇಳಿಸಿತು ಭಾಗ್ಯಮ್ಮನವರಿಗೆ. ಕೂಡಲೇ ಅವರೆದ್ದುಹೋಗಿ ನೀರೊಲೆ ಉರಿಹಾಕಿದರು. "ಏಳೀಂದ್ರೆ. ಬೆಳಗಾಗಿಹೋಯಿತು. ಶಾರದೆಗೆ ನೋವು ಜಾಸ್ತಿಯಾಗಿಹೋಗಿದೆ" ಎಂದು ತಮ್ಮ ಯಜಮಾನರನ್ನೆಬ್ಬಿಸಿದರು. ಸುಬ್ಬಣ್ಣ "ಹರೇರಾಮ-ಹರೇಕೃಷ್ಣ" ಎನ್ನುತ್ತಾ ಕಣ್ಣುಜ್ಜಿಕೊಂಡು ಎದ್ದು ಕೂತರು. ಅವರೆದ್ದಕೂಡಲೇ ಭಾಗ್ಯಮ್ಮ ಹಾಸಿಗೆಯನ್ನು ಸುರುಳಿಸುತ್ತಿದರು. ಬೇಗ ಒಂದಿಷ್ಟು ಕಾಫಿ ಮಾಡಿದರು. ತಮ್ಮ ಯಜಮಾನರಿಗೊಂದು ಲೋಟಾ ಕೊಟ್ಟು ತಾವೂ ಕುಡಿದರು. ಶಾರದೆಗೂ ಬಲವಂತಮಾಡಿ ಒಂದಿಷ್ಟು ಕಾಫಿ ಕುಡಿಸಿದರು.

ಅಷ್ಟು ಹೊತ್ತಿಗೆ ಸುಬ್ಬಣ್ಣ ಗಾಡಿತಂದರು. ಗಂಡಹೆಂಡಿರಿಬ್ಬರೂ ಮಗಳನ್ನು ಕೈಹಿಡಿದು ಬೀದಿಯ ಬಾಗಿಲವರೆಗೂ ಕರೆದುಕೊಂಡು ಹೋದರು. ಶಾರದೆಗೆ ಗಾಡಿಹತ್ತಿ ಕೂಡುವುದೇ ಬಹಳ ಪ್ರಯಾಸವಾಗಿ ಹೋಯಿತು. ಒಂದರ್ಧ ಗಂಟೆಯಲ್ಲೆಲ್ಲಾ ಗಾಡೀ ಹೆರಿಗೆಯಾಸ್ಪತ್ರೆ ತಲುಪಿತು. ಆಗಿನ್ನೂ ಏಳು ಗಂಟೆ. ಲೇಡೀ ಡಾಕ್ಟರು ಬಂದಿರಲಿಲ್ಲ. ಸುಬ್ಬಣ್ಣ ಡ್ಯೂಟೀ ನರ್ಸಿಗೆ ಹೇಳಿ ಶಾರದೆಯನ್ನು ಲೇಬರ್ ವಾರ್ಡಿನಲ್ಲಿ

ಮಲಗಿಸಿದರು. ಲೇಡೀ ಡಾಕ್ಟರ ದಾರಿಕಾಯುತ್ತ ಕೂತರು. ಎಂಟು ಗಂಟೆಗೆ ಸರಿಯಾಗಿ ಡಾಕ್ಟರು ಬಂದರು ಬರುತ್ತಿದ್ದ ಹಾಗೆಯೇ ಭಾಗ್ಯಮ್ಮ ನವರನ್ನು ನೋಡಿ, "ಏನು ಭಾಗ್ಯಮ್ಮ ನಿಮ್ಮ ಮಗಳನ್ನ ಕರಕೊಂಡು ಬಂದಿದ್ದೀರಾ. ಆಕೆಗೆ ನೋವು ಶುರುವಾಗಿದೆಯೇ" ಎಂದು ಕೇಳಿದರು.

"ಹೌದಮ್ಮಾ. ಪಾಪ ರಾತ್ರಿ ನಾಲ್ಕು ಗಂಟೆಯಿಂದಾ ನೋವು ತಿಂತಿದ್ದಾಳೆ. ಇದೇ ಚೊಚ್ಚಲು ಹೆರಿಗೆ. ನಮಗೆಲ್ಲಾ ವಿಪರೀತ ಗಾಭರಿ ಯಾಗಿದೆ," ಎಂದರು ಭಾಗ್ಯಮ್ಮ.

"ಪರವಾಗಿಲ್ಲಮ್ಮ. ನೀವ್ಯೇನೂ ಭಯಪಡಬೇಡಿ. ನಾನು ನೋಡಿ ಕೊಳ್ತೀನೆ". ಎನ್ನುತ್ತಾ ಡಾಕ್ಟರು ನೆಟ್ಟಗೆ ಲೇಬರ್ ವಾರ್ಡಿಗೇ ಹೋದರು.

ನರ್ಸ್ ಬಾಗಿಲು ಮುಚ್ಚಿದಳು. ಡಾಕ್ಟರು ಮಂಚದ ಮೇಲೆ ಮಲಗಿದ್ದ ಶಾರದೆಯನ್ನು ಪರೀಕ್ಷಿಸಿದರು. ಹೆರಿಗೆಯಾಗಲು ತಡವಾಗುವ ಹಾಗೆ ಅವರಿಗೆ ಕಂಡುಬರಲಿಲ್ಲ. ಆದ್ದರಿಂದ ವಾರ್ಡುಗಳಿಗೆ ಹೋಗದೇ ಅಲ್ಲೇ ನಿಂತರು. ಸ್ವಲ್ಪ ಹೊತ್ತಿಗೆಲ್ಲಾ ಯಾವ ಪ್ರಯಾಸವೂ ಇಲ್ಲದೆ ಶಾರದೆ ಹೆತ್ತುಬಿಟ್ಟಳು. "ವರ್ ವರ" ಎಂದು ಎಳೇ ಮಗುವೊಂದು ಅಳುತ್ತಿರುವುದು ಹೊರಗಡೆ ಕೂತಿದ್ದ ಭಾಗ್ಯಮ್ಮನವರಿಗೆ ಕೇಳಿಸಿತು. ಕೂಡಲೇ ಅವರ ಮುಖ ಹಿಗ್ಗಿಹೋಯಿತು. ಸಮೀಪದಲ್ಲೇ ಕೂತಿದ್ದ ತಮ್ಮ ಯಜಮಾನರ ಹತ್ತಿರ ಹೋಗಿ "ಶಾರದೆ ಹೆತ್ತುಬಿಟ್ಟಳೊಂದ್ರೆ. ಮಗೂ ಅಳ್ತಿರೋದು ಕೇಳಿಸ್ತಿದೆ" ಎಂದುಸಿರಿದರು. ತಮಗೊಬ್ಬ ಮೊಮ್ಮ ಗನೋ, ಮೊಮ್ಮಗಳೋ ಹುಟ್ಟಿದರೆಂಬ ಸಂತೋಷ ಸುಬ್ಬಣ್ಣನವರ ಮುಖದಲ್ಲಿ ಲಾಸ್ಯವಾಡಿತು.

*   *   *   *

"ಏನು ಶಾರದಮ್ಮಾ ನಿನಗೆ ಎಂಥಾ ಮಗೂ ಬೇಕಮ್ಮಾ!"

"ಯಾವುದಾದರೂ ಪರವಾಗಿಲ್ಲ ಸರೋಜಮ್ಮ. ಸದ್ಯ ದೇವರ ದಯದಿಂದ ಇಷ್ಟು ಸಲೀಸಾಗಿ ಹೆರಿಗೆಯಾಯ್ತಲ್ಲ"

"ಗಂಡು ಮಗೂ ಬೇಕೋ ಹೆಣ್ಣು ಮಗೂ ಬೇಕೋ ಹೇಳಮ್ಮಾ."

"ಯಾವುದಾದರೂ ಸಂತೋಷವೇ ಸರೋಜಮ್ಮ."

"ಹೆಣ್ಣು ಹುಟ್ಟಿದರೆ ಎಷ್ಟೋ ತಾಯಿಯರು ಬಹಳ ನೊಂದು ಕೊಳ್ತಾರೆ. ನಿನಗೇನೂ ಹಾಗಿಲ್ಲವೇ ಶಾರದಮ್ಮ."

"ಇಲ್ಲಾ ಸರೋಜಮ್ಮ. ಗಂಡು ಗಂಡೂಂತ ನಾವು ಹಿಗ್ಗೋದಷ್ಟೆ. ಹೆತ್ತ ತಂದೇ ತಾಯಿಗಳಿಗೆ ಕಡೆಗಾಲದಲ್ಲಿ ಗಂಡು ಮಕ್ಕಳು ಮಾಡೋದು ಅಷ್ಟರಲ್ಲೇ ಇದೆ. ಹೆಣ್ಣು ಮಕ್ಕಳು ಹಾಗಲ್ಲ. ಅವರು ಒಂದೇ ರೀತಿ ಯಾಗಿರ್ತಾರೆ. ಕಷ್ಟಾ ಸುಖಕ್ಕಾಗುವವರು ಹೆಣ್ಣು ಮಕ್ಕಳೇ."

"ಹಾಗಾದ್ರೆ ನಿನಗೆ ಗಂಡು ಮಗುವೇ ಹುಟ್ಟಿದೆಯಲ್ಲಾ ಶಾರದಮ್ಮ!"

"ಗಂಡು ಹುಟ್ಟಿದೆಯೇ! ಎಲ್ಲೀ ತೋರಿಸೀ ಸರೋಜಮ್ಮ!!"

ನರ್ಸ್ ಆಗ ತಾನೇ ತೊಳೆದು ಬೆಚ್ಚಗೆ ಬಟ್ಟೆ ಹೊದಿಸಿದ್ದ ಎಳೆಯ ಬೊಮಟೆಯೊಂದನ್ನು ಕೈಲಿ ಹಿಡಿದುಕೊಂಡು ಬಂದು ಶಾರದೆಗೆ ತೋರಿಸಿ ದಳು. ಮಗು ಬಹಳ ಮುದ್ದಾಗಿತ್ತು. ತಲೆ ತುಂಬ ಕೂದಲು. ಪಿಳಿಪಿಳಿ ಎಂದು ಪುಟ್ಟ ಕಣ್ಣುಗಳನ್ನು ಮಿಟಕಿಸುತ್ತಿತ್ತು. ತನ್ನ ಮಗುವನ್ನು ನೋಡಿ ಶಾರದೆಗೆ ತುಂಬ ಸಂತೋಷವಾಯಿತು. ನಾನು ತಾಯಿಯಾದೆನಲ್ಲಾ ಎಂಬ ಹೆಮ್ಮೆ ಅವಳ ಮುಖದಲ್ಲಿ ಮೂಡಿತು.

ಲೇಡೀ ಡಾಕ್ಟರು ನರ್ಸಿಗೆ ಎಲ್ಲಾ ಸೂಚನೆಗಳನ್ನೂ ಕೊಟ್ಟು ವಾರ್ಡುಗಳ ಇನ್ಸ್‌ಪೆಕ್ಷನ್ನಿಗೆ ಹೊರಟು ಹೋದರು. ಶಾರದೆ ಪಕ್ಕದಲ್ಲಿ ತನ್ನ ಪುಟ್ಟ ಮಗನನ್ನು ಮಲಗಿಸಿಕೊಂಡು ಆನಂದಿಸತೊಡಗಿದಳು.

* * * *

ಶಾರದೆ ಹೆತ್ತ ಹನ್ನೊಂದನೆಯ ದಿನ. ಇಡೀ ರಾತ್ರಿಯೆಲ್ಲಾ ನಿದ್ದೆ ಗೆಟ್ಟಿದ್ದರು ಭಾಗ್ಯಮ್ಮ. ನಾಲ್ಕು ಗಂಟೆಗೆಲ್ಲಾ ನೀರೊಲೆ ಉರಿ ಹಾಕಿ ಬಿಟ್ಟರು. ಅಂದಿನಡಿಗೆಗೆ ತರಕಾರಿ ಹಚ್ಚಿಟ್ಟುಕೊಂಡರು. ಕಾಯಿ ತುರಿ ದಿಟ್ಟುಕೊಂಡರು. ಬೆಳಗಾದೀತೇ ಎಂದು ಎದುರು ನೋಡುತ್ತಿದ್ದರು. ಬೆಳಗಾಯಿತು. ಸುಬ್ಬಣ್ಣ ಗಾಡಿ ತಂದರು. ದಂಪತಿಗಳಿಬ್ಬರೂ ಮಗಳನ್ನು ಕರೆತರಲು ಆಸ್ಪತ್ರೆಗೆ ಹೋದರು.

ಶಾರದೆಯನ್ನು ಆಸ್ಪತ್ರೆಯಿಂದ ಡಿಸ್ಚಾರ್ಜ್ ಮಾಡಿಸಿಕೊಂಡು ಬರು ವುದು ಹೆಚ್ಚು ಹೊತ್ತು ಹಿಡಿಯಲಿಲ್ಲ. ಎಲ್ಲವೂ ಸುಸೂತ್ರವಾಗಿ ನಡೆದು

ಹೋಯಿತು. ಎಂಟು ಗಂಟೆಗೆಲ್ಲಾ ಮಗೂ ಬಾಣಂತಿ ಮನೆಗೆ ಬಂದು ಬಿಟ್ಟರು.

ಭಾಗ್ಯಮ್ಮ ಬಹಳ ಸಂಭ್ರಮದಿಂದ ಮಗೂ ಬಾಣಂತಿಗೆ ನೀರು ಹಾಕಿದರು. ಕಮಲೂ ತಾಯಿಯ ಜತೆಯಲ್ಲಿ ನಿಂತು ಎಲ್ಲ ಕೆಲಸಗಳನ್ನೂ ನಿರ್ವಹಿಸುತ್ತಿದ್ದಳು.

ಸುಬ್ಬಣ್ಣ ಬೀದಿಯ ಬಾಗಿಲಲ್ಲೇ ನಿಂತಿದ್ದರು. ಅಂದು ಬೆಳಿಗ್ಗೆಯ ರೈಲಲ್ಲಿ ಬೆಂಗಳೂರಿಂದ ಶಾರದೆಯ ಗಂಡ ಬರುವ ನಿರೀಕ್ಷಣೆಯಿತ್ತು. ಮಾವನವರಿಂದ ನಾಮಕರಣಕ್ಕೆ ಬರಬೇಕೆಂದು ನಿಮಂತ್ರಣವೂ ಹೋಗಿತ್ತು. ರಾಘಣ್ಣ ಭಾವನನ್ನು ಎದುರುಗೊಂಡು ಮನೆಗೆ ಕರೆತರಲು ಸ್ಟೇಷನ್ನಿಗೆ ಹೋಗಿದ್ದ. ರೈಲು ಬಂದೂ ಆಯಿತು. ಹೋಗೀ ಆಯಿತು. ಆದರೆ ಭಾವ ಬರಲಿಲ್ಲ. ರಾಘಣ್ಣ ಪೆಚ್ಚುಮೋರೆ ಹಾಕಿಕೊಂಡು ಮನೆಗೆ ಬಂದ.

ಬೀದಿಯ ಬಾಗಿಲಲ್ಲೇ ನಿಂತಿದ್ದ ಸುಬ್ಬಣ್ಣ ಕಾತರರಾಗಿ, “ನಿಮ್ಮ ಭಾವಾ ಬರಲಿಲ್ಲವೇ ರಾಘಣ್ಣಾ?” ಎಂದು ಕೇಳಿದರು.

“ಇಲ್ಲಣ್ಣಾ. ಮೊದಲಿಂದಲೂ ಹಿಡಿದು ಕಡೇ ಗಾಡೀ ತನಕ ನಾಲ್ಕು ಸಲ ಓಡಾಡಿದೆ. ಭಾವ ಬಂದ ಹಾಗೆ ಕಾಣಲಿಲ್ಲ.”

“ಸರಿ ಹಾಗಾದರೆ. ಬಂದಕ್ಕೆರಡು ಕಾಗದವನ್ನೇನೋ ಬರದಾಯಿತು. ಅವನಿಗಿಷ್ಟವಿಲ್ಲದಿದ್ರೆ ನಾವೇನು ಮಾಡೋಕ್ಕಾಗತ್ತೇ” ಎನ್ನುತ್ತಾ ಸುಬ್ಬಣ್ಣ ಒಳಕ್ಕೆ ಹೊರಟು ಹೋದರು. ತನ್ನ ತಂದೆಯಾಡಿದ ಮಾತುಗಳು ಆಗ ತಾನೇ ನೀರು ಹಾಕಿಕೊಂಡು ಕೊಠಡಿಯಲ್ಲಿ ಕುಳಿತಿದ್ದ ಶಾರದೆಯ ಕಿವಿಗೆ ಬಿತ್ತು. ಅವಳು ನಿರಾಶೆಯಿಂದ ನಿಟ್ಟುಸಿರಿಟ್ಟಳು. ತನ್ನ ಗಂಡನ ವರ್ತನೆ ಕಂಡು ಬಹಳವಾಗಿ ನೊಂದುಕೊಂಡಳು. “ಅಪರೂಪಕ್ಕೆ ಗಂಡು ಮಗು ವಾಗಿದೆ. ಅದೂ ಚೊಚ್ಚಲು ಮಗು. ಲೋಕಾರೂಢಿಯಾಗಿ ಬಂದು ಲಕ್ಷಣವಾಗಿ ನಾಮಕರಣ ಮಾಡಿಕೊಂಡು ಹೋಗಬಾರದೇ” ಎಂದು ಪೇಚಾಡಿಕೊಂಡಳು. ಪುನಃ ಏನನ್ನೋ ನೆನಸಿಕೊಂಡು, “ಅವರಿಗೆ ನನ್ನ ಮೇಲೆ ಪ್ರೀತಿ ಇದ್ದಿದ್ದರೆ ನನ್ನ ಗತಿ ಹೀಗೇಕಾಗುತ್ತಿತ್ತು. ಅವರಿಗೆ ನಾನು ಬೇಡವಾಗಿದ್ದೇನೆ. ಸದ್ಯ ನಾನಿಷ್ಟು ಮಾತ್ರ ಅವರ ಕಣ್ಮರೆಯಾಗಿರುವುದು ಅವರಿಗೊಂದು ದೊಡ್ಡ ಭಾಗ್ಯವಾಗಿದೆ. ಮುಖ್ಯ ಗಂಡನಿಗೇ ಬೇಡವಾದ

ವಸ್ತುವಾದ ಮೇಲೆ ಬದುಕಿದ್ದು ಏನು ಪ್ರಯೋಜನ" ಎಂದು ನೊಂದು ಕೊಂಡಳು. ಅಷ್ಟು ಹೊತ್ತಿಗೆ ಕಮಲೂ ಒಂದು ತಟ್ಟೆಯಲ್ಲಿ ಕೆಂಡ ತಂದಳು. ಅದರಲ್ಲಿ ಸಾಂಬ್ರಾಣಿ ಹಾಕಿ ದೊಡ್ಡದೊಂದು ಬುಟ್ಟಿಯನ್ನು ಬೋರಲು ಹಾಕಿದಳು. ತನ್ನಕ್ಕನಿಗೆ, "ಇನ್ನು ನೀನು ತಲೇ ಕಾಸಿಕೊಳ್ಳಕ್ಕ. ಕಾಫೀ ತಂದುಕೊಡ್ತೀನಿ" ಎಂದು ಹೇಳಿ ಹೊರಟು ಹೋದಳು. ಶಾರದೆ ತನ್ನ ತಲೆಗೂದಲನ್ನು ಬುಟ್ಟಿಯ ಮೇಲೆ ಹರವಿದಳು.

ಅಳಿಯ ಖಂಡಿತ ಬಂದೇ ಬರುತ್ತಾನೆಂಬ ಭರವಸೆಯಿಂದ ಸುಬ್ಬಣ್ಣ ನಾಮಕರಣದ ಏರ್ಪಾಡುಗಳೆಲ್ಲವನ್ನೂ ಸಾಂಗವಾಗಿ ಮಾಡಿ ಬಿಟ್ಟಿದ್ದರು. ಸ್ವಲ್ಪ ಹೊತ್ತಿಗೆಲ್ಲಾ ಪುರೋಹಿತರು ಬಂದು ನಾಮಕರಣದ ಸಿದ್ಧತೆಗಳಲ್ಲಿ ತೊಡಗಿದರು. ಅಲ್ಲೇ ಓಡಾಡುತ್ತಿದ್ದ ಸುಬ್ಬಣ್ಣನವರನ್ನು ಕುರಿತು, "ಇನ್ನು ನಿಮ್ಮಳಿಯಂದಿರೂ ಮಗಳೂ ಹಸೇಮೇಲೆ ಬಂದು ಕೂಡಬಹುದು ರಾಯರೇ" ಎಂದರು. ಸುಬ್ಬಣ್ಣ ದೊಡ್ಡದೊಂದು ನಿಟ್ಟುಸಿರ್ಗರೆದು, "ಅಯ್ಯೋ ನಾನಾ ಪುಣ್ಯ ಕೇಳಿಕೊಂಡು ಬರಲಿಲ್ಲ ಆಚಾರ್‍ರೇ. ನಮ್ಮಳಿಯ ಏಕೋ ಬರಲಿಲ್ಲ. ಹಾಗೆ ಬರೋಕ್ಕಾಗೋಲ್ಲಾಂತ ಕಾಗದವನ್ನೂ ಬರೀಲಿಲ್ಲ."

"ಅದ್ಯಾಕೆ ರಾಯರೇ. ಲಕ್ಷಣವಾಗಿ ಇದೇ ಚೊಚ್ಚಲು ಮಗೂ ಅವರಿಗೆ, ನಾಮಕರಣಕ್ಕೆ ಬರದೇ ಇರೋದೊಂದ್ರೇನು!"

"ನನಗೇನು ಗೊತ್ತು ಆಚಾರ್‍ರೇ. ಅವರಿಗೆ ನಮ್ಮ ಮೇಲೇನಸಮಾಧಾನವೋ!"

"ನಿಮ್ಮ ಮಗಳೊಬ್ಬಳೇ ಬಂದು ಕೂತ್ಕೊಳ್ಳಲಿ. ಜತೆಗೆ ನೀವಿಬ್ಬರೂ ಇದ್ದೇ ಇದ್ದೀರಲ್ಲಾ."

"ಶಾರದಾ ಬರ್ತೀಯಾಮ್ಮಾ" ಎಂದರು ಸುಬ್ಬಣ್ಣ.

"ಬರ್ತೀನಣ್ಣಾ..............." ಎಂದುತ್ತರ ಬಂತು.

ಶಾರದೆ ಒಪ್ಪವಾಗಿ ಮಣೆಯ ಮೇಲೆ ಬಂದುಕೂತಳು. ತನಗೆ ಮದುವೆಯಲ್ಲಿ ಕೊಟ್ಟಿದ್ದ ಧರ್ಮಾವರದ ಸೀರೆಯನ್ನುಟ್ಟಿದ್ದಳು. ಆ ದಿನ ಇರಬೇಕಾಗಿದ್ದ ಸಂತೋಷ, ಸಂಭ್ರಮಗಳು ಅವಳ ಪಾಲಿಗಿರಲಿಲ್ಲ. ಅವಳ ಹೃದಯದಲ್ಲಿ ಯಾವ ಸಂತಸಕ್ಕೂ ಎಡೆಯಿರಲಿಲ್ಲ. ಅವಳ ತೇಜೋ

ಹೀನವಾದ ಮುಖ ಅತಿದಾರುಣವಾದ ಮನೋವ್ಯಥೆಯನ್ನು ಪ್ರತಿ ಬಿಂಬಿಸಿತ್ತು. ಪುರೋಹಿತರು ತಮ್ಮ ಕಾರ್ಯವನ್ನು ಸಾಂಗವಾಗಿ ನೆರವೇರಿಸಿದರು. ಭಾಗ್ಯಮ್ಮ ಮಗಳಿಗುಡುಗೊರೆಯಾಗಿ ಹತ್ತು ರೂಪಾಯಿ ಓದಿಸಿದರು. ಎಲ್ಲಾ ಮುಗಿದ ಮೇಲೆ ಶಾರದೆ ಎದ್ದು ದೇವರ ಮನೆಗೆ ಹೋಗಿ ದೇವರಿಗೆ ನಮಸ್ಕಾರ ಮಾಡಿದಳು. ಬಳಿಕ ತನ್ನ ತಂದೆತಾಯಿಗಳಿಗೆ ನಮಸ್ಕರಿಸಿದಳು. ತನ್ನ ಕೊಠಡಿಗೆ ಹೊರಟು ಹೋದಳು.

ಹನ್ನೆರಡು ಗಂಟೆಗೆಲ್ಲಾ ಹಬ್ಬದಡಿಗೆ ಆಗಿಹೋಯಿತು. ಕಮಲೂ ಎಲ್ಲರಿಗೂ ಎಲೇ ಹಾಕಿದಳು. ಭಾಗ್ಯಮ್ಮ ಬಡಿಸಿದರು. ಎಲ್ಲರ ಊಟವಾದ ನಂತರ ತಾವು ಬಡಿಸಿಕೊಂಡು ಕೂತರು. ಊಟವಾದ ನಂತರ ಭಾಗ್ಯಮ್ಮ ಸ್ವಲ್ಪವೂ ಸುಧಾರಿಸಿಕೊಳ್ಳಲಿಲ್ಲ. ಸಂಜೆಯ ತೊಟ್ಟಿಲು ಹಾಕುವ ಸಮಾರಂಭಕ್ಕಾಗಿ ಸಂಭ್ರಮದಿಂದ ಸಿದ್ಧತೆಗಳನ್ನು ಮಾಡಿಕೊಳ್ಳತೊಡಗಿದರು.

ಅಷ್ಟುಹೊತ್ತಿಗೆ "ಪೋಸ್ಟ್" ಎಂದು ಅಂಚೆಯಾಳು ಬೀದಿಯ ಬಾಗಿಲಲ್ಲಿ ಕೂಗಿದ. ಸಂಜೆಯ ಆರತಕ್ಷತೆಗೆ ಹಾಲನ್ನು ಶೃಂಗಾರ ಮಾಡುತ್ತಿದ್ದ ಭಾಗ್ಯಮ್ಮ ಹೋಗಿ ಕಾಗದವನ್ನು ತೆಗೆದುಕೊಂಡರು. ಕನ್ನಡದಲ್ಲೇ ಮೇಲ್ವಿಳಾಸ ಬರೆದಿತ್ತು. ಬರೆಹ ಬಹಳ ಮುದ್ದಾಗಿತ್ತು. ಕಾಗದ ತಮ್ಮ ಹೆಸರಿಗೇ ಇತ್ತು. ಭಾಗ್ಯಮ್ಮನವರಿಗಾಶ್ಚರ್ಯವಾಯಿತು. ಅಷ್ಟರಲ್ಲಿ ಅಂಚೆಯಾಳು, "ನಿಮ್ಮ ಹೆಸರಿಗೊಂದು ಮನಿಯಾರ್ಡರೂ ಬಂದಿದೆಯಮ್ಮಾ" ಎಂದು ತಿಳಿಸಿದ. ತಮಗೆ ಯಾರು ಮನಿಯಾರ್ಡರು ಮಾಡುವವರಿದ್ದಾರೆಂದು ಅವರಿಗೆ ಪರಮಾಶ್ಚರ್ಯವಾಗಿ ಹೋಯಿತು. ಏನೂ ತೋಚದೆ, "ಕಮಲೂ, ಕಮಲೂ, ಸ್ವಲ್ಪ ಬಾರೇ ಇಲ್ಲಿ" ಎಂದು ಕರೆದರು. ಒಳಗಡೆ ಕೊಠಡಿಯಲ್ಲಿ ತನ್ನಕ್ಕನೊಡನೆ ಚಕ್ಕಂದವಾಡುತ್ತಿದ್ದ ಕಮಲೂ, 'ಏನಮ್ಮಾ ಕರೆದೆ' ಎಂದು ಓಡಿ ಬಂದಳು.

"ಯಾವುದೋ ಮನಿಯಾರ್ಡರು ಬಂದಿದೆಯಂತೆ. ಎಲ್ಲೀದು ನೋಡೇ." ಕಮಲೂ ಮನಿಯಾರ್ಡರ್ ಫಾರಮ್ಮನ್ನು ಕೈಗೆತೆಗೆದುಕೊಂಡು ಓದಿನೋಡಿದಳು.

"ಮೈಸೂರಿಂದ ಸುಶೀಲಮ್ಮ ಕಳಿಸಿದ್ದಾರಮ್ಮ. ಇಪ್ಪತ್ತು ರೂಪಾಯಿ ಮನಿಯಾರ್ಡರು ಮಾಡಿದ್ದಾರೆ. ವಿವರಗಳಿಗೆ ಕಾಗದ ಬರೆದಿದ್ದೇನೆಂತ ಮನಿಯಾರ್ಡರ್ ಕೂಪನ್ನಲ್ಲಿ ಬರೆದಿದ್ದಾರೆ."

"ಯಾರ ಹೆಸರಿಗಿದೆಯೇ ಮನಿಯಾರ್ಡರು ?"

"ನಿನ್ನ ಹೆಸರಿಗೇಮ್ಮ ಪೆನ್ನು ತಂದುಕೊಡ್ತೀನಿ. ಇದರಲ್ಲಿ ಸೈನು ಮಾಡಿಕೊಡು."

ಕಮಲೂ ಓಡಿಹೋಗಿ ಪೆನ್ನುತಂದುಕೊಟ್ಟಳು. ಮನಿಯಾರ್ಡರು ಮೂಲಕ ಹಣ ಪಡೆಯುತ್ತಿರುವುದು ಭಾಗ್ಯಮ್ಮ ಅದೇ ಮೊದಲು. ಅವರಿಗೆ ಸ್ವಲ್ಪ ತಬ್ಬಿಬ್ಬಾಯಿತು. ಕಮಲೂ ತೋರಿಸಿದ ಕಡೆಗಳಲ್ಲಿ ತಮ್ಮ ಹೆಸರು ಬರೆದರು. ಅಂಚೆಯಾಳು ಹತ್ತು ರೂಪಾಯಿಗಳ ಎರಡು ನೋಟುಗಳನ್ನು ಅವರ ಕೈಗಿತ್ತು ಹೊರಟು ಹೋದ. ತಾಯಿಮಗಳಿಬ್ಬರೂ ಸಂತೋಷದಿಂದ ಉಬ್ಬಿ ಹೋದರು.

"ಮೊದಲು ಕಾಗದಾ ಓದಿಹೇಳು ಕಮಲೂ-ಏನು ಬರೆದಿದ್ದಾರೋ ಸುಶೀಲಮ್ಮ'' ಎಂದವಸರಿಸಿದರು ಭಾಗ್ಯಮ್ಮ. ಕಮಲೂ ಮಡಿಸಿದ್ದ ಕಾಗದವನ್ನು ಬಿಚ್ಚಿ ಓದತೊಡಗಿದಳು.

ಕ್ಷೇಮ ಶ್ರೀ ಮೈಸೂರು.

ಹ|| ಕು|| ಶೋಭಿತರಾದ ಭಾಗ್ಯಮ್ಮನವರಿಗೆ ಸುಶೀಲಮ್ಮ ಮಾಡುವ ಅನೇಕ ಸಾಷ್ಟಾಂಗ ನಮಸ್ಕಾರಗಳು. ನಿಮ್ಮ ಮಗಳು ಗಂಡು ಮಗೂ ಹಡೆದ ಶುಭ ಸಮಾಚಾರ ತಿಳಿದು ಬಹಳ ಸಂತೋಷವಾಯಿತು. ಮಗೂ ಬಾಣಂತಿಯರು ಆರೋಗ್ಯವಾಗಿರುತ್ತಾರೆಂದು ನಂಬುತ್ತೇನೆ. ಎಂಟು ಹತ್ತು ವರ್ಷಗಳಿಂದ ಒಂದೇ ಊರಿನಲ್ಲಿ ಒಂದೇ ಮನೆಯವರಂತೆ ಇದ್ದು ಈಗ ನಿಮ್ಮನ್ನೆಲ್ಲಾ ಬಿಟ್ಟುಬಂದಿರುವುದು ನಮಗೆ ಬಹಳ ಬೇಜಾರಾಗಿದೆ. ಆದರೆ ಯತ್ನವಿಲ್ಲ. ನನ್ನ ಮನಸ್ಸೆಲ್ಲಾ ಅಲ್ಲೇ ಇದೆ. ಶಾರದೆಯ ಪುಟ್ಟ ಮಗನನ್ನ ನೋಡಬೇಕೆಂದು ಬಹಳ ಆಶೆಯಾಗಿದೆ. ನಮ್ಮ ಅಹಲ್ಯೆಯಂತೂ ನಿಮ್ಮ ಮಗಳನ್ನು ನೆನೆಯದ ದಿನವೇ ಇಲ್ಲ. "ಶಾರದಮ್ಮ ಅದೆಷ್ಟು ಒಳ್ಳೆಯವರು. ಅದೆಷ್ಟ ಮಾನಾಪ್ತೆಯಾದ ಹೆಂಗಸು' ಎಂದು ದಿನಕ್ಕೆ ನೂರು ಸಲ ನಿಮ್ಮ ಮಗಳನ್ನ ನೆನೆಸಿಕೊಳ್ಳು

ತ್ತಿರ್ತ್ತಾಳೆ. ನಾಳೆ ನಿಮ್ಮ ಮನೇಲಿ ನಾಮಕರಣ ಸಮಾರಂಭ. ಈ ಸಂದರ್ಭದಲ್ಲಿ ನಾನೂ ನಿಮ್ಮ ಮಧ್ಯದಲ್ಲಿದ್ದಿದ್ದರೆ ಅದೆಷ್ಟು ಚೆನ್ನಾಗಿರುತ್ತಿತ್ತು! ಚಿ|| ಸೌ|| ಶಾರದಮ್ಮನಿಗೆ ಹತ್ತು ರೂಪಾಯಿಗಳನ್ನೂ ನಿಮ್ಮ ಪುಟ್ಟ ಮೊಮ್ಮಗನಿಗೆ ಹತ್ತು ರೂಪಾಯಿಗಳನ್ನೂ ಕಳಿಸಿಕೊಟ್ಟಿದ್ದೇನೆ. ದೇವರ ದಯೆಯಿಂದ ಇಲ್ಲಿ ನಾವೆಲ್ಲರೂ ಆರೋಗ್ಯದಿಂದಿರುತ್ತೇವೆ. ಮನ್ನೆ ಸಂಗೀತ ಪರೀಕ್ಷೆಯ ರಿಸಲ್ಟ್ ಬಂತು. ನಮ್ಮ ಅಹಲ್ಯೆ ಫಸ್ಟ್‌ಕ್ಲಾಸಿನಲ್ಲಿ ಪ್ಯಾಸಾಗಿದ್ದಾಳೆ. ಅಲ್ಲಿ ನೀವೆಲ್ಲರೂ ಕ್ಷೇಮವೆಂದು ನಂಬುತ್ತೇನೆ. ಮಗು ಬಾಣಂತೀಯರ ಮತ್ತು ನಿಮ್ಮೆಲ್ಲರ ಕ್ಷೇಮಲಾಭಕ್ಕೂ ಇತರ ವಿಶೇಷ ಸಮಾಚಾರಗಳಿಗೂ ಆಗಾಗ್ಗೆ ಕಾಗದಾ ಬರೆಯುತ್ತಿರಬೇಕೆಂದು ಕೋರುತ್ತೇನೆ.

ಇನ್ನೇನೂ ವಿಶೇಷವಿಲ್ಲ.

ಇಂತೀ ನಮಸ್ಕಾರಗಳು.

ನಿಮ್ಮ ಪ್ರೀತಿಯ ತಂಗಿ.

'ಸುಶೀಲಮ್ಮ'

ಕಮಲೂ ಕಾಗದ ಓದಿ ಮುಗಿಸುವ ಹೊತ್ತಿಗೆ ಭಾಗ್ಯಮ್ಮನವರ ಕಣ್ಣುಗಳಲ್ಲಿ ಆನಂದಬಾಷ್ಪಗಳು ಸುರಿದು ಹೋಗುತ್ತಿದ್ದವು. "ಸುಶೀಲಮ್ಮ ಅದೆಷ್ಟು ಒಳ್ಳೇವರು. ತುಂಬಿದ ಕೊಡ ಆಕೆ. ನಮ್ಮನ್ನ ಕಂಡರೆ ಅದೆಷ್ಟು ವಿಶ್ವಾಸ ಆಕೆಗೆ. ಅವರನ್ನ ದೇವರು ಎಲ್ಲಾದರೂ ನೂರು ವರ್ಷ ಮುತ್ತೈದೇ ಸಾವಿತ್ರಿಯಾಗಿಟ್ಟಿರಲಿ" ಎಂದು ಬಾಯಿತುಂಬಾ ಹರಸಿದರು. ಕಮಲು ಅಷ್ಟು ಹೊತ್ತಿಗಾಗಲೇ ತನ್ನಕ್ಕನ ಹತ್ತಿರಕ್ಕೆ ಓಡಿಹೋಗಿ ಅವಳ ಕೈಗೆ ಕಾಗದವನ್ನಿತ್ತಿದ್ದಳು. ಕಾಗದವನ್ನೋದುತ್ತಿದ್ದ ಹಾಗೆಯೇ ಶಾರದೆಯ ಕಣ್ಣುಗಳಲ್ಲಿ ನೀರು ತುಂಬಿತು. ಸುಶೀಲಮ್ಮನ ಸೌಜನ್ಯಯುತವಾದ ಹಾಗೂ ತಾಯ್ತನದ ಅಚ್ಚೊತ್ತಿರುವ ದುಂಡುಮೊಗ ಅವಳ ಮನೋನೇತ್ರಗಳ ಮುಂದೆ ಬಂದು ನಿಂತಿತು. ಅವರು ತಮ್ಮ ಸಂಸಾರಕ್ಕೆ ಅದುವರೆಗೂ ಮಾಡಿರುವ ಉಪಕಾರ ಪರಂಪರೆಗಳು ಅವಳ ಸ್ಮರಣೆಗೆ ಬಂದು, ಅವಳ ಹೃದಯ ಅವರ ಬಗ್ಗೆ ಕೃತಜ್ಞತೆಯಿಂದ ತುಂಬಿ ಹೋಯಿತು.

ಐದುಗಂಟೆಯ ಹೊತ್ತಿಗೆ ಕಮಲೂ ಅರಶಿನಕುಂಕುಮಕ್ಕೆ ಕರೆಯಲು ಹೊರಟಳು. ಭಾಗ್ಯಮ್ಮನವರಂತೂ ನಿಮಿಷಕ್ಕೆ ನೂರುಸಲ, "ಇಷ್ಟೆಲ್ಲಾ ಮಾಡಿದರೂ ನನಗೆ ಸಮಾಧಾನವಿಲ್ಲ. ಸುಶೀಲಮ್ಮ ಇಲ್ಲದಿರೋದು ಬಿಮ್ಮೆಂತಲೇ ಇದೆ. ಪಾಪ ಅವರಿದ್ದಿದ್ದರೆ ಅದೆಷ್ಟು ಸಡಗರದಿಂದ ಮನೆ ತುಂಬಾ ಓಡಾಡುತ್ತಿದ್ದರೋ ಏನೋ" ಎಂದು ಪೇಚಾಡಿಕೊಳ್ಳುತ್ತಿದ್ದರು. ಆರುಗಂಟೆಯ ಹೊತ್ತಿಗೆ ಕರೆದಿದ್ದ ಮುತ್ತೈದೆಯರೆಲ್ಲಾ ಒಬ್ಬೊಬ್ಬರಾಗಿ ಬರತೊಡಗಿದರು. ಹಾಲೆಲ್ಲಾ ಭರ್ತಿಯಾಗಿಹೋಯಿತು. ನಾಲ್ಕೈದು ಮಂದಿ ತೊಟ್ಟಿಲಿಡುವ ಹಾಡು ಹೇಳಿದರು. ಪದ್ಧತಿಯಂತೆ ತೊಟ್ಟಲು ಹಾಕುವ ಶಾಸ್ತ್ರ ಸಾಂಗವಾಗಿ ನೆರವೇರಿತು. ಮಗುವಿಗೆ ವಿಜಯೇಂದ್ರನೆಂದು ನಾಮಕರಣವಾಯಿತು.

## ೨೨

ರಾತ್ರಿ ಹನ್ನೊಂದುಗಂಟೆ. ಅದೇತಾನೇ ತಾಲ್ಲೂಕು ಕಚೇರಿಯ ಗಂಟೆಬಾರಿಸಿದ್ದು, ಇನ್ನೂ ನಿದ್ದೆಬಾರದೆ ಹಾಸಿಗೆಯ ಮೇಲೆ ಹೊರಳಾಡು ತ್ತಿದ್ದ ಸುಬ್ಬಣ್ಣನವರಿಗೆ ಕೇಳಿಸಿತು. ಬೆಳಿಗ್ಗೆಯಿಂದ ರಾತ್ರಿಯತನಕ ನಿಮಿಷವೂ ಬಿಡುವಿಲ್ಲದಂತೆ ದುಡಿದು ದಣಿದಿದ್ದ ಭಾಗ್ಯಮ್ಮನವರಿಗೆ ಹಾಸಿಗೆಯ ಮೇಲೆ ಬಿದ್ದಕೂಡಲೇ ನಿದ್ದೆಯಾವರಿಸಿಬಿಟ್ಟಿತ್ತು. ಬಾಣಂತಿಯ ಕೊಠಡಿಯಲ್ಲಿ ಸಣ್ಣ ದೀಪವೊಂದು ಉರಿಯುತ್ತಿತ್ತು. ಕೊಠಡಿಯಲ್ಲಿ ಯಾರೋ ಮಾತಾಡುತ್ತಿದ್ದುದು ಸುಬ್ಬಣ್ಣನವರಿಗೆ ಕೇಳಿಸಿತು. ಶಾರದೆ ಇನ್ನೂ ಮಲಗಿಲ್ಲವೇ ಎಂದು ಸುಬ್ಬಣ್ಣ ಆಶ್ಚರ್ಯಚಕಿತರಾದರು. "ಇನ್ನೂ ನಿದ್ದೆಹತ್ತಲಿಲ್ಲವೇ ಶಾರದಮ್ಮಾ ನಿನಗೆ? ಏನಾದರೂ ಬೇಕಾದರೆ ಹೇಳು ತಾಯೀ, ತಂದುಕೊಡ್ತೇನೆ" ಎಂದರು ಸುಬ್ಬಣ್ಣ. ಅವರಂದುದಕ್ಕೆ ಶಾರದೆಯಿಂದ ಪ್ರತ್ಯುತ್ತರವೇನೂ ಬರಲಿಲ್ಲ. ಅವಳೇನೋ ತನ್ನಷ್ಟಕ್ಕೆ ತಾನು ಮಾತಾಡಿಕೊಳ್ಳುತ್ತಿದ್ದುದು ಅಲ್ಪಸ್ವಲ್ಪ ಸುಬ್ಬಣ್ಣನವರ ಕಿವಿಗೆಬಿತ್ತು. ಕೂಡಲೇ ಅವರೆದ್ದು ದೀಪಹಾಕಿ ನೆಟ್ಟಗೆ ಬಾಣಂತಿಯಕೊಠಡಿಗೆ ಹೋದರು.

ಶಾರದೆಯಾಗ ಹಾಸಿಗೆಯ ಮೇಲೆ ಮಲಗಿರಲಿಲ್ಲ. ತೊಟ್ಟಿಲಲ್ಲಿ ಮಲಗಿ ಸುಖವಾಗಿ ನಿದ್ದೆಮಾಡುತ್ತಿದ್ದ ಮಗುವನ್ನು ತನ್ನೆದೆಗವಚಿಕೊಂಡು

ಬಿಟ್ಟಿದ್ದಳು. ಅವಳ ದೃಷ್ಟಿಯೆಲ್ಲವೂ ಆ ಮಗುವಿನಲ್ಲಿ ಕೇಂದ್ರೀಕೃತವಾಗಿತ್ತು. ಏಕೋ ಒಂದೇ ಸಮನೆ ಅಳುತ್ತಿದ್ದಳು. ತಮ್ಮ ಮಗಳ ಸ್ಥಿತಿಯನ್ನು ಕಂಡು ಸುಬ್ಬಣ್ಣ ಗಾಬರಿಗೊಂಡರು. ಹತ್ತಿರಹೋಗಿ, "ಏಕಮ್ಮಾ ಶಾರದಾ ಅಳ್ತಿದ್ದೀಯ? ಏನಾಯಿತು ಹೇಳಮ್ಮ. ಮಗುವನ್ನೇಕೆ ಎತ್ತಿಕೊಂಡಿದ್ದೀಯ? ಮಗೂ ಮಲಗಿಕೊಂಡಿತ್ತಲ್ಲವೇ?" ಎಂದು ಕಾತರರಾಗಿ ಕೇಳಿದರು.

ಸುಬ್ಬಣ್ಣನವರಾಡಿದ ಮಾತುಗಳೊಂದೂ ಶಾರದೆಯ ಕಿವಿಗೆ ಹತ್ತಲೇ ಇಲ್ಲ. ಕೊಠಡಿಯಲ್ಲಿ ಯಾರಿದ್ದಾರೆ, ಯಾರಿಲ್ಲ ಎಂಬುದರ ಪರಿವೆಯೂ ಅವಳಿಗಿದ್ದಿರಲಿಲ್ಲ. ತನ್ನಷ್ಟಕ್ಕೆ ತಾನು ಏನೇನೋ ಬಡಬಡಿಸುತ್ತಿದ್ದಳು. ಒಂದೂ ಅರ್ಥವಾಗಲಿಲ್ಲ ಸುಬ್ಬಣ್ಣನವರಿಗೆ. ಅಷ್ಟೇ ಅಲ್ಲ. ಮುಂದೆ ಇನ್ನೂ ವಿಚಿತ್ರ ನಡೆಯಿತು.

"ಅಯ್ಯೋ ನಾನು ಆ ಮನೆಗೆ ಹೋಗೊಲ್ಲ. ಅವರು ರಾಕ್ಷಸರು. ಅವರು ನನ್ನ ಮಗುವನ್ನು ಕೊಂದುಬಿಡ್ತಾರೆ. ನಾನು ಖಂಡಿತಾ ಆ ನರಕದಲ್ಲಿ ಕಾಲಿಡೊಲ್ಲ. ಇಲ್ಲೇ ಇದ್ದು ಪ್ರಾಣ ಬಿಡ್ತೇನೆ! ನನ್ನ ಮಗು! ನನ್ನ ಕಂದ! ಅದು ಅವರದಂತೆ!! ಅಬ್ಬಾ! ಅವರಿಗೆಷ್ಟು ಧೈರ್ಯ!! ಅಯ್ಯೋ!! ಅಯ್ಯೋ!! ಅವರು ಬಂದೇ ಬಿಟ್ಟರಲ್ಲಾ!! ಅಯ್ಯೋ ನನ್ನ ಮಗೂನ ಕಿತ್ತುಕೊಂಡು ಹೋಗ್ತಾರಲ್ಲಾ!! ಅಯ್ಯೋ!! ಅಯ್ಯೋ!! ನನ್ನ ಮಗೂ! ನನ್ನ ಕಂದಾ!! ಹೋಗೇ ಬಿಟ್ಟನಲ್ಲಾ!!!" ಎಂದು ಪ್ರಲಾಪಿಸುತ್ತಾ ಶಾರದೆ ಮಗುವನ್ನು ಭದ್ರವಾಗಿ ತನ್ನೆದೆಗವಚಿಕೊಂಡು ಕೊಠಡಿಯಲ್ಲೆಲ್ಲಾ ಹುಚ್ಚಿಯಂತೆ ಓಡಾಡ ತೊಡಗಿದಳು.

ಸುಬ್ಬಣ್ಣನವರಿಗಂತೂ ಈ ದಾರುಣ ದೃಶ್ಯವನ್ನು ನೋಡಿ ಎದೆ ಝಲ್ಲೆಂದಿತು. ಕೈಕಾಲುಗಳಲ್ಲಿ ಚೇತನವುಡುಗಿ ಹೋಯಿತು. ಆದರೂ ಧೈರ್ಯ ತಂದುಕೊಂಡು, "ಶಾರದಾ! ಶಾರದಾ! ಅದ್ಯೇಕಮ್ಮಾ ಹಾಗೆ ಮಾಡ್ತೀ! ಒಂದ್ಕಡೇ ಕೂತ್ಕೋಮ್ಮ" ಎನ್ನುತ್ತಾ ತಮ್ಮ ಮಗಳ ರಟ್ಟೆ ಹಿಡಿದು ಬಲವಂತವಾಗಿ ಹಾಸಿಗೆಯ ಮೇಲೆ ಕೂಡಿಸಿದರು.

ಶಾರದೆಯಾಗ ತನ್ನ ತಂದೆಯ ತೊಡೆಯ ಮೇಲೆ ಬಿದ್ದು ಬಿಕ್ಕಿ ಬಿಕ್ಕಿ ಅಳತೊಡಗಿದಳು. ಶಾರದೆಯ ಪ್ರಲಾಪ ಕೇಳಿ ಮನೆಯವರೆಲ್ಲರೂ ಗಾಭರಿ

ಯಿಂದ ಎದ್ದು ಬಂದರು. ಭಾಗ್ಯಮ್ಮನವರಿಗಂತೂ ಏನೂ ಅರ್ಥವಾಗಲಿಲ್ಲ. ತಮ್ಮ ಮಗಳೇಕೆ ಹಾಗೆ ರೋದಿಸುತ್ತಿದ್ದಾಳೆ, ತಮ್ಮ ಯಜಮಾನರೇಕೆ ಹಾಗೆಸಿಡಿಲು ಬಡಿದವರಂತೆ ನಿಶ್ಚೇಷ್ಟಿತರಾಗಿ ಕೂತುಬಿಟ್ಟಿದ್ದಾರೆ ಎಂಬುದು ಬಗೆಹರಿಯದೆ ಹೋಯಿತು. ತಮ್ಮ ಯಜಮಾನರನ್ನು ಸಮೀಪಿಸಿ, "ಏನಾಯ್ತು ಹೇಳಿಂದ್ರೆ. ಅದ್ಯೇಕೆ ಶಾರದಾ ಹಾಗೆ ಅಳ್ತಿದಾಳೆ. ಎಷ್ಟೊತ್ತಿನಿಂದ ಹೀಗೆ ಮಾಡ್ತಿದಾಳೆ! ನನ್ನನ್ನೇಕೆ ನೀವೂ ಆಗಲೇ ಎಬ್ಬಿಸ ಬಾರದಾಗಿತ್ತು" ಎಂದು ಒಂದೇ ಉಸಿರಿನಲ್ಲಿ ಕೇಳಿದರು. ಸುಬ್ಬಣ್ಣ ತಲೆಯೆತ್ತಿ ನೋಡಿದರು. ನಿಟ್ಟುಸಿರ್ಗರೆದು ಹೇಳತೊಡಗಿದರು. "ನಮ್ಮ ಗ್ರಹಚಾರಕ್ಕೆ ಕೊನೆಮೊದಲೆಂಬುದಿಲ್ಲ ಕಣೇ. ನಾನ್ಯೇನು ಹೇಳಲಿ. ಈಗ ಒಂದರ್ದ ಗಂಟೆಯಾಯಿತು ಹೀಗೆ ಷುರುಮಾಡಿ. ನನಗೆ ನಿದ್ದೆ ಹತ್ತಲಿಲ್ಲ. ಹಾಸಿಗೇ ಮೇಲೆ ಕಣ್ಣುಬಿಟ್ಟುಕೊಂಡು ಮಲಗಿದ್ದೆ. ಹನ್ನೊಂದು ಗಂಟೆ ಹೊಡೆದದ್ದೂ ಕೇಳಿಸಿತು, ಸ್ವಲ್ಪ ಹೊತ್ತಿನಿಂದ ತನ್ನಷ್ಟಕ್ಕೆ ತಾನೇ ಗೊಣಗಿ ಕೊಳುತ್ತಿದ್ದಳು. ನಾನು ಒಂದೆರಡಸಲ "ಏನು ಬೇಕಮ್ಮಾ ಶಾರದಾ" ಎಂದು ವಿಚಾರಿಸಿದೆ. ಅವಳು ಜವಾಬು ಕೊಡಲಿಲ್ಲ. ನನಗೆ ಗಾಭರಿಯಾಯಿತು. ಕೂಡಲೇ ದೀಪಹಾಕಿ ಬಂದು ನೋಡಿದೆ. ಇವಳು ಮಗೂನ್ನೂ ಎತ್ತಿಕೊಂಡು ಕೊಠಡಿಯಲ್ಲೆಲ್ಲಾ ಓಡಾಡ್ತಿದ್ದಳು. ಈಗ ತಾನೇ ಕೈಹಿಡಿದು ಕರಕೊಂಡು ಬಂದು ಹಾಸಿಗೆಯ ಮೇಲೆ ಕೂಡಿಸಿದೆ. ಇದ್ದಕ್ಕಿದ್ದ ಹಾಗೇ ದೇವರೆಂತಹ ವಿಪತ್ತು ತಂದಿಟ್ಟ ನೋಡಿದೆಯಾ !"

"ಈಗ್ಯೇನು ಮಾಡೋದೂಂದ್ರೆ ಹಾಗಾದರೆ! ನನಗೆ ಕೈಕಾಲೇ ಆಡೋಲ್ಲ. ನಿಮ್ಮದಮ್ಮಯ್ಯಾಂತೀನಿ. ಓಡಿಹೋಗಿ ಲೇಡೀ ಡಾಕ್ಟ ರನ್ನಾದ್ರೂ ಕರಕೊಂಡು ಬನ್ನಿ. ಪಾಪ ಆಕೆ ಒಳ್ಳೇವರು ಕೂಡ್ಲೇ ಬಂದು ನೋಡ್ತಾರೆ. ಬೇಗಹೋಗೀಂದ್ರೆ."

"ಈ ಅವೇಳೆಯಲ್ಲಿ ಹೋಗಿ ಅವರನ್ನೆಬ್ಬಿಸೋದು ಹೇಗೇ ? ಅವರು ತಾನೇ ಏನು ತಿಳಿಕೊಂಡಾರು."

"ಹಾಗನ್ನಬೇಡೀಂದ್ರೆ, ಪಾಪ ಅವರೇನೂ ತಿಳಕೊಳ್ಳೋಲ್ಲ. ನಮ್ಮ ಶಾರದೆಯ ಮೇಲೆ ಮೊದಲಿಂದಲೂ ಅವರಿಗೊಂದು ತರಹ ವಿಶ್ವಾಸ

ವಿಷಯ ತಿಳಿದ ಮೇಲೆ ಅವರ ಮನಸ್ಸು ನಿಲ್ಲೋಲ್ಲ. ತಕ್ಷಣ ಬಂದು ಬಿಡ್ತಾರೆ. ಬೇಗ ಹೋಗಿ"

ಸುಬ್ಬಣ್ಣ ಭುಜದಮೇಲೊಂದು ಟವಲ್ಲು ಹಾಕಿಕೊಂಡು ಹುಚ್ಚರಂತೆ ಹೆರಿಗೆಯಾಸ್ಪತ್ರೆಯ ಕಡೆ ಓಡತೊಡಗಿದರು. ತಮ್ಮ ಯಜಮಾನರು ಹೊರಟುಹೋದ ಮೇಲೆ ಭಾಗ್ಯಮ್ಮ ತಮ್ಮ ಮಗಳ ಕೈಯಿಂದ ಮಗುವನ್ನು ಕಿತ್ತುಕೊಳ್ಳಲು ವಿಶ್ವಪ್ರಯತ್ನ ಮಾಡಿ ನೋಡಿದರು ಆದರೆ ಶಾರದೆ ತನ್ನೆದೆಗವಚಿಕೊಂಡಿದ್ದ ಮಗುವನ್ನು ಕೆಳಗೆ ಕೂಡಾ ಮಲಗಿಸಲಿಚ್ಛಿಪಡದೆ ಹಾಸಿಗೆಯ ಮೇಲ ಕೂತುಬಿಟ್ಟಳು. ಮಧ್ಯೆ ಮಧ್ಯೆ ದೊಡ್ಡದಾಗಿ ದನಿ ತೆಗೆದು ರೋಧಿಸಲಾರಂಭಿಸಿದಳು. ಭಾಗ್ಯಮ್ಮನವರಿಗೆ ದಿಕ್ಕುತೋರದೆ ಪಕ್ಕದ ಮನೆಗೆ ಓಡಿದರು. ಒಂದೆರಡು ಸಲ ಬಾಗಿಲು ತಟ್ಟಿ, "ಮೀನಾಕ್ಷಮ್ಮ, ಮೀನಾಕ್ಷಮ್ಮ" ಎಂದು ಕೂಗಿದರು. ಅಷ್ಟುಹೊತ್ತಿಗಾಗಲೇ ಪಕ್ಕದ ಮನೆಯಲ್ಲಿ ನಡೆಯುತ್ತಿದ್ದ ಹಗರಣದಿಂದ ಮೀನಾಕ್ಷಮ್ಮನವರಿಗೆ ಎಚ್ಚರವಾಗಿಹೋಗಿತ್ತು. ಕೂಡಲೇ ಅವರೆದ್ದು ಬಂದು ಬಾಗಿಲು ತೆಗೆದರು. ಭಾಗ್ಯಮ್ಮನವರನ್ನು ನೋಡಿದ ಕೂಡಲೇ,

"ಇದೇನು ಭಾಗ್ಯಮ್ಮ. ಇಷ್ಟು ಹೊತ್ತಿನಲ್ಲಿ ಬಂದ್ರಿ!" ಎಂದು ಕೇಳಿದರು.

"ಅಯ್ಯೋ ನಾನ್ಯೇನು ಹೇಳ್ಲಿ ಮೀನಾಕ್ಷಮ್ಮ. ನಮ್ಮ ಶಾರದೆ ಏಕೋ ಒಂದರ್ಧಗಂಟೆಯಿಂದ ಹುಚ್ಚುಹುಚ್ಚಾಗಿ ಮಾಡ್ತಿದ್ದಾಳೆ. ಮಗೂನ ಯಾರಕೈಗೂ ಕೊಡೊಲ್ಲ. ತೊಟ್ಟಿಲಲ್ಲೂ ಮಲಗಿಸೋಲ್ಲ. ತಾನೇ ಎತ್ತಿಕೊಂಡಿದ್ದಾಳೆ. ಒಂದೇ ಸಮವಾಗಿ ಜನ್ನೀ ಬಂದವರಂತೆ ತನಗೆ ತಾನೇ ಮಾತಾಡಿಕೊಳ್ತಿದ್ದಾಳೆ. ಮಧ್ಯೆ ಮಧ್ಯೆ ಅಳ್ತಾ ಕೂತ್ಕೋತಾಳೆ. ನಾನೆಷ್ಟು ಸಮಾಧಾನ ಹೇಳಿದರೂ ಸುಮ್ನಾಗ್ಲಿಲ್ಲ. ನನಗೆ ಕೈಕಾಲೇ ಆಡೊಲ್ಲ. ಅವರು ಲೇಡೀ ಡಾಕ್ಟರನ್ನು ಕರಕೊಂಡುಬರೋಕ್ಕೆ ಹೋಗಿದ್ದಾರೆ. ನೀವಾದರೂ ಬಂದು ಅವಳಿಗೆ ಸಮಾಧಾನ ಹೇಳೀ ಮೀನಾಕ್ಷಮ್ಮ."

"ನಡೀರಿ ಭಾಗ್ಯಮ್ಮ ಬರ್ತೀನಿ. ನೀವೇನೂ ಭಯಪಡಬೇಡಿ. ದೇವರು ಕಾಪಾಡ್ತಾನೆ."

ಇಬ್ಬರೂ ಮನೆಗೆ ಬಂದರು. ಮೀನಾಕ್ಷಮ್ಮ ಶಾರದೆಯ ಹತ್ತಿರ ಹೋಗಿ ಕೂತರು. ಕೂಡಲೇ ಅವಳು ಹೌಹಾರಿಬಿದ್ದು ಅಲ್ಲಿಂದ ಛಂಗನೆ ಎದ್ದುಬಿಟ್ಟಳು.

"ಅಯ್ಯೋ ನೀವ್ಯಾಕೆ ಬಂದಿರೀ ಮೀನಾಕ್ಷಮ್ಮ! ನನ್ನ ಮಗೂನ ನೋಡೋಕ್ಕೆ ಬಂದಿರಾ!! ನನ್ನ ಮಗೂ ಆಸೆ ಆಗಿಹೋಯಿತು! ನನ್ನ ಮಗು ತೀರಿ ಹೋಯಿತು! ಅವರು ........ ನನ್ನತ್ತೇಮನೇವರು ಮಗೂ ಕುತ್ತಿಗೇ ಹಿಸುಕಿಕೊಂಡು ಹಾಕಿಬಿಟ್ಟರು! ಅಯ್ಯೋ! ನನ್ನ ಕಂದಾ ಹೋಗಿಬಿಟ್ಟಿತು!" ಎಂದು ದೊಡ್ಡದಾಗಿ ದನಿಯೆತ್ತಿ ಅಳತೊಡಗಿದಳು. ಅವಳ ಜತೆಯಲ್ಲೇ ಮನೆಮಂದಿಯೆಲ್ಲಾ ರೋಧಿಸಲಾರಂಭಿಸಿದರು. ಮನೆಯವರಿಗೆ ಧೈರ್ಯ ಹೇಳಲು ಬಂದಿದ್ದ ಮೀನಾಕ್ಷಮ್ಮನವರಿಗೂ ದಿಕ್ಕೇ ತೋಚದ ಹಾಗಾಯಿತು. ಅಂತಹ ಅನುಭವ ಅವರಿಗದೇ ಮೊದಲು. ಇದ್ದುದರಲ್ಲೇ ಧೈರ್ಯ ತಂದುಕೊಂಡು ಎಲ್ಲರನ್ನೂ ಸಮಾಧಾನಗೊಳಿಸ ಲೆತ್ನಿಸಿದರು. ಶಾರದೆ ಮಗುವಿಗೇನೂ ಅಪಾಯವೆಸಗದಂತೆ ಜಾಗರೂಕತೆಯಿಂದ ನೋಡಿಕೊಳ್ಳುತ್ತಿದ್ದರು.

ಅಷ್ಟು ಹೊತ್ತಿಗೆ ಸುಬ್ಬಣ್ಣ ಲೇಡೀ ಡಾಕ್ಟರೊಂದಿಗೆ ಮನೆಗೆ ಹಿಂದಿರುಗಿದರು. ಲೇಡೀ ಡಾಕ್ಟರು ಶಾರದೆಯ ಹತ್ತಿರ ಹೋಗಿ ಕೂತರು.

"ಚೆನ್ನಾಗಿದ್ದೀಯಾ ಶಾರದಮ್ಮ" ಎಂದು ಕೇಳಿದರು.

"ಹ್ಞೂ. ಚೆನ್ನಾಗಿದ್ದೇನೆ ಸರೋಜಮ್ಮ. ನೀವ್ಯೇಕೆ ಬಂದಿರಿ ಈಗ?" ಎಂದು ಕೇಳಿದಳು ಶಾರದೆ. ಅವಳಂದದ್ದು ಕೇಳಿ ಎಲ್ಲರಿಗೂ ಪರಮಾಶ್ಚರ್ಯ ವುಂಟಾಯಿತು. ಈಗೊಂದು ಐದು ನಿಮಿಷಗಳ ಹಿಂದೆ ಅವಳು ಮಾಡುತ್ತಿದ್ದ ಆರ್ಭಟವೇನು! ಜನ್ನೀ ಬಂದವರಂತೆ ಜ್ಞಾನಾಜ್ಞಾನವಾಗಿ ಮಾತಾಡುತ್ತಿದ್ದುದೇನು! ಈಗ ಡಾಕ್ಟರು ಬಂದ ಕೂಡಲೇ ಅವರನ್ನೇ 'ನೀವ್ಯೇಕೆ ಬಂದಿರಿ ಈಗ' ಎಂದು ಕೇಳುವ ಧೈರ್ಯ ಹೇಗೆ ಬಂತು ಎಂದು ಎಲ್ಲರೂ ವಿಸ್ಮಯಗೊಂಡರು.

ಲೇಡೀ ಡಾಕ್ಟರಿಗೆ ಅದುವರೆಗೂ ಸುಬ್ಬಣ್ಣ ತಮಗೆ ಹೇಳಿದ್ದ ಕಥೆಯೆಲ್ಲವನ್ನೂ ನಂಬುವುದೇ ಕಷ್ಟವಾಯಿತು. ಆದರೆ ಅವರ ಅನುಮಾನ ದೃಢಪಡಲು ಹೆಚ್ಚುಹೊತ್ತು ಹಿಡಿಯಲಿಲ್ಲ. ಮರುಕ್ಷಣವೇ ಶಾರದೆಯ ಪ್ರಲಾಪ

ಪ್ರಾರಂಭವಾಗಿ ಹೋಯಿತು. ಸರೋಜಮ್ಮ ಶಾರದೆಯ ಪೂರ್ವೇತಿಹಾಸ ವನ್ನೆಲ್ಲಾ ಬಲ್ಲರಾದ್ದರಿಂದ ಅವಳ ರೋಗಲಕ್ಷಣವನ್ನು ಸರಿಯಾಗಿಯೇ ಊಹಿಸಿದರು. ಅವಳಿಗೆ ಚಿತ್ತವಿಕಾರವುಂಟಾಗಿದೆಯೆಂಬುದಾಗಿ ಅವರಿಗೆ ದೃಢಪಟ್ಟಿತು. ಶಾರದೆಗೆ ಹೊಸದಾಗಿ ಪ್ರಾಪ್ತವಾದ ಸಂಕಷ್ಟಕ್ಕಾಗಿ ಬಹಳ ವಾಗಿ ಮರುಗಿದರು. ಅಂದು ಆಸ್ಪತ್ರೆಯಲ್ಲಿ ಅವಳು ತಮ್ಮ ಮುಂದೆ ತೋಡಿಕೊಂಡ ಬಾಳಿನ ಕಥೆ ಅವರ ಚಿತ್ತಭಿತ್ತಿಯಮೇಲೆ ಚಲನ ಚಿತ್ರದಂತೆ ನರ್ತಿಸತೊಡಗಿತು. 'ಪೂರ್ ಲೇಡೀ' ಎಂಬ ಉದ್ಗಾರ ತಾನಾಗಿಯೇ ಅವರ ಬಾಯಿಂದ ಹೊರಬಿತ್ತು.

"ಏನು ಸರೋಜಮ್ಮ, ನೀವೇ ಗತೀಕಣಮ್ಮ. ಮಗೂ ನೋಡಿ, ಅದೇಕೋ ಹುಚ್ಚುಹುಚ್ಚಾಗಿ ಮಾಡ್ತಾಳೆ. ನಮಗಂತೂ ದಿಕ್ಕೇ ತೋಚಲ್ಲ. ಹೇಗಾದರೂ ಮಾಡಿ ಕಾಪಾಡೀಮ್ಮ, ಪುಣ್ಯ ಬರುತ್ತೆ" ಎಂದು ಅಂಗಲಾಚಿ ದರು ಭಾಗ್ಯಮ್ಮ. ಅವರಿಗೆ ಯಾವ ಸಮಾಧಾನೋಕ್ತಿಗಳನ್ನಾಡಲೂ ಸರೋಜಮ್ಮನಿಗೆ ಬಾಯೇ ಬರಲಿಲ್ಲ. ಎಷ್ಟಾದರೂ ಅವರದು ಹೆಂಗರು ಳಲ್ಲವೇ! ಅವರ ಕಣ್ಣುಗಳಲ್ಲಿ ಹನಿ ತುಂಬಿತು.

"ನೀವು ಭಯಪಡಬೇಡೀ ಭಾಗ್ಯಮ್ಮ. ದೇವರಿದ್ದಾನೆ ಕಾಪಾಡ್ತಾನೆ. ನಾವು ಮಾಡೋ ಪ್ರಯತ್ನವೆಲ್ಲಾ ಮಾಡೋಣ" ಎಂದರು ಸರೋಜಮ್ಮ.

"ಸುಬ್ಬಣ್ಣ, ಸ್ವಲ್ಪ ಬನ್ನಿ" ಎಂದು ಸರೋಜಮ್ಮ ಅವರನ್ನು ಬೀದಿಯ ಬಾಗಿಲಿಗೆ ಕರೆದೊಯ್ದರು. "ನಿಮ್ಮ ಮಗಳ ಕಂಡೀಷನ್ನು ಬಹಳ ಸೀರಿ ಯಸ್ಸಾಗಿದೆ. 'ಹಿಸ್ಟೀರಿಯಾ' ಇದ್ದಹಾಗೆ ಕಾಣುತ್ತೆ. ಈಗಲೇ ನೀವು ಬೆಂಗಳೂರಿಗೆ ಕರಕೊಂಡು ಹೋಗಿ ತೋರಿಸಬೇಕು. ಬಹುಶಃ ನಿಮ್ಮ ಮಗಳನ್ನು ಮೆಂಟಲ್ ಆಸ್ಪತ್ರೆಗೆ ಸೇರಿಸಬೇಕಾದೀತು" ಎಂದು ಸುಬ್ಬಣ್ಣ ನವರಿಗೆ ನಿಜಸ್ಥಿತಿಯನ್ನು ತಿಳಿಸಿದರು.

ಡಾಕ್ಟರು ತಿಳಿಸಿದ ಸುದ್ದಿ ಕೇಳಿ ಸುಬ್ಬಣ್ಣನವರಿಗೆ ಸಿಡಿಲು ಬಡಿದಂತಾಗಿ ಹೋಯಿತು. "ನಮ್ಮ ಶಾರದೆಯ ಸ್ಥಿತಿ ಅಷ್ಟು ಕೆಟ್ಟದೆಯೇ ಡಾಕ್ಟರ್" ಎಂದು ಗಾಬರಿಯಿಂದ ಕೇಳಿದರು.

"ಹೌದು ಮಿ|| ಸುಬ್ಬಣ್ಣ, ನೀವು ಕೂಡಲೇ ಬೆಂಗಳೂರಿಗೆ ಹೊರಡ ಬೇಕು. ನಿಧಾನ ಮಾಡುವ ಹಾಗಿಲ್ಲ."

"ಡಾಕ್ಟರ್, ದಯವಿಟ್ಟು ಕ್ಷಮಿಸಿ. ಅರ್ಧ ರಾತ್ರೀಲಿ ಬಂದು ನಿಮಗೆ ತೊಂದರೆ ಕೊಟ್ಟೆ."

"ಡೋಂಟ್ ವರೀ. ಅದೆಲ್ಲಾ ಏನು ತೊಂದರೆ ಮಿ|| ಸುಬ್ಬಣ್ಣ. ನಮ್ಮ ಉದ್ಯೋಗವೇ ಅಂಥಾದ್ದು. ನಮಗೆ ಅವೇಳೆ ಗಿವೇಳೆಯೆಂಬುದಿಲ್ಲ. ಜನ ಯಾವಾಗ ಬಂದು ಕರೀತಾರೋ ಆಗ ನಾವು ಸಿದ್ಧವಾಗಿರಬೇಕು. ನಾನಿನ್ನು ಬರ್‍ತೀನೆ. ಅಂತೂ ಪೇಷಂಟ್‌ನ ಹುಷಾರಾಗಿ ನೋಡ್ಕೊಳ್ಳಿ"

"ಪಾಪ ನೀವೊಬ್ಬರೇ ಆಸ್ಪತ್ರೆ ತನಕಾ ಹೋಗಬೇಕಲ್ಲಾ, ಡಾಕ್ಟರ್. ನಾನು ಜತೇಲಿ ಬರ್‍ತೀನೆ."

"ಥ್ಯಾಂಕ್ಸ್ ನನಗೇನೂ ಹೆದರಿಕೆಯಿಲ್ಲ ಮಿ|| ಸುಬ್ಬಣ್ಣ. ಒಬ್ಬಳೇ ಹೋಗ್ತೀನಿ. ನೀವು ನಿಲ್ಲಿ."

"ಪರವಾಗಿಲ್ಲ, ಡಾಕ್ಟರ್, ನಿಮ್ಮನ್ನ ಕ್ವಾರ್ಟರ್ಸ್ ತನಕಾ ಬಿಟ್ಟು ಬರ್‍ತೀನೆ."

ಲೇಡೀ ಡಾಕ್ಟರೂ ಸುಬ್ಬಣ್ಣನವರೂ ಆಸ್ಪತ್ರೆಯ ದಾರಿ ಹಿಡಿದರು.

## ೨೩

ಬೆಂಗಳೂರಲ್ಲಿ ಸುಬ್ಬಣ್ಣ ಪಟ್ಟ ಕಷ್ಟ ಹೇಳತೀರದು. ತಮ್ಮ ದೂರದ ನೆಂಟರೊಬ್ಬರ ಪತ್ತೆ ಹಚ್ಚಿ ಅವರ ಮನೆಯಲ್ಲಿ ಕೆಲವು ದಿನ ಉಳಿಯಲು ಅವಕಾಶ ಕಲ್ಪಿಸಿಕೊಂಡರು. ಸುಬ್ಬಣ್ಣನವರ ನೆಂಟರ ಮನೆ ಇದ್ದದ್ದು ಬಸವನಗುಡಿಯಲ್ಲಿ. ಬಸವನಗುಡಿಯಿಂದ ಹುಚ್ಚಾಸ್ಪತ್ರೆಗೆ ದಿನಂಪ್ರತಿ ಎರಡೆರಡುಸಲ ನಡೆದೂ ನಡೆದೂ ಸುಬ್ಬಣ್ಣ ಸತ್ತು ಸುಣ್ಣವಾದರು. ಭಾಗ್ಯಮ್ಮನವರು ಮಾತ್ರ ವಾರಕ್ಕೆರಡು ಸಲ ಆಸ್ಪತ್ರೆಗೆ ಹೋಗಿ ಮಗಳ ದರ್ಶನ ಮಾಡಿಕೊಂಡು ಬರುತ್ತಿದ್ದರು. ಶಾರದೆಗೆ ಹುಚ್ಚಾಸ್ಪತ್ರೆಯಲ್ಲಿ ಸೀಟು ಸಿಗುವುದೇ ಬಹಳ ದುಸ್ತರವಾಗಿ ಹೋಯಿತು. ಸುಬ್ಬಣ್ಣ ತಮಗೆ ಗುರುತು ಪರಿಚಯವಿದ್ದವರ ಕೈಕಾಲು ಕಟ್ಟಿ ಹೇಗೋ ಮಗಳಿಗೆ ಆಸ್ಪತ್ರೆಯಲ್ಲಿ ಪ್ರವೇಶ ದೊರಕಿಸಿದರು.

ಶಾರದೆಯನ್ನು ಆಸ್ಪತ್ರೆಗೆ ಸೇರಿಸಿ ವಾರ ಮಾತ್ರವಾಗಿತ್ತು. ಮಗು ವನ್ನು ತಾಯವಶಕ್ಕೆ ಕೊಟ್ಟಿರಲು ಆಸ್ಪತ್ರೆಯವರು ಒಪ್ಪದ ಕಾರಣ, ತಮ್ಮ

ಮೊಮ್ಮಗನ ಆರೈಕೆ ಪೋಷಣೆಗಳೆಲ್ಲವೂ ಭಾಗ್ಯಮ್ಮನವರ ಪಾಲಿಗೆ ಬಿತ್ತು. ಶಾರದೆ ಹೆತ್ತು ನೆಟ್ಟಗೆ ತಿಂಗಳಾಗಿರಲಿಲ್ಲ. ಅಷ್ಟು ಸಣ್ಣ ಮಗುವನ್ನು ಸುಧಾರಿಸುವುದು ಬಹಳ ಪ್ರಯಾಸವಾಯಿತಾದರೂ ಭಾಗ್ಯಮ್ಮ ಮಗುವಿಗೆ ಯಾವ ಕೊರತೆಯೂ ಆಗದಂತೆ ಅದರ ರಕ್ಷಣೆಯ ಭಾರವನ್ನು ವಹಿಸಿ ಕೊಂಡರು. ಆ ಅನಾಥ ಮಗುವಿನ ಮೇಲೆ ಕನಿಕರಗೊಂಡ ನೆರೆಹೊರೆಯ ಹೆಂಗಸರು ತಾವಾಗಿಯೇ ಬಂದು ಮಗುವಿಗೆ ಹಾಲುಣಿಸಿ ಹೋಗುತ್ತಿದ್ದರು.

ಬೆಂಗಳೂರಿಗೆ ಬಂದಿದ್ದವರು ದಂಪತಿಗಳಿಬ್ಬರೇ. ತಮ್ಮ ಎರಡು ವರ್ಷಗಳ ಕೈಮಗುವನ್ನೂ ಭಾಗ್ಯಮ್ಮ ಊರಲ್ಲಿಯೇ ಬಿಟ್ಟು ಬಂದಿದ್ದರು. ಶಾರದೆ ಆಸ್ಪತ್ರೆಯಲ್ಲಿ ಕಡೆಯಪಕ್ಷ ಮೂರು ತಿಂಗಳಾದರೂ ಇರಬೇಕೆಂದು ದೊಡ್ಡ ಡಾಕ್ಟರು ಅಭಿಪ್ರಾಯಪಟ್ಟರು. ಆಸ್ಪತ್ರೆಯ ಡಾಕ್ಟರುಗಳು ಬರೆದು ಕೊಡುತ್ತಿದ್ದ ಇಂಜಕ್ಷನ್ ಟ್ಯೂಬುಗಳನ್ನೂ, ಟಾನಿಕ್ ಸೀಸೆಗಳನ್ನೂ, ಸುಬ್ಬಣ್ಣ ಪೇಟೆಯಿಂದ ತಂದು ಸರಬರಾಜು ಮಾಡುತ್ತಿದ್ದರು. ಅನ್ನಾಹಾರಗಳನ್ನಾಗಲೀ, ನಿದ್ದೆ ವಿಶ್ರಾಂತಿ ಗಳನ್ನಾಗಲೀ ಲೆಕ್ಕಿಸದೆ, ಹಗಲೂ ರಾತ್ರಿ ಆಸ್ಪತ್ರೆಯ ಬಾಗಿಲು ಕಾಯು ವುದೇ ಸುಬ್ಬಣ್ಣನವರ ದಿನಚರಿಯಾಗಿ ಹೋಯಿತು.

ಸಂಜೆ ಐದು ಗಂಟೆಯಾಗಿತ್ತು. ಅಂದು ಶನಿವಾರವಾದ್ದರಿಂದ ದಂಪತಿಗಳಿಬ್ಬರೂ ಗಾಡೀ ಮಾಡಿಕೊಂಡು ಹುಚ್ಚಾಸ್ಪತ್ರೆಗೆ ಹೊರಟಿದ್ದರು. ಗಂಡಹೆಂಡಿರಿಬ್ಬರಿಗೂ ಮಾತು ಬೆಳೆಯಿತು.

"ಏನು ಗ್ರಹಚಾರಾಂದ್ರೆ ನಮ್ಮದು. ಶನಿಕಾಟ ನಮಗಿನ್ನೂ ತಪ್ಪಲಿಲ್ಲ. ಲಕ್ಷಣವಾಗಿ ಚೊಚ್ಚಲು ಹೆರಿಗೆ. ಏನೋ ದೇವರು ಕೊಟ್ಟಿದ್ರಲ್ಲಿ ಅನುವಾಗಿ ಹೆರಿಗೆ ಮಾಡಿದಿವಿ. ಆದರೆ ನಮ್ಮ ದುರದೃಷ್ಟಕ್ಕೆ ಶಾರದೆಗೆ ಹೀಗಾಗಬೇಕೇ! ಈಗಲೂ ಚಿಂತೆಯಿಲ್ಲ. ದೇವರ ದಯೆಯಿಂದ ಅವಳಿಗೆ ಗುಣವಾಗಿ ಮಗೂ ಬಾಣಂತೀನ ಅವಳ ಗಂಡನ ಮನೆಗೆ ತಲುಪಿಸಿಬಿಟ್ಟರೆ ಸದ್ಯ ಸಾಕು."
"ಏನು ಮಾಡೋದು ಹೇಳು. ಎಲ್ಲಾ ನಮ್ಮ ಪೂರ್ವಾರ್ಜಿತ ಕರ್ಮ. ನಮ್ಮ ಶಾರದೆಗೇಕೆ ದೇವರು ಈ ಅವಸ್ಥೆ ತಂದಿಟ್ಟನೋ ತಿಳೀದು. ನಮಗೆಷ್ಟೇ ಕಷ್ಟವಾಗಲಿ, ಎಷ್ಟೇ ದುಡ್ಡು ಖರ್ಚಾಗಲೀ ಚಿಂತೆಯಿಲ್ಲ.

ಸದ್ಯ ಅವಳಿಗೆ ಗುಣವಾಗಿ ಹೋದರೆ ಸಾಕು. ನಾವಿಷ್ಟೆಲ್ಲಾ ಕಷ್ಟಪಟ್ಟದ್ದಕ್ಕೆ ಸಾರ್ಥಕ.''

''ಅಲ್ಲಾಂದ್ರೆ. ಬೆಂಗಳೂರಿಗೆ ಬಂದಾರಭ್ಯ ದುಡ್ಡು ನೀರು ಚೆಲ್ಲಿದ ಹಾಗೆ ಚೆಲ್ತಿದ್ದೀರಲ್ಲಾ ! ಇಷ್ಟೆಲ್ಲಾ ಹಣವನ್ನು ಅದು ಹೇಗೆ ಸರಬರಾಜು ಮಾಡುತ್ತಿದ್ದೀರಿ !! ಏನೇನು ಏರ್ಪಾಡು ಮಾಡಿದ್ದೀರಿ. ಸ್ವಲ್ಪ ಹೇಳೀಂದ್ರೆ. ಸಮಾಚಾರ ತಿಳಿದಮೇಲಾದ್ರೂ ಸ್ವಲ್ಪ ಸಮಾಧಾನವಾಗಿರ್ತೀನಿ.''

''ಏನೋ ಹೊಸದಾಗಿ ಕೇಳ್ತಿದೀಯಲ್ಲಾ ಈವತ್ತು ! ನಿನಗೆ ಗೊತ್ತಿಲ್ಲವೇ ನಾನು ಮಾಡೋ ಏರ್ಪಾಡು ! ಸಾಲಾ ಕೊಡೋ ಪುಣ್ಯಾತ್ಮಾ ಒಬ್ಬ ಘಟ್ಟಿಯಾಗಿರೋವಾಗ ನಮ್ಮಂತಹ ತಿರುಪೆ ಎತ್ತುವ ಜನಕ್ಕೇನು ಕಮ್ಮಿ ಹೇಳು. ಈಗಿರೋ ಸಾಲದ ಪಟ್ಟಿಯಲ್ಲಿ ಇನ್ನೊಂದು ಹೊಸ ಐಟಂ ಸೇರಿದ ಹಾಗಾಯಿತು. ಅಷ್ಟೆ.''

''ಅದೆಷ್ಟು ಧೈರ್ಯವಾಗಿ ಹೇಳ್ತೀರೀಂದ್ರೆ ನೀವು ! ನನಗ್ಯಾಕೋ ಬಹಳ ಭಯವಾಗತ್ತೆ. ಸಾಲಗಾರರೇನು ನಮ್ಮ ದೊಡ್ಡಪ್ಪನ ಮಕ್ಕಳೇ, ಚಿಕ್ಕಪ್ಪನ ಮಕ್ಕಳೇ ! ಅವರುಕೊಟ್ಟ ಹಣಾನ ಒದ್ದು ವಸೂಲು ಮಾಡ್ತಾರೆ, ಒಂದು ಬಿಡಿ ಕಾಸೂ ಬಿಡದಹಾಗೆ. ನಾವೆಲ್ಲಿಂದ ಕೊಡೋ ದೂಂದ್ರೆ ಅಷ್ಟೊಂದು ಹಣವನ್ನ !''

''ಅದಕ್ಕೆ ನನ್ನನ್ನೇನು ಮಾಡಂತೀ ಹೇಳು. ರೋಗಾ ರುಜಿನಾ, ಯಾರ ಯತ್ನಾ ಹೇಳು. ದುಡ್ಡು ಖರ್ಚುಮಾಡಬೇಕೆಂದು ನನಗೇನಿಷ್ಟವೇ? ಬಂದಾಪತ್ತನ್ನ ನಿವಾರಿಸಿಕೊಳ್ಳದೇ ಕೂತಿರೋಕ್ಕಾಗುತ್ಯೇ. ಶಾರದೆಗೆ ಹೀಗಾಗುತ್ತೇಂತ ಯಾರೆಣಿಸಿದ್ದರು? ಎಲ್ಲಾ ದೈವ ಚಿತ್ತ. ಅದರಂತೆ ನಡೆಯಲೇಬೇಕು.''

ಅಷ್ಟು ಹೊತ್ತಿಗೆ ಗಾಡಿ ಆಸ್ಪತ್ರೆಯನ್ನು ಮುಟ್ಟಿತು. ಸುಬ್ಬಣ್ಣ ಗಾಡಿಯವನಿಗೆ ದುಡ್ಡು ಕೊಟ್ಟು ಕಳಿಸಿದರು. ಆಸ್ಪತ್ರೆಯನ್ನು ಪ್ರವೇಶಿಸುತ್ತಿದ್ದ ಹಾಗೆಯೇ ಹೆಡ್‌ನರ್ಸ್ ಅವರಿಗೆ ಭೇಟಿಯಾದಳು. ಆಕೆ ಕ್ರೈಸ್ತಿಯನ್ನಳು. ಹೆಸರು ಮಿಸ್. ಫರ್ನಾಂಡೀಸ್. ಕಳೆದ ಒಂದು ವಾರದಿಂದ ದಿನಂಪ್ರತಿ ಎರಡೆರಡು ಸಲ ಆಸ್ಪತ್ರೆಗೆ ಬಂದು ಹೋಗುತ್ತಿದ್ದ ಸುಬ್ಬಣ್ಣನವರ ಪರಿಚಯ ಆಕೆಗಿತ್ತು. ಅವರನ್ನು ನೋಡಿದ ಕೂಡಲೇ

ಆಕೆ, "ಗುಡ್ ಈವನಿಂಗ್ ಮಿ|| ಸುಬ್ಬಣ್ಣ, ಯುವರ್ ಡಾಟರ್ ಈಸ್ ಕ್ವೈಟ್ ಓಕೇ ! ಐ ಹ್ಯಾಡ್ ಸೀನ್ ಹರ್ ಜಸ್ಟ್ ನೌ" ಎಂದಳು.

"ಓ ಐ ಸೀ ! ಥ್ಯಾಂಕ್ಸ್. ಕೆನ್ ವಿ ಸೀ ಹರ್ ನೌ ? "

"ಬೈ ಆಲ್ ಮೀನ್ಸ್. ಯು ಕೆನ್ ಸೀ ಹರ್ ನೌ. ಈಸ್ ದಿಸ್ ಯುವರ್ ವೈಫ್'' ಎಂದು ಭಾಗ್ಯಮ್ಮನವರ ಕಡೆ ನೋಡಿದಳು.

"ಎಸ್. ಪ್ರಾಬಬ್ಲಿ ಯು ಹ್ಯಾಡ್ ನಾಟ್ ಸೀನ್ ಹರ್ ಬಿಫೋರ್."

"ಸರ್ಟನ್ಲಿ. ಪ್ಲೀಸ್ ಗೆಟ್ ಇನ್. ಯುವರ್ ಡಾಟರ್ ಮಸ್ಟ್ ಬಿ ವೈಟಿಂಗ್ ಫಾರ್‌ಯು".

"ಎಸ್ ಎಸ್. ವಿ ಆರ್ ಗೋಯಿಂಗ್."

ಮಿಸ್ ಫರ್ನಾಂಡೀಸ್ ತನ್ನ ಕೆಲಸದ ಮೇಲೆ ಹೊರಟು ಹೋದಳು. ದಂಪತಿಗಳಿಬ್ಬರೂ ಶಾರದೆಯಿದ್ದ ವಾರ್ಡಿಗೆ ಹೋದರು. ವಾರ್ಡಿನಲ್ಲಿ ಎಂಟು ಹತ್ತು ಮಂದಿ ಹೆಂಗಸರಿದ್ದರು. ಎಲ್ಲರೂ ಶಾರದೆಯಂತೆಯೇ ಹಸೀ ಬಾಣಂತಿಯರು. ಅವಳಂತೆಯೇ 'ಹಿಸ್ಟೀರಿಯಾ' ಕಾಯಿಲಿಗೆ ತುತ್ತಾಗಿದ್ದವರು. ಯಾರ ಹತ್ತಿರಲೂ ಮಕ್ಕಳಿರಲಿಲ್ಲ. ಒಬ್ಬೊಬ್ಬರು ಒಂದೊಂದು ವಿಚಿತ್ರ ರೀತಿಯಲ್ಲಿ ವರ್ತಿಸುತ್ತಿದ್ದರು. ಒಬ್ಬಳು ತನ್ನಷ್ಟಕ್ಕೆ ತಾನೇ ಮಾತಾಡಿಕೊಳ್ಳುತ್ತಿದ್ದಳು. ಮತ್ತೊಬ್ಬಳು ದೊಡ್ಡದಾಗಿ ದನಿತೆಗೆದು ಅಳುತ್ತಾ ಕುಳಿತಿದ್ದಳು. ಮಗದೊಬ್ಬಳು ಜಡೇ ಬಿಚ್ಚಿ ಕೂದಲೆಲ್ಲಾ ಮುಖದ ಮೇಲೆ ಮುಚ್ಚಿಕೊಂಡು ವಿಕಾರವಾಗಿ ನಗುತ್ತಿದ್ದಳು. ಇನ್ನೊಬ್ಬಾಕೆ ಹಾಸಿಗೆಯ ದಿಂಬು, ಹೊದಿಕೆಗಳನ್ನೆಲ್ಲಾ ನೆಲದ ಮೇಲೆ ಇಟ್ಟಾಡಿ, ಬರೀ ಮೆತ್ತೆಯ ಮೇಲೆ ಮಲಗಿ ಹೊರಳಾಡುತ್ತಿದ್ದಳು.

ಇದೆಲ್ಲವನ್ನೂ ನೋಡಿ ದಂಪತಿಗಳಿಬ್ಬರೂ ಭಯಭ್ರಾಂತರಾಗಿ ಹೋದರು. ಸದ್ಯ ನಮ್ಮ ಶಾರದೆಯ ಅವಸ್ಥೆ ಏನಾಗಿದೆಯೋ ಎಂದುಕೊಂಡು ಅವಳು ಮಲಗಿದ್ದ ಮಂಚದ ಹತ್ತಿರ ಹೋಗಿ ನಿಂತರು. ಶಾರದೆ ಮಲಗಿದ್ದವಳು ತನ್ನ ತಂದೆತಾಯಿಗಳನ್ನು ನೋಡಿದ ಕೂಡಲೇ ಕಾತರಳಾಗಿ ಹಾಸಿಗೆಯ ಮೇಲೆದ್ದು ಕೂತಳು. ತನ್ನ ತಾಯಿಯ ಕೈ ಬರಿದಾಗಿರುವುದನ್ನು ಕಂಡು ಗಾಭರಿಯಿಂದ, "ಅಮ್ಮಾ ಮಗೂ ಎಲ್ಲಿ? ಮಗೂನ ಏಕಮ್ಮಾ ಕರಕೊಂಡು ಬರ್ಲಿಲ್ಲಾ ನೀನು" ಎಂದು ಕೇಳಿದಳು.

ಅದಕ್ಕೆ ಭಾಗ್ಯಮ್ಮ ಉತ್ತರವೇನು ಹೇಳಿಯಾರು! ಅವರ ಮುಖ ಪೆಚ್ಚಾಗಿ ಹೋಯಿತು. "ಆಗಲಮ್ಮ ನಾಳೆ ಖಂಡಿತ ಕರಕೊಂಡು ಬರ್ತೀನಿ. ನಾವು ಬರೋ ಹೊತ್ತಿಗೆ ಮಗೂ ಮಲಗಿಬಿಟ್ಟಿತ್ತು. ಮಗೂನ ಎಬ್ಬಿಸಿ ಕರಕೊಂಡು ಬರೋದೇಕೆಂದು ಹಾಗೇ ಬಂದು ಬಿಟ್ವಿವು" ಎಂದರು ಭಾಗ್ಯಮ್ಮ. ಶಾರದೆಯದನ್ನು ನಂಬಲಿಲ್ಲ. "ಹೋಗಮ್ಮಾ ನೀನು ಬರೀ ಸುಳ್ಳು ಹೇಳ್ತೀಯ. ಸಂಜೆಯ ಹೊತ್ತು ನನ್ನ ಮಗು ಮಲಗೋದೇ ಇಲ್ಲ. ಆಡ್ತಾನೇ ಇರತ್ತೆ. ನನಗೆ ತಿಳೀದೇ ನನ್ನ ಮಗೂ ಸಮಾಚಾರ."

"ಅದರ ಯೋಚ್ನೆ ನೀನಿಟ್ಟುಕೊಳ್ಳಬೇಡಮ್ಮಾ ಶಾರದಾ. ಅದನ್ನ ನಾನು ಚೆನ್ನಾಗಿ ನೋಡ್ಕೊಳ್ತೀನೆ. ಮೊದಲು ಸದ್ಯ ನಿನಗೆ ವಾಸಿಯಾಗಲಿ."

"ನನಗೇನಮ್ಮಾ ಆಗಿರೋದೀಗ, ಚೆನ್ನಾಗೇ ಇದ್ದೀನಲ್ಲಾ. ನನ್ನನ್ನೇಕೆ ಇಲ್ಲಿ ಬಿಟ್ಟಿದ್ದೀರಿ. ಯಾವಾಗಮ್ಮಾ ನನ್ನನ್ನ ಮನೆಗೆ ಕರಕೊಂಡು ಹೋಗೋದು?"

"ಸ್ವಲ್ಪ ದಿನ ತಾಳಮ್ಮಾ ಶಾರದಾ. ನಿನಗಿನ್ನೂ ಪೂರ್ತಿ ಗುಣವಾಗಿಲ್ಲಾಂತ ಹೇಳ್ತಾರೆ ಡಾಕ್ಟ್ರು. ಅವರು ನಿನ್ನನ್ನ ಮನೆಗೆ ಕರಕೊಂಡು ಹೋಗಬಹುದೂಂತ ಹೇಳಿದ ಕೂಡ್ಲೇ ಕರಕೊಂಡು ಹೋಗ್ಬಿಡ್ತೀವಿ. ಅಲ್ಲೀತನಕಾ ಸ್ವಲ್ಪ ಸುಮ್ಮನಿರಮ್ಮ".

"ಹೋಗಮ್ಮ ನನಗಿಲ್ಲಿ ತುಂಬಾ ಬೇಜಾರು. ನನಗಿಲ್ಲಿ ಬಹಳ ದಿಗಿಲಾಗುತ್ತೆ. ರಾತ್ರಿ ಹೊತ್ತು ಇವರೆಲ್ಲಾ ಹುಚ್ಚುಚ್ಚಾಗಿ ಕಿರಿಚ್ತಾ ಇರ್ತಾರೆ. ಹತ್ರಾ ಬಂದು ನನ್ನ ಹೆದರಿಸ್ತಾರೆ. ತಾವು ಮಾಡಿದ ಹಾಗೆಲ್ಲ ನನ್ನೂ ಮಾಡೂಂತ ಬಲವಂತ ಪಡಿಸ್ತಾರೆ. ರಾತ್ರೀ ಹೊತ್ತು ನನ್ನ ನಿದ್ದೇಮಾಡೋಕ್ಕೇ ಬಿಡೋಲ್ಲಮ್ಮ ಇವರೆಲ್ಲಾ. ಈವತ್ತೇ ಡಾಕ್ಟರಿಗೆ ಹೇಳಿ ನನ್ನ ಮನೆಗೆ ಕರೆದುಕೊಂಡುಹೋಗಿ."

"ಆಗಲಮ್ಮ ಡಾಕ್ಟರನ್ನು ಕೇಳಿ ನೋಡ್ತೀವೆ. ಅವರು ಒಪ್ಪಿದರೆ ಕರಕೊಂಡು ಹೋಗ್ತೀವೆ." ಶಾರದೆ ಏನನ್ನೋ ನೆನೆಸಿಕೊಂಡು ಕೇಳಿದಳು.

"ಅವರೇಕಮ್ಮಾ ಒಂದಿನವಾದ್ರೂ ಆಸ್ಪತ್ರೆಗೆ ಬರಲೇ ಇಲ್ಲ ನನ್ನ ನೋಡೋಕೆ! ಅವರಿಗೆ ಸಮಾಚಾರ ತಿಳಿಸಲಿಲ್ವೇನಮ್ಮಾ ನೀವು?"

"ತಿಳಿಸಿದಿವವಮ್ಮಾ ಶಾರದಾ. ನಿಮ್ಮಣ್ಣನೇ ಖುದ್ದು ಮನೆಗೆ ಹೋಗಿ ನಿನ್ನ ಯಜಮಾನರಿಗೆ ಸುದ್ದಿ ತಿಳಿಸಿಬಂದರಲ್ಲಾ"

"ಅವರು ಏನು ಹೇಳಿದರಂತೆ!"

"ಏನೂ ಹೇಳ್ಲಿಲ್ಲವಂತಮ್ಮ. ನಿನ್ನ ಗಂಡ ಸರಿಯಾಗಿ ಮುಖ ಕೊಟ್ಟು ನಿಮ್ಮ ತಂದೆಯನ್ನ ಮಾತಾಡಿಸಲಿಲ್ಲವಂತೆ. ನಿನ್ನನ್ನ ಹೀಗೆ ಆಸ್ಪತ್ರೆಗೆ ಸೇರಿಸಿದ್ದೇವೇಂತ ಹೇಳಿದ ಕೂಡಲೇ ಮುಖ ಸಿಂಡರಿಸಿಕೊಂಡು ಎದ್ದು ಹೋದನಂತೆ ನಿನ್ನ ಗಂಡ."

"ಅಷ್ಟೇನೇ ಅವರಿಗೆ ನನ್ನ ಮೇಲೆ ಇರೋ ಅಭಿಮಾನ! ನಾನಿದ್ದರೇನು ಸತ್ತರೇನು!! ಅವರಿಗೆರಡೂ ಒಂದೇ!" ಶಾರದೆ ದೊಡ್ಡ ನಿಟ್ಟುಸಿರಿಟ್ಟಳು.

"ಹಾಗೆಲ್ಲಾ ಈ ಹಸೀ ಮೈಯಲ್ಲಿ ನೀನು ನೊಂದುಕೋಬೇಡಮ್ಮಾ ಶಾರದಾ. ಅವನಿಗೆ ನೀನು ಬೇಡವಾದರೆ, ಹೆತ್ತ ತಂದೆತಾಯಿಗಳಿಗೇನೂ ನೀನು ಭಾರವಾಗಿಲ್ಲ ಮಗೂ. ಮುಖ್ಯ ದೇವರ ದಯದಿಂದ ನಿನಗೆ ಬೇಗ ಗುಣವಾದರೆ ಸಾಕು."

ಅಷ್ಟು ಹೊತ್ತಿಗೆ ಆಸ್ಪತ್ರೆಯ ಗಂಟೆ ಬಾರಿಸಿತು. ಬಂದಿದ್ದ ವಿಸಿಟರ್ಸ್ ಮನೆಗಳಿಗೆ ಹೊರಡಬೇಕೆಂಬುದೇ ಅದರ ಸೂಚನೆಯಾಗಿತ್ತು.

"ನಾವಿನ್ನು ಬರ್ತೀವಮ್ಮಾ ಶಾರದಾ ಹೊತ್ತಾಯ್ತು. ನಾಳೆ ಸಾಯಂಕಾಲ ಖಂಡಿತ ಬರ್ತೀವಿ" ಎಂದೆದ್ದರು ಭಾಗ್ಯಮ್ಮ. ಶಾರದೆಯ ಕಣ್ಣುಗಳು ಹನಿಗೂಡಿದವು. ಯಾವುದೋ ಅಸಹನೀಯವಾದ ಮೂಕ ಯಾತನೆ ಅವಳ ಮೊಗದಲ್ಲಿ ಸ್ಫುಟಗೊಂಡಿತು. ಅದನ್ನು ನೋಡಿ ಭಾಗ್ಯಮ್ಮನವರೂ ಕಂಬನಿದುಂಬಿದರು.

"ಹೋಗಿಬರ್ತೀವಮ್ಮಾ ಶಾರದಾ" ಎನ್ನುತ್ತಾ ದಂಪತಿಗಳಿಬ್ಬರೂ ಅಲ್ಲಿಂದ ಹೆಜ್ಜೆ ಕೀಳಲಾರದೆ ಹೊರಟರು. ಅವರು ಹೋದ ನಿಟ್ಟನ್ನೇ ದಿಟ್ಟಿಸಿನೋಡುತ್ತಾ ಅವರು ಕಣ್ಮರೆಯಾದ ಕೂಡಲೇ ದೀರ್ಘ ನಿಶ್ವಾಸವೊಂದನ್ನು ಹೊರಚೆಲ್ಲಿ ಶಾರದೆ ಮುಸುಕೆಳೆದು ಮಲಗಿಬಿಟ್ಟಳು.

## ೨೪

ಮಧ್ಯಾಹ್ನ ಮೂರು ಗಂಟೆಯ ಸಮಯ. ಹೊರಗಡೆ ಬಿಸಿಲಿನ ಝಳವಂತೂ ಹೇಳತೀರದು. ಅದೇ ತಾನೇ ಆಸ್ಪತ್ರೆಯಿಂದ ಬಂದು, ಊಟ ಮಾಡಿ ಸುಬ್ಬಣ್ಣ ಪಡಸಾಲೆಯಲ್ಲಿ ಕುಳಿತು ಸುಧಾರಿಸಿಕೊಳ್ಳುತ್ತಿದ್ದರು. ಅವರೊಡನೆ ಮನೇ ಯಜಮಾನರೂ ಕುಳಿತಿದ್ದರು. ಭಾಗ್ಯಮ್ಮ ಎಲ್ಲೋ ಒಳಗಡೆ ಕೆಲಸದಲ್ಲಿ ಇದ್ದರು. ಸುಬ್ಬಣ್ಣ ಎಲಡಿಕೆ ಮೆಲ್ಲುತ್ತಾ ಮಾತಿಗಾರಂಭಿಸಿದರು.

" ಏನು ಶೆಖೆಯಾಗುತ್ತಿದೆ ಶೀನಪ್ಪಾ. ಹೊರಗಡೆ ತಲೇ ಹಾಕೋ ಹಾಗಿಲ್ಲ. ಬಿಸಿಲು ಸುಟ್ಟುಹೋಗ್ತಿದೆ. ಮಧ್ಯಾಹ್ನದಿಂದಲೂ ಅದೇನೋ ಒಂದು ವಿಧವಾದ ಮೂಗು ಸಂಕಟವಾಗ್ತಿದೆ. ಕಾರಣ ತಿಳೀದು. "

" ಹೌದು ಸುಬ್ಬಣ್ಣಾ. ನನಗೂ ಹಾಗೇ ಇದೆ. ಶಾರದೇಗೀಗ ಸ್ವಲ್ಪ ಗುಣಮುಖಾ ತಾನೇ ಸುಬ್ಬಣ್ಣಾ ? ಇನ್ನೂ ಎಷ್ಟು ದಿನಾ ಇರಬೇಕೂಂತಾರೆ ಆಸ್ಪತ್ರೇಲಿ ಡಾಕ್ಟ್ರು ? "

" ಅದ್ಯೇನೋಪ್ಪ. ಒಬ್ಬರೂ ಸರಿಯಾಗಿ ಹೇಳೋಲ್ಲ. ಇನ್ನೂ ಅದೆಷ್ಟು ದಿನಾ ಇರಬೇಕೋ ಏನೋ. ಪರಸ್ಥಳದಲ್ಲಿ ನಮಗೆ ನಿಲ್ಲಲು ಒಂದು ನೆಲೆ ಕೊಟ್ಟು ಪುಣ್ಯ ಕಟ್ಟಿಕೊಂಡೆಯಲ್ಲಾ ಶೀನಪ್ಪಾ ! ನಿನ್ನ ಹೆಂಡತೀ ಮಕ್ಕಳ ಹೊಟ್ಟೆ ತಣ್ಣಗಿರಲಿ. ನೀನೀ ಊರಲ್ಲಿಲ್ಲದೇ ಹೋಗಿದ್ರೆ ನಮ್ಮ ಗತಿ ಏನು ಹೇಳು ! ಈ ಬೆಂಗಳೂರಲ್ಲಿ ನಮ್ಮನ್ಯಾರು ಕೇಳೋವ್ರು !! "

" ಇದೇನು ಹೀಗ್ಹೇಳ್ತೀ ಸುಬ್ಬಣ್ಣಾ ! ನೆಂಟರೂ ಇಷ್ಟರೂಂದಮೇಲೆ ಅಷ್ಟು ಸಹಾಯವೂ ಬೇಡವೇ ಹೇಳು. ದೇವರು ಕೊಟ್ಟಿರೋದಕ್ಕೆ ವಂಚನೆಯಿಲ್ಲ. ನೀನ್ಯೇನೂ ಸಂಕೋಚ ಪಟ್ಕೋಬೇಡ. ಡಾಕ್ಟ್ರು ಅದೆಷ್ಟು ದಿನಾ ಶಾರದೇನ ಆಸ್ಪತ್ರೇಲಿ ಇಟ್ಕೊಳ್ತಾರೋ ಇಟ್ಕೊಳ್ಳಲಿ. ನೀವು ಗಂಡಾ ಹೆಂಡತೀ ಅಲ್ಲೀ ತನಕಾ ಹಾಯಾಗಿ ನಮ್ಮನೇಲಿ ಇದ್ದುಬಿಡಿ. ಪಾಪ ನಿಮ್ಮಿಂದ ನಮಗೇನು ತೊಂದರೆಯೂ ಇಲ್ಲ. ಮುಖ್ಯ ನಿಮ್ಮ ಮಗಳಿಗೆ ಬೇಗ ಗುಣವಾದರೆ ಸಾಕು. "

ಅಷ್ಟು ಹೊತ್ತಿಗೆ ಸರಿಯಾಗಿ ಆ ಮನೆಯ ಕುಲಪುರೋಹಿತರಾಗಿದ್ದ ತಿಪ್ಪಾಜೋಯಿಸರ ಸವಾರಿ ಚಿತ್ತೈಸಿತು. ಅವರು ಬರುತ್ತಿದ್ದ ಹಾಗೆಯೇ

ಮನೆಯ ಯಜಮಾನರು, " ಏನು ಜೋಯಿಸರೇ ಬಹಳ ಅಪರೂಪವಾಗಿ ಭೇಟೀ ! ಬನ್ನಿ ಬನ್ನಿ !! " ಎಂದು ಬಹಳ ಸಂಭ್ರಮದ ಸ್ವಾಗತ ನೀಡಿದರು. ಜೋಯಿಸರು ತಮಗೆ ದೊರೆತ ಆದರಪೂರ್ವಕವಾದ ಸ್ವಾಗತದಿಂದ ಸುಪ್ರೀತರಾಗಿ ಹೇಳಿದರು. " ಹೀಗೇ ಸ್ವಲ್ಪ ವಿಶ್ವೇಶ್ವರಪುರದ ಕಡೇ ಹೊರಟಿದ್ದೆ ರಾಯರೇ. ಸ್ವಲ್ಪ ಕೆಲಸವಿತ್ತು. ಹೋಗ್ತಾ ನಿಮ್ಮನೇಮೇಲೆ ತಾನೇ ಹಾಸಿ ಹೋಗಬೇಕು. ಹೇಗೂ ನಿಮ್ಮನ್ನ ನೋಡಿ ಬಹಳ ದಿನಗಳಾಗಿತ್ತು. ಹಾಗೇ ತಲೇ ಹಾಕಿ ಹೋಗೋಣಾಂತ ಬಂದೆ. "

" ಬಹಳ ಸಂತೋಷ. ಬನ್ನಿ ಕೂತ್ಕೊಳ್ಳಿ. "

ತಿಪ್ಪಾಜೋಯಿಸರು ಚಾಪೆಯ ಮೇಲೆ ಕೂತರು. ಸ್ವಲ್ಪ ದೂರದಲ್ಲಿ ಕೂತಿದ್ದ ಸುಬ್ಬಣ್ಣನವರನ್ನು ಹಾಗೇ ನಖಶಿಖಾಂತವಾಗಿ ಈಕ್ಷಿಸಿದರು ಜೋಯಿಸರು.

" ಮನೆಗೆ ನೆಂಟರು ಬಂದಿರೋಹಾಗೆ ಕಾಣುತ್ತಲ್ಲಾ ರಾಯರೇ " ಎಂದರು ಶೀನಪ್ಪನವರನ್ನು ನೋಡಿ.

" ಹೌದು ಜೋಯಿಸರೇ. ಇವರು ನಮ್ಮ ಹತ್ತಿರದ ಸಂಬಂಧ. ಹೊಳೇನರಸೀಪುರದಲ್ಲಿ ಕೆಲಸದಲ್ಲಿದ್ದಾರೆ. ಇವರ ಮಗಳು ಬಾಣಂತಿ ಪಾಪ. ಹೆತ್ತು ಇನ್ನೂ ತಿಂಗಳಿಲ್ಲ. ಆಗಲೇ ನೋಡಿ ಆಕೆಗೆ ಬುದ್ಧಿವಿಕಲ್ಪವಾಗಿ ಬಿಟ್ಟಿದೆ. ಅವಳನ್ನ ಆಸ್ಪತ್ರೇಲಿ ಸೇರಿಸಿದ್ದಾರೆ. ಔಷಧೋಪಚಾರ ನಡೀತಿದೆ. "

" ಅಯ್ಯೋ ಪಾಪ ! ನನಗೆ ಗೊತ್ತೇಇಲ್ಲವಲ್ಲಾ ರಾಯರೇ ! ಇವರು ಊರಿಗೆ ಬಂದೆಷ್ಟುದಿನಗಳಾದವು ? "

" ಅವರು ಬಂದು ತಿಂಗಳ ಮೇಲಾಯಿತು ಜೋಯಿಸರೇ. "

" ಮಗೂ ತಾಯಹತ್ತಿರಲೇ ಇದೆಯೋ ! "

" ಇಲ್ಲ. ಮಗೂನ ತಾಯ ವಶಕ್ಕೆ ಕೊಟ್ಟಿರ್ತಾರೆಯೋ ಹೇಳಿ ಜೋಯಿಸರೇ ? ಮಗೂ ಮನೇಲೇ ಇದೆ. "

" ಹಾಗಾದರೆ ಸ್ವಲ್ಪ ಮಗೂನ ನೋಡಬೇಕಲ್ಲ. "

" ಅಗತ್ಯವಾಗಿ ಆಗಬಹುದು. "

ಸುಬ್ಬಣ್ಣ ಎದ್ದು ಹೋಗಿ ತೊಟ್ಟಿಲಲ್ಲಿ ಮಲಗಿದ್ದ ತಮ್ಮ ಮೊಮ್ಮಗ ನನ್ನು ಎತ್ತಿಕೊಂಡು ಬಂದರು. ತಮ್ಮ ತೊಡೆಯ ಮೇಲೆ ಮಗುವನ್ನು ಮಲಗಿಸಿಕೊಂಡು ಜೋಯಿಸರ ಮುಂದೆ ಕೂತರು. ಜೋಯಿಸರು ಕ್ಷಣ ಕಾಲ ಮಗುವಿನ ಕಡೆ ಎವೆಯಿಕ್ಕದೆ ನೋಡಿದರು. ಬೆರಳು ಮಡಿಚಿಕೊಂಡಿದ್ದ ಮಗುವಿನ ಪುಟ್ಟ ಹಸ್ತವನ್ನು ಬಿಡಿಸಿ ಅದರಲ್ಲಿ ಅಸ್ಪಷ್ಟವಾಗಿದ್ದ ರೇಖೆಗಳನ್ನು ಪರೀಕ್ಷಿಸಿದರು. ಅವರ ಮುಖ ಗಂಭೀರವಾಗತೊಡಗಿತು.

"ರಾಯರೇ ಇನ್ನು ಸಾಕು. ಮಗೂನ ಮಲಗಿಸಿಬಿಟ್ಟು ಬನ್ನೀ ಹೋಗಿ."

ಸುಬ್ಬಣ್ಣ ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ ಬಂದರು. ಬಳಿಕ ಜೋಯಿಸರು ಹೇಳಲೋ ಬೇಡವೋ ಎಂದು ಅನುಮಾನಿಸುತ್ತಾ, "ರಾಯರೇ ನೀವ್ಯೇನೂ ಅಂದುಕೊಳ್ಳದಿದ್ರೆ ಒಂದ್ವಿಷಯಾ ತಿಳಿಸಬೇಕೆಂದಿದ್ದೇನೆ."

"ಅಂದುಕೊಳ್ಳೋದೇನುಬಂತು ಜೋಯಿಸರೇ. ಅಗತ್ಯವಾಗಿ ಹೇಳಿ." ಸುಬ್ಬಣ್ಣ ಆಶ್ವಾಸನವಿತ್ತರು.

"ಈ ಮಗೂಗೆ ಬಾಲಾರಿಷ್ಟ ದೋಷವಿದೆ. ಅದರ ಪರಿಹಾರಕ್ಕಾಗಿ ಈಗಲೇ ಶಾಂತಿ ಮಾಡಬೇಕು. ಈ ಮಗುವಿನ ತಾಯಿಗೂ ದೊಡ್ಡ ಗಂಡಾಂತರವಿದೆ."

"ತಾಯಿಗೆ ಜೀವ ಭಯವಿದೆಯೇ ಶಾಸ್ತ್ರಿಗಳೇ ?"

"ಹೌದು. ಮಗುವಿನ ಹಸ್ತರೇಖೆಯಲ್ಲಿ ಅದು ವ್ಯಕ್ತವಾಗುತ್ತೆ."

"ಹಾಗಾದರೆ ಅದಕ್ಕೆ ಪರಿಹಾರ ನೀವೇ ಹೇಳಿ ಜೋಯಿಸರೇ. ನೀವ್ಯೇನು ಹೇಳಿದರೂ ನಾನು ಮಾಡಲು ಸಿದ್ಧ. ನವಗ್ರಹ ಜಪ, ಶಾಂತಿ, ಏನು ಬೇಕಾದರೂ ಮಾಡಿಸೋಣ. ಎಷ್ಟೇ ಖರ್ಚಾಗಲೀ ಪರವಾಗಿಲ್ಲ."

"ನಾನ್ಯೇನೋ ಶಾಂತಿ, ನವಗ್ರಹ ಜಪಾ ಏನುಬೇಕಾದರೂ ಮಾಡಿಸ್ತೀನಿ ರಾಯರೇ. ಆದರೆ ಜೋಯಿಸ ಗ್ರಹಗತಿಗಳನ್ನು ತಿದ್ದಲು ಸಾಧ್ಯವೇ ಹೇಳಿ. ಮನುಷ್ಯ ಪ್ರಯತ್ನವನ್ನೇನೋ ಮಾಡೋಣ. ಅದರ ಮೇಲೆ ದೈವೇಚ್ಛೆಯಿದ್ದಂತೆ ಆಗಲಿ."

" ಪುನಃ ನಿಮ್ಮನ್ನ ಕಾಣೋದು ಯಾವಾಗ ಜೋಯಿಸರೇ ?"

" ಯಾವಾಗ ಬೇಕಾದರೂ ಆಗಬಹುದು. ನಾಳೆ ಬೆಳಿಗ್ಗೆ ನಾನೇ ಬರ್‍ತೇನೆ. ಶಾಂತಿ ಹೋಮಕ್ಕೆ ಬೇಕಾದ ಸಾಮಾನು ಸರಂಜಾಮುಗಳನ್ನೆಲ್ಲ ತಪಶೀಲಾಗಿ ತಿಳಿಸ್ತೇನೆ. ನೀವೆಲ್ಲಾ ಸಿದ್ಧ ಮಾಡಿಕೊಳ್ಳಿ. ಆಮೇಲೆ ಕೆಲಸ ಪ್ರಾರಂಭಿಸೋಣಂತೆ."

" ಹಾಗೇ ಆಗಲೀ ಜೋಯಿಸರೇ."

" ನಾನಿನ್ನು ಬರ್‍ತೇನೆ ರಾಯರೇ, ನಮಸ್ಕಾರ."

ಜೋಯಿಸರು ಅದೇನನ್ನೋ ಯೋಚಿಸುತ್ತಾ ಮನೆಯಿಂದ ಹೊರ ಬಿದ್ದರು.

## ೨೫

ಬೆಳಿಗ್ಗೆ ಒಂಭತ್ತು ಗಂಟೆಯಾಗಿದ್ದಿರಬಹುದು. ಕೆಂಪು ಡವಾಲಿ ಹಾಕಿಕೊಂಡಿದ್ದ ಆಸ್ಪತ್ರೇ ಜವಾನನೊಬ್ಬ ಶೀನಪ್ಪನವರ ಮನೆ ಮುಂದೆ ನಿಂತು, "ಸಾರ್, ಸಾರ್" ಎಂದು ಕೂಗುತ್ತಿದ್ದ. ಆಸ್ಪತ್ರೆಗೆ ಹೊರಡುವ ಸಿದ್ಧತೆಯಲ್ಲಿದ್ದ ಸುಬ್ಬಣ್ಣ ಹೊರಗೆ ಬಂದು ನೋಡಿದರು. ಆಸ್ಪತ್ರೇ ಜವಾನನನ್ನು ನೋಡಿದ ಕೂಡಲೇ ಅವರಿಗೆ ಯಮ ದರ್ಶನವಾದ ಹಾಗಾಯಿತು. ಮುಂದೇನು ಆಪತ್ತು ಕಾದಿದೆಯೋ ಎಂದು ಭಯಭ್ರಾಂತರಾದರು. "ಡಾಕ್ಟ್ರು ನಿಮಗೆ ಈ ಕಾಗದಾ ಕೊಟ್ಟಿದ್ದಾರೆ ಸಾರ್" ಎನ್ನುತ್ತಾ ಆಸ್ಪತ್ರೆಯ ಜವಾನ ಲಕೋಟೆಯೊಂದನ್ನು ಸುಬ್ಬಣ್ಣನವರ ಕೈಗಿತ್ತ. ಜವಾನನ ಕೈಯಿಂದ ಕಾಗದಾ ತೆಗೆದು ಕೊಳ್ಳುವಾಗ ಸುಬ್ಬಣ್ಣನವರ ಎದೆ ಗುಂಡಿಗೆ ಬಡಿದುಕೊಳ್ಳುತ್ತಿತ್ತು. ಮನಸ್ಸು ಅದಾವುದೋ ಅಮಂಗಳ ಸುದ್ದಿಯನ್ನು ನೆನೆಯುತ್ತಿತ್ತು. ಗಾಭರಿಯಿಂದ ಕಾಗದ ಬಿಚ್ಚಿ ಓದಿದರು. ಕಾಗದದಲ್ಲಿ ಎರಡು ಪಂಕ್ತಿ ಮಾತ್ರ ಬರೆದಿತ್ತು. "Your Daughter expired this morning at 7 o'clock. Please go over to the Hospital at once: ("ನಿಮ್ಮ ಮಗಳು ಈ ದಿನ ಬೆಳಿಗ್ಗೆ ಏಳು ಗಂಟೆಗೆ ತೀರಿಕೊಂಡಳು. ತಕ್ಷಣ ಆಸ್ಪತ್ರೆಗೆ ಹೊರಟು ಬನ್ನಿ.") ಕಾಗದದಲ್ಲಿದ್ದ ಕರ್ಣಕಠೋರವಾದ ವಾರ್ತೆಯನ್ನೋದುತ್ತಿದ್ದ ಹಾಗೆಯೇ, ಸಿಡಿಲೆರಗಿದವರಂತೆ ಸುಬ್ಬಣ್ಣ ಸ್ತಂಭೀಭೂತರಾಗಿ ಹೋದರು. ಅವರ ಕಣ್ಣುಗಳಲ್ಲಿ ನೀರು ಧಾರಾಕಾರವಾಗಿ ಹರಿದುಹೋಯಿತು. ಒಳಗೆ ಹೋಗಿ

ತಮ್ಮ ಹೆಂಡತಿಗೆ ಸುದ್ದಿ ಮುಟ್ಟಿಸಲು ಕೂಡಾ ಅವರಲ್ಲಿ ಚೈತನ್ಯವುಳಿದಿರಲಿಲ್ಲ. ಅಷ್ಟು ಹೊತ್ತಿಗೆ ಭಾಗ್ಯಮ್ಮನವರೇ ಬೀದಿ ಬಾಗಿಲಿಗೆ ಬಂದು, "ಇದ್ಯೇಕೇಂವ್ರೆ ಹೀಗೆ ಬೆಪ್ಪುಬಡಿದು ನಿಂತುಬಿಟ್ಟಿದ್ದೀರಿ! ಆಸ್ಪತ್ರೆಗೆ ಹೊರಡೋಲ್ವೇ?" ಎಂದು ತಮ್ಮ ಯಜಮಾನರನ್ನು ಪ್ರಶ್ನಿಸಿದರು. ಆಸ್ಪತ್ರೆಯೆಂದ ಕೂಡಲೇ ಸುಬ್ಬಣ್ಣ ನವರ ಹೊಟ್ಟೆಯಲ್ಲಿ ಬೆಂಕಿಬಿದ್ದಹಾಗಾಯಿತು. ಅವರ ದುಃಖ ಮೇರೆ ಮೀರಿತು. "ಅಯ್ಯೋ ಇನ್ನು ಆಸ್ಪತ್ರೆಗೆ ಹೋಗಿ ಏನುಮಾಡಬೇಕೇ !! ಶಾ....ರ....ದೇ.... ಬೆಳಿಗ್ಗೆ ಹೋ....ಗಿ....ಬಿ....ಟ್ಟಳಂತೆ!!" ಎನ್ನುತ್ತಾ ತಲೇ ಮೇಲೆ ಕೈಯಿಟ್ಟುಕೊಂಡು ಬಿಕ್ಕಿಬಿಕ್ಕಿ ಅಳತೊಡಗಿದರು. "ಅಯ್ಯೋ ಕಡೆಗೂ ಹೋಗಿಬಿಟ್ಟೆಯಾ ಮಗೂ....ಶಾರದಾ" ಎಂದು ಪ್ರಲಾಪಿಸತೊಡಗಿದರು ಭಾಗ್ಯಮ್ಮ. ಅವರ ಆಕ್ರಂದನವನ್ನು ಕೇಳಿ ಕ್ಷಣಮಾತ್ರದಲ್ಲಿ ಮನೆಮಂದಿ ಯೆಲ್ಲಾ ಓಡಿಬಂದುಬಿಟ್ಟರು.

ಶೀನಪ್ಪನವರು ಸುಬ್ಬಣ್ಣನವರ ಕೈಯಲ್ಲಿದ್ದ ಕಾಗದವನ್ನು ಓದಿಕೊಂಡು ಎಲ್ಲವನ್ನೂ ಅರ್ಥಮಾಡಿಕೊಂಡರು. ಅವರ ಕಣ್ಣುಗಳಲ್ಲೂ ನೀರೂರಿತು. ಮನೆಯವರೆಲ್ಲರೂ ಸೇರಿ ದಂಪತಿಗಳನ್ನು ಪರಿಪರಿಯಾಗಿ ಸಂತೈಸತೊಡಗಿದರು ಯಾರೆಷ್ಟು ಸಮಾಧಾನ ಹೇಳಿದರೂ ಹೆತ್ತಕರುಳಿನ ಬೇಗೆ ಅಷ್ಟು ಸುಲಭವಾಗಿ ಶಮನವಾಗಿಬಿಡುವ ಹಾಗಿರಲಿಲ್ಲ. ಭಾಗ್ಯಮ್ಮನವರಂತೂ ತಮ್ಮ ಹೊಟ್ಟೆಯ ಸಂಕಟ ತಾಳಲಾರದೆ ನೆಲದಮೇಲೆ ಬಿದ್ದು ಗೋಳಾಡ ತೊಡಗಿದರು. ನೆರೆ ಹೊರೆಯ ಹೆಂಗಸರೆಲ್ಲರೂ ಬಂದು ಅವರನ್ನು ಸಂತೈಸತೊಡಗಿದರು.

ತಲೇಮೇಲೆ ಕೈಯಿಟ್ಟು ಕೂತುಬಿಟ್ಟಿದ್ದ ಸುಬ್ಬಣ್ಣನವರನ್ನು ಕುರಿತು ಶೀನಪ್ಪ ಹೇಳಿದರು. "ಇದೇಕೆ ಹೀಗೆ ಮಂಕುಬಡಿದು ಕೂತುಬಿಟ್ಟೇ ಸುಬ್ಬಣ್ಣಾ. ಏಳು. ಆಸ್ಪತ್ರೆಗೆ ಹೋಗೋಣ ನಡಿ. ಮುಂದಿನ ಕೆಲಸ ನೋಡಬೇಕಲ್ಲ." "ನಮ್ಮ ಶಾರದೇನ ಉಳಿಸಿಕೊಳ್ಳೋಕ್ಕೆ ಎಷ್ಟೆಷ್ಟೊ ಪ್ರಯತ್ನಪಟ್ಟೇ ಶೀನಪ್ಪಾ. ಹಣಾ ನೀರಿನ ಹಾಗೆ ಸುರಿದೆ. ಆದರೆ ದೈವೇಚ್ಛೆಗೆ ಬರಲಿಲ್ಲ. ನಮ್ಮ ಶಾರದೆಯಂಥ ಭಂಗಾರದ ಮಗುವನ್ನು ಉಳಿಸಿಕೊಳ್ಳೋ ಭಾಗ್ಯ ನಮ್ಮ ಹಣೇಲಿ ಬರೆದಿಲ್ಲ ಭಗವಂತ. ನಮ್ಮ ದುರಾದೃಷ್ಟ ಹೇಗಿದೇ ನೋಡು ಶೀನಪ್ಪಾ. ಗಂಡಾಂತರದ ಮೇಲೆ ಗಂಡಾಂತರ ತಂದಿಡುತ್ತಿದ್ದಾನೆ ದೇವರು."

"ಏನು ಮಾಡೋದು ಸುಬ್ಬಣ್ಣಾ. ಶನಿಮಹರಾಯಾ ಕಾಡಿಸ್ತಾ ಇದ್ರೇ ಹಾಗೇನಪ್ಪಾ ಆಗೋದು. ಕಷ್ಟಗಳ ಮೇಲೆ ಕಷ್ಟಗಳು ಬರುತ್ವೆ. ಎಲ್ಲಾ ಅನುಭವಿಸಿಯೇ ತೀರಬೇಕು. ಗಾಡೀಮಾಡಿಕೊಂಡು ಆಸ್ಪತ್ರೆಗೆ ಹೋಗಿಬರೋಣ. ಮುಂದಿನ ಏರ್ಪಾಡೆಲ್ಲಾ ಮಾಡಬೇಕಲ್ಲ."

"ಇದುವರೆಗೂ ಸಾಲ ತಂದೂತಂದೂ ನಾನೂ ಸೋತುಹೋದೇ ಶೀನಪ್ಪಾ. ಈಗ ಕೈಲಿ ಮೂರುಕಾಸು ಉಳಿದಿಲ್ಲ. ನಿರಾಧಾರವಾಗಿ ನಿಂತಿದ್ದೇನೆ. ಮುಂದೆ ಹೇಗೆ ನಡೆಸುತಾನೋ ಆ ಭಗವಂತ."

"ನೀನ್ಯೇನೂ ದುಡ್ಡಿನಯೋಚ್ನೆ ಮಾಡಬೇಡ ಸುಬ್ಬಣ್ಣ. ನಾನೆಲ್ಲಾ ನೋಡಿಕೊಳ್ತೀನೆ. ಕಷ್ಟಸುಖಕ್ಕಾಗದ ನೆಂಟರಿದ್ರೂ ಒಂದೇ ಇಲ್ಲದಿದ್ರೂ ಒಂದೆ. ನಿಮಗೂ ಈಗ ಗ್ರಹಚಾರಕಾಲ. ಏನೋ ನನ್ನ ಕೈಲಾದ ಸಹಾಯ ಮಾಡಬೇಕೆಂದಿದ್ದೀನಿ."

"ಶೀನಪ್ಪಾ ನೀನು ನಮ್ಮ ಭಾಗದ ದೇವರು! ನಿನ್ನ ಈ ಉಪಕಾರಾನ ನಾವು ಎಂಟೆಂಟು ಜನ್ಮಕ್ಕೂ ತೀರ್ಸೋ ಹಾಗಿಲ್ಲ. ದೇವರು ನಿನ್ನ ಹೆಂಡ್ತೀಮಕ್ಕಳ ಹೊಟ್ಟೇ ತಣ್ಣಗಿಟ್ಟಿರಲಿ."

"ಅದೆಲ್ಲಾ ಆಮೇಲಾಗಲೀ ಉಪಚಾರ. ಮೊದಲು ಆಸ್ಪತ್ರೆಗೆ ಹೋಗೋಣ ನಡಿ."

ಮೂವರೂ ಗಾಡಿ ಮಾಡಿಕೊಂಡು ಆಸ್ಪತ್ರೆಗೆ ತೆರಳಿದರು. ಗಾಡಿ ಯಲ್ಲಿ ಭಾಗ್ಯಮ್ಮನವರನ್ನು ಸುಧಾರಿಸುವುದು ಸುಬ್ಬಣ್ಣನವರಿಗೆ ಬಹಳ ಪ್ರಯಾಸವಾಗಿ ಹೋಯಿತು. ದಾರಿಯುದ್ದಕ್ಕೂ ಭಾಗ್ಯಮ್ಮ ಅಳು ತ್ತಲೇ ಇದ್ದರು. ಆಸ್ಪತ್ರೆಯ ಹತ್ತಿರ ಗಾಡಿನಿಂತಿತು. ಎಲ್ಲರೂ ಗಾಡಿ ಯಿಂದಿಳಿದರು. ಎಂದಿನಂತೆ ಆಸ್ಪತ್ರೆಯ ಮೆಟ್ಟಲು ತುಳಿಯಲು ದಂಪತಿಗಳಿಗೆ ಕಾಲು ಬರಲಿಲ್ಲ. ದಿನವೂ ಮಗಳನ್ನು ನೋಡುವ ಆಸೆಯಾದರೂ ಇರುತ್ತಿತ್ತು. ಈಗೇನಿದೆ ಅಲ್ಲಿ! ಆಸ್ಪತ್ರೆ ಅವರ ಭಾಗಕ್ಕೆ ಶ್ಮಶಾನವಾಗಿ ಹೋಗಿತ್ತು.

ಸುಬ್ಬಣ್ಣ ಮೊದಲು ಡ್ಯೂಟೀ ಡಾಕ್ಟರ ಹತ್ತಿರ ಹೋದರು. ಅಲ್ಲೇ ಹೆಡ್‌ನರ್ಸ್ ಮಿಸ್ ಫರ್ನಾಂಡೀಸ್ ಕೂಡಾ ಇದ್ದಳು. ಸುಬ್ಬಣ್ಣನವರನ್ನು ನೋಡುತ್ತಿದ್ದ ಹಾಗೆಯೇ ಅವರ ಮುಖ ಪೆಚ್ಚಾಗಿಹೋಯಿತು. ಡಾಕ್ಟರು ಅಧೋವದನರಾಗಿ, "ಐಯಾಮ್ ಸೆರಿಸಾರೀ ಮಿ|| ಸುಬ್ಬಣ್ಣ" ಎಂದು ಹೇಳಿ

ತೆಪ್ಪಗಾದರು. "ಯು ಆರ್ ವೆರಿ ಅನ್‌ಫಾರ್ಚ್ಯುನೇಟ್ ಮಿ|| ಸುಬ್ಬಣ್ಣ" ಎಂದು ನಿಟ್ಟುಸಿರಿಟ್ಟಳು ಫರ್ನಾಂಡೀಸ್. ಸುಬ್ಬಣ್ಣ ಏನನ್ನೂ ಹೇಳದೆ ಕಣ್ಣೀರು ಸುರಿಸುತ್ತಾ ನಿಂತುಬಿಟ್ಟರು. ಡ್ಯೂಟೀ ಡಾಕ್ಟರು ಸುಬ್ಬಣ್ಣನವರಿಗೆ, "ನಿಮ್ಮ ಮಗಳ ಶವ ಇನ್ನೂ ವಾರ್ಡಿನಲ್ಲೇ ಇದೆ. ಸ್ಕ್ರೀನ್ ಇಟ್ಟಿದ್ದೇವೆ. ಹೇಗಿದ್ದರೂ ನೀವು ಬರ್ತೀರಿ. ಬಂದ ಮೇಲೆ ನಿಮ್ಮ ವಶಕ್ಕೊಪ್ಪಿಸಬೇಕಲ್ಲಾಂತ ಅಲ್ಲೇ ಇಟ್ಟಿದ್ದೇವೆ. ನನ್ನ ಜತೇಲಿ ಬಂದ್ರೆ ತೋರಿಸ್ತೇನೆ" ಎಂದರು. ಸುಬ್ಬಣ್ಣನವರಿಗೆ ದುಃಖವುಮ್ಮಳಿಸಿಕೊಂಡು ಬಂತು. ಅವರು, "ನನ್ನ ಡಾಟರ್ರಿಗೇನಾಗಿತ್ತು ಡಾಕ್ಟರ್ ! ನಿನ್ನೇ ಸಾಯಂಕಾಲಾ ಕೂಡಾ ನಾನು ಬಂದು ನೋಡ್ಕೊಂಡು ಹೋದೆನಲ್ಲಾ ! ನನ್ಹತ್ರ ಎಂದಿನಂತೇ ನಗನಗ್ತಾ ಮಾತಾಡಿದಳಲ್ಲಾ !! ನನ್ನ ಯಜಮಾನ್ರನ್ನ ನೋಡಬೇಕು. ನನ್ನ ಮಗೂನ ನೋಡಬೇಕು ಅಂತ ಕೂಡಾ ಕೇಳಿದಳಲ್ಲಾ !" ಎಂದು ಹುಚ್ಚರಂತೆ ಡಾಕ್ಟರ ಭುಜಹಿಡಿದು ಅಂಗಲಾಚಿಕೊಂಡರು. ಅವಕ್ಕೆ ಡಾಕ್ಟರು, "ಮಿ|| ಸುಬ್ಬಣ್ಣಾ. ನನಗೂ ಹೆಚ್ಚಿಗೆ ವಿವರಾ ತಿಳೀದು. ನಿನ್ನೇ ರಾತ್ರಿ ನಾನೊಂದು ಸಲ ವಾರ್ಡಿಗೆ ಹೋಗಿದ್ದೆ. ಆಗ ನಿಮ್ಮ ಮಗಳು ಎಲ್ರಹತ್ರ ಮಾತುಕತೆಯಾಡ್ತಾ ಚೆನ್ನಾಗೇ ಇದ್ದಳು. ರಾತ್ರಿ ನರ್ಸ್ ಬ್ರೆಡ್ಡೂ ಹಾಲೂ ಕೊಡೋಕ್ಕೆ ಹೋದಾಗ ಬೇಡಾಂತ ಹೇಳಿದಳಂತೆ ನಿಮ್ಮ ಮಗಳು. ಸ್ವಲ್ಪ ಹೊತ್ತಿನ ಮೇಲೆ ನಾನೂ ಹೋಗಿ ಒಂದು ಇಂಜಕ್ಷನ್ ಕೂಡಾ ಕೊಟ್ಟು ಬಂದೆ. ಆಗ ನಿಮ್ಮ ಮಗಳು ಸುಮ್ನೇ ಅಳ್ತಾ ಇದ್ದಳು. "ಯಾಕಮ್ಮಾ ಅಳ್ತಿದೀಯ. ಏನಾದರೂ ಬೇಕಿದ್ದರೆ ಹೇಳು ತರಿಸಿಕೊಡ್ತೇನೆ. ಮನೆಯವರು ಯಾರನ್ನಾದರೂ ನೋಡಬೇಕಾಗಿದ್ರೆ ಹೇಳು. ನಿಮ್ಮ ತಂದೆಯವರಿಗೆ ಹೇಳಿ ಕಳಿಸ್ತೇನೇಂತ ಹೇಳಿದೆ. ಅದಕ್ಕೆ ಆಕೆ "ನನ್ನ ಯಜಮಾನ್ರನ್ನ ಒಂದು ಸಲ ನೋಡಬೇಕೂಂತ ಚಪಲ. ನಾನು ಆಸ್ಪತ್ರೇಲಿರೋದು ಅವರಿಗೆ ಗೊತ್ತಿದ್ರೂ ನನ್ನ ನೋಡೋಕ್ಕೆ ಬರಲೇಇಲ್ಲವಲ್ಲಾ ! ಅವರ ಮನಸ್ಸೆಷ್ಟು ಕಠಿನವಾಗಿದೆ. ನನ್ನ ವಿಷಯದಲ್ಲೀಂತ ನನಗೆ ಬಹಳ ಸಂಕಟ" ಎಂದು ಹೇಳಿಕೊಂಡು ಬಿಕ್ಕಿಬಿಕ್ಕಿ ಅಳತೊಡಗಿದಳು.

ಆಗ ಆಕೆಗೇನು ಸಮಾಧಾನ ಹೇಳಬೇಕೆಂಬುದೇ ನನಗೆ ತೋಚಲಿಲ್ಲ. ನಾನು ತೆಪ್ಪಗೆ ಬಂದುಬಿಟ್ಟೆ ಮಿ|| ಸುಬ್ಬಣ್ಣ. ಬೆಳಗಿನ ಜಾವ ಐದು-ಐದೂ

ವರೆ ಗಂಟೇಲಿ ಡ್ಯೂಟೀ ನರ್ಸ್ ಹೋಗಿ ನೋಡಿದಾಗ ನಿಮ್ಮ ಮಗಳು ಹೋಗಿಬಿಟ್ಟಿದ್ದಳಂತೆ !! ಏನೇ ಹೇಳಿ, ಬಹಳ ಸಡನ್ ಡೆತ್ !! ನಿಮ್ಮ ಮಗಳಿಗೆ ಸೀರಿಯಸ್ ಮೆಂಟಲ್ ಷಾಕ್ ಮಿ|| ಸುಬ್ಬಣ್ಣ. ಏನುಮಾಡೋದು ಹೇಳಿ. ನಮ್ಮಿಂದಾಗುವ ಪ್ರಯತ್ನವೆಲ್ಲಾ ಮಾಡಿದಿವಿ. ಆದರೆ ಏನೂ ಪ್ರಯೋಜನವಾಗಲಿಲ್ಲ" ಎಂದರು.

ಡಾಕ್ಟರೂ ಹೆಡ್‌ನರ್ಸೂ ವಾರ್ಡಿಗೆ ಹೋದರು. ಅವರ ಹಿಂದೆಯೇ ದಂಪತಿಗಳಿಬ್ಬರೂ ಹೋದರು. ವಾರ್ಡ್‌ನರ್ಸ್ ಮಂಚವನ್ನು ಮುಚ್ಚಿದ್ದ ಸ್ಕ್ರೀನನ್ನು ಸ್ವಲ್ಪ ಓರೆಮಾಡಿದಳು. ದಂಪತಿಗಳಿಬ್ಬರೂ ಹತ್ತಿರ ಹೋಗಿ ನೋಡಿದರು. ತಮ್ಮ ಮಗಳು ಸತ್ತುಹೋಗಿದ್ದಾಳೆಂದು ನಂಬುವುದೇ ಅವರಿಗೆ ಅಸಾಧ್ಯವಾಗಿ ಹೋಯಿತು. ಶಾರದೆ ದೀರ್ಘ ನಿದ್ರಾಪರವಶಳಾಗಿದ್ದಳು ! ಅವಳಮೊಗ ಎಂದಿನಂತೆಯೇ ಪ್ರಶಾಂತವಾಗಿತ್ತು. ತುಟಿಗಳ ಮೇಲೆ ಲಾಸ್ಯ ವಾಡುತ್ತಿದ್ದ ಮುಗುಳ್ನಗೆ ಹಾಗೆಯೇ ಅಚ್ಚಳಿಯದಿತ್ತು. ಆ ದಾರುಣ ದೃಶ್ಯವನ್ನು ನೋಡಿ ಭಾಗ್ಯಮ್ಮನವರಿಗೆ ದುಃಖ ಹಿಡಿಸಲಿಲ್ಲ. "ಅಯ್ಯೋ ಶಾರದಾ. ಹೋಗಿಬಿಟ್ಟೆಯಾ ನನ್ನಮ್ಮಾ" ಎನ್ನುತ್ತಾ ಶವದ ಮೇಲೆ ಬಿದ್ದು ರೋದಿಸತೊಡಗಿದರು. "ಅಳಬೇಡಕಣೇ. ಅತ್ತು ಏನೂ ಪ್ರಯೋಜನವಿಲ್ಲ. ಅಂಥ ಮುತ್ತಿನಂಥ ಮಗಳನ್ನ ಕಳಕೊಂಡು ಇಬ್ಬರೂ ಈವತ್ತು ಅನಾಥ ರಾದಿವಿ !" ಎನ್ನುತ್ತಾ ಸುಬ್ಬಣ್ಣ ತಮ್ಮ ಹೆಂಡತಿಯ ಕೈ ಹಿಡಿದೆತ್ತಿದರು.

"ವಾರ್ಡಿನಲ್ಲಿ ಹಾಗೆಲ್ಲಾ ಅಳಬೇಡೀಮ್ಮ. ಮಿಕ್ಕ ಪೇಷಂಟ್ಸ್‌ಗೆ ತೊಂದ್ರೆಯಾಗತ್ತೆ" ಎನ್ನುತ್ತಾ ವಾರ್ಡ್‌ನರ್ಸ್ ಸ್ಕ್ರೀನನ್ನು ಮೊದಲಿನಂತೆ ಮುಚ್ಚಿಬಿಟ್ಟಳು. ತಮ್ಮ ಹೆಂಡತಿಯನ್ನು ಕೈ ಹಿಡಿದು ವಾರ್ಡಿನಿಂದ ಹೊರಕ್ಕೆ ಕರೆದುಕೊಂಡು ಹೋದರು ಸುಬ್ಬಣ್ಣ.

## ೨೬

ಬೇಸಿಗೆ ರಜಾಬಂದೀತೇ ಎಂದು ಚಾತಕ ಪಕ್ಷಿಯಂತೆ ಎದುರುನೋಡು ತ್ತಿದ್ದ ಶ್ರೀಧರ. ಕಡೆಗೂ ಅದು ಬಂದೇಬಂತು. ಬೇಸಿಗೆ ರಜದ ಕಾರ್ಯ ಕ್ರಮ ಈ ಮೊದಲೇ ತೀರ್ಮಾನವಾಗಿ ಹೋಗಿತ್ತು. ಶ್ರೀಧರನ ನಾಲ್ಕೈದು ಮಂದಿ ಆಪ್ತಮಿತ್ರರು ಅವನಿಗೆ ಬೆಂಬಲಿಗರಾಗಿ ನಿಂತರು. ಶ್ರೀಧರನ ಕೆಲಸ

ಕಾರ್ಯಗಳಲ್ಲಿ ಅವನದೇ ಆದ ಒಂದು ಶಿಸ್ತಿರುತ್ತಿತ್ತು. ಒಂದು ವ್ಯವಸ್ಥೆ ಯಿರುತ್ತಿತ್ತು. ಯಾವ ಕೆಲಸಕ್ಕೂ ಕೈ ಹಚ್ಚುವ ಮುಂಚೆ, ಅದರ ಬಗ್ಗೆ ಒಂದು ನಿರ್ದಿಷ್ಟವಾದ ಯೋಜನೆಯನ್ನು ಸಿದ್ಧಪಡಿಸಿ, ಅದರಂತೆ ನಡೆಯು ವುದು ಅವನ ಪದ್ಧತಿಯಾಗಿತ್ತು. ಅವನು ಉದ್ದೇಶಿಸಿದ್ದ ಕಾರ್ಯಕ್ರಮಗಳಲ್ಲಿ ವಯಸ್ಕರ ವಿದ್ಯಾಭ್ಯಾಸ, ಗ್ರಾಮ ನಿರ್ಮಲೀಕರಣ, ಸಣ್ಣ ಸಣ್ಣ ಪ್ರಚಾರ ಭಾಷಣಗಳ ಮೂಲಕ ಗ್ರಾಮಸ್ಥರಿಗೆ ಗ್ರಾಮಾಭ್ಯುದಯದ ಬಗ್ಗೆ ಸಾಕಷ್ಟು ತಿಳುವಳಿಕೆ ನೀಡುವುದು—ಇವು ಮುಖ್ಯವಾದುವು. ತನ್ನ ಮಿತ್ರರೆಲ್ಲರೂ ತನ್ನೊಡನೆ ಸಹಕರಿಸಿ ತಾನು ತಯಾರಿಸಿದ್ದ ಯೋಜನೆಯನ್ನು ಕಾರ್ಯ ರೂಪಕ್ಕೆ ತರಬೇಕೆಂಬುದಾಗಿ ಅವರಲ್ಲಿ ಮನವಿಮಾಡಿಕೊಂಡಿದ್ದ. ಕಾಲೇಜಿನ ಟರ್ಮು ಮುಗಿಯುವ ಮುಂಚೆಯೇ ಕಾಲೇಜಿನ ಪ್ರೊಫೆಸರುಗಳು ಒಬ್ಬೊಬ್ಬ ರಿಂದ "ವಿದ್ಯಾರ್ಥಿಗಳೂ ಸಮಾಜಸೇವೆಯೂ" ಎಂಬ ವಿಚಾರದ ಬಗ್ಗೆ ಉಪನ್ಯಾಸ ಮಾಲೆಯನ್ನೇರ್ಪಡಿಸಿದ್ದ. ಆದರೆ ಶ್ರೀಧರನ ಕರೆಗೆ ಓಗೊಟ್ಟ ವರು ಕೇವಲ ಎಂಟು-ಹತ್ತು ಮಂದಿ ಮಾತ್ರ. ಅಷ್ಟು ಮಂದಿಯಾದರೂ ಶ್ರದ್ಧೆ, ಉತ್ಸಾಹಗಳಿಂದ ತನ್ನೊಂದಿಗೆ ಸಹಕರಿಸಲು ಮುಂದೆ ಬಂದರಲ್ಲಾ ಎಂದು ಶ್ರೀಧರ ಸಂತೋಷಗೊಂಡ. ಅವನ ಮಿತ್ರಮಂಡಲಿಯವರು ಗ್ರಾಮಸಂಚಾರಕ್ಕಾಗಿ ಒಳ್ಳೆಯ ಭರಾಟೆಯಿಂದ ಸಿದ್ಧತೆಗಳನ್ನು ಮಾಡಿಕೊಳ್ಳ ತೊಡಗಿದರು. ಹೋದ ಕಡೆಗಳಲ್ಲೆಲ್ಲಾ ಊಟದ ವ್ಯವಸ್ಥೆ ಮಾಡಿಕೊಳ್ಳಲು ಪಾತ್ರೆ ಪದಾರ್ಥಗಳನ್ನು ಜಮಾಯಿಸಿದರು. ಪ್ರಾರಂಭದ ಹಣವಾಗಿ, ಪ್ರತಿಯೊಬ್ಬರೂ ತಲಾ ಹತ್ತು ರೂಪಾಯಿ ಚಂದಾ ಹಣವನ್ನು ಶ್ರೀಧರನ ಕೈಲಿ ಹಾಕಿಬಿಟ್ಟರು. ಒಟ್ಟು ನೂರು ರೂಪಾಯಿ ಸಂದಾಯವಾಯಿತು. ಅದು ಸಾಲದೇಹೋದಲ್ಲಿ ಹಣಸಹಾಯ ಮಾಡುವುದಾಗಿ ಅನಂತರಾಮಯ್ಯ ವಾಗ್ದಾನ ಮಾಡಿದ. ಪ್ರತಿಯೊಬ್ಬರೂ ತಮತಮಗೆ ಬೇಕಾದ ಹಾಸಿಗೆ ಬಟ್ಟೆಗಳನ್ನು ತೆಗೆದುಕೊಂಡರು.

ಸಂಚಾರ ಹೊರಡುವ ಮುಂಚೆ ಚಂದ್ರವದನೆ ಯನ್ನೊಮ್ಮೆ ನೋಡಿ ಕೊಂಡು ಬರೋಣವೆಂದೆನ್ನಿಸಿತು ಶ್ರೀಧರನಿಗೆ. ಊಟ ತೀರಿಸಿಕೊಂಡು ನೆಟ್ಟಗೆ ಸರಸ್ವತೀಪುರಕ್ಕೆ ನಡೆದ. ಅಭ್ಯಾಸಬಲದಿಂದ ಅವನ ಕಾಲುಗಳು ಥಟ್ಟನೆ "ಬೃಂದಾವನ"ದ ಹತ್ತಿರ ನಿಂತವು. ಮಹಡಿಯ ಮೇಲಿಂದ

ರೇಡಿಯೋ ಸಂಗೀತ ಅಲೆಯಲೆಯಾಗಿ ತೇಲಿಬರುತ್ತಿತ್ತು. ಬೀದಿಯಬಾಗಿಲು ಮುಚ್ಚಿತ್ತು. ಒಂದೆರಡುಸಲ ಮೆಲ್ಲನೆ ಬಾಗಿಲು ತಟ್ಟಿದ ಶ್ರೀಧರ. ಒಳಗಿಂದ "ಯಾರದು ?" ಎಂಬ ಬಿರುಸಿನ ಧ್ವನಿ ಕೇಳಿಬಂತು. ಶ್ರೀಧರ ತುಸುಗಾಭರಿಯಾದ. ಹಾಗೆ ಅದುವರೆಗೂ ಅವನನ್ನು ಪ್ರಶ್ನಿಸಿದ್ದವರು ಯಾರೂ ಇರಲಿಲ್ಲ ಆ ಮನೆಯಲ್ಲಿ. "ಬೃಂದಾವನ" ತನ್ನ ಸ್ವಂತ ಮನೆಗಿಂತಲೂ ಹೆಚ್ಚಾಗಿತ್ತು ಶ್ರೀಧರನಿಗೆ. ಆ ಮನೆಯಲ್ಲಿ ಅವನಿಗೆ ಸಂಪೂರ್ಣ ಸ್ವಾತಂತ್ರ್ಯವಿತ್ತು. ಮನೆಯವರು ತನಗಿತ್ತಿದ್ದ ಸ್ವಾತಂತ್ರ್ಯವನ್ನು ಎಂದೂ ದುರುಪಯೋಗಪಡಿಸಿಕೊಂಡವನಲ್ಲ ಶ್ರೀಧರ. ಅಂತೆಯೇ ಅವನು ಮನೆಯವರ ಪ್ರೀತಿ ವಿಶ್ವಾಸಗಳಿಗೆ ಪಾತ್ರನಾಗಿದ್ದುದು ಮಾತ್ರವಲ್ಲದೆ, ಆ ಮನೆಯಲ್ಲಿ ಗಣ್ಯಸ್ಥಾನವೊಂದನ್ನು ಗಳಿಸಿಕೊಂಡಿದ್ದ.

ಪರಿಸ್ಥಿತಿ ಹೀಗಿರುವಾಗ, ಯಾರೋ ಆಗುಂತಕರೊಬ್ಬರನ್ನು ಪ್ರಶ್ನಿಸುವ ಹಾಗೆ 'ಯಾರದು?' ಎಂದು ತನ್ನನ್ನು ಕೇಳಬೇಕಾದ ಪ್ರಮೇಯವಾದರೂ ಏನಿದ್ದಿರಬಹುದೆಂದು ಶ್ರೀಧರ ಯೋಚಿಸ ತೊಡಗಿದ. ಪುನಃ ತಾನೇ 'ಯಾರೋ ಪಾಪ ನೆಂಟರು ಬಂದಿರಬಹುದು. ಅವರಿಗೇನು ಗೊತ್ತು ನನ್ನ ಕುಲಗೋತ್ರಗಳು' ಎಂದು ಸಮಾಧಾನ ಚಿತ್ತನಾದ.

ಹೊರಗಡೆಯಿಂದ ಬೇಗ ಉತ್ತರ ಬರಲಿಲ್ಲವಾದ್ದರಿಂದ ಒಳಗಿದ್ದವರೇ ಬಾಗಿಲು ತೆರೆದರು. ಬಾಗಿಲು ತೆರೆದವರ್ಯಾರೆಂದು ಶ್ರೀಧರ ಒಮ್ಮೆ ತಲೆಯೆತ್ತಿ ನೋಡಿದ. ನಡು ವಯಸ್ಸು ದಾಟಿರಬಹುದಾದ ಅಜಾನುಬಾಹು ವ್ಯಕ್ತಿಯೊಂದು ಎದುರಿಗೆ ನಿಂತಿತ್ತು. ಆ ವ್ಯಕ್ತಿಯೂ ಶ್ರೀಧರನನ್ನು ಒಮ್ಮೆ ಆಪಾದಮಸ್ತಕವಾಗಿ ಅವಲೋಕಿಸಿತು. ಶ್ರೀಧರ ಆ ವ್ಯಕ್ತಿ ತನ್ನನ್ನು ಈಕ್ಷಿಸಿದ ಬಗೆಯನ್ನು ಕಂಡು ಚಕಿತನಾದ.

"ನೀವು ಯಾರು? ಏನಾಗಬೇಕಿತ್ತು?" ಬಾಗಿಲು ತೆರೆದ ವ್ಯಕ್ತಿ ಗಂಭೀರವಾಗಿ ಕೇಳಿತು.

"ನನ್ನ ಹೆಸರು ಶ್ರೀಧರಾಂತ. ಇಲ್ಲೇ ಕಾಲೇಜಲ್ಲಿ ಓದ್ತಿದೇನೆ."

"ಅದು ಸರಿ. ಈಗೇನಾಗಬೇಕು?"

ಈ ಪ್ರಶ್ನೆಗೆ ಉತ್ತರಿಸುವುದು ಶ್ರೀಧರನಿಗೆ ಕಷ್ಟವಾಯಿತು. ಏನಾಗಬೇಕಾಗಿದೆಯೆಂದು ಕೇಳಿದರೆ ಏನು ಹೇಳುವುದು! ತನ್ನೊಡನೆ ಮಾತಾಡು

ಶ್ರೀಮಂತರು ಯಾರೋ ಏನೋ ಅವನಿಗೆ ತಿಳಿಯದು. ಹಾಗೂ ಬಾಯಿಬಿಟ್ಟು ಚಂದ್ರವದನೆಯನ್ನು ನೋಡಬೇಕಾಗಿದೆಯೆಂದು ಹೇಳಿದರೆ ಅವರು ತನ್ನ ಬಗ್ಗೆ ಏನು ದುರಭಿಪ್ರಾಯ ಪಡುತ್ತಾರೋ ಎಂಬ ಶಂಕೆ ತಲೆದೋರಿತವನಿಗೆ. ಅವನ ಮನಸ್ಸಿನ ಕಸಿವಿಸಿಯನ್ನು ಅರ್ಥ ಮಾಡಿಕೊಂಡ ಆ ಗೃಹಸ್ಥರು ತುಸು ನಕ್ಕು, "ಓಹೋ, ಸರಿ ಸರಿ. ನಮ್ಮ ಚಂದ್ರಳನ್ನು ಕಾಣಬೇಕಿತ್ತೋ! ಬನ್ನಿ ಒಳಗೆ. ಕೂತ್ಕೊಳ್ಳಿ" ಎಂದು ಸ್ವಾಗತ ನೀಡಿದರು. ಶ್ರೀಧರ ಬದುಕಿದೆಯಾ ಬಡಜೀವವೇ ಎಂದುಕೊಳ್ಳುತ್ತಾ ಹಾಲಿನಲ್ಲಿ ಹೋಗಿ ಕೂತ. ಅಷ್ಟು ಹೊತ್ತಿಗೆ ಆ ಮನೆಯಲ್ಲಿ ಅವನಿಗೆ ಚಿರಪರಿಚಿತರಾಗಿದ್ದ ಸುರಮಾಬಾಯಿ ಅಲ್ಲಿಗೆ ಬಂದರು. ಶ್ರೀಧರನನ್ನು ಕಂಡಕೂಡಲೇ ಅವರು ಆಶ್ಚರ್ಯಗೊಂಡು, "ಓಹೋ ಇದೇನಪ್ಪಾ! ಇಷ್ಟೊಂದು ಅಪರೂಪವಾಗಿ ಬಿಟ್ಟೆಯಲ್ಲಾ? ಈ ನಡುವೇ ಮನೆಗೆ ಬರೋದೇ ಬಿಟ್ಬಿಟ್ಟೇ" ಎಂದು ಉದ್ಗಾರ ತೆಗೆದರು.

ಶ್ರೀಧರ ನಗುತ್ತಾ ಉತ್ತರಿಸಿದ "ಬರದೇ ಏನು ತಾಯಿ. ಈ ಸಲ ಪ್ರಿಲಿಮಿನರೀ ಪರೀಕ್ಷೆಯಾದ್ದರಿಂದ ಓದಿಕೊಳ್ಳೋದು ಬಹಳವಿತ್ತು. ಇಡೀ ವರ್ಷವೆಲ್ಲಾ ಕಾಲಹರಣ ಮಾಡಿಬಿಟ್ಟಿದ್ದೆ. ಪರೀಕ್ಷೆಗೆ ಒಂದೆರಡು ತಿಂಗಳಿದೆ ಯೆನ್ನುವಾಗಲೂ ಓದದಿದ್ದರೆ ಗತೀ ಏನು ಹೇಳಿ. ಸದ್ಯ ಪರೀಕ್ಷೆ ಮುಗಿದು ಹೋಯಿತೂನ್ನಿ. ಇನ್ನು ಮುಂದಿನ ವರ್ಷ ನೋಡಿಕೊಳ್ಳೋಣ."

"ಚಂದ್ರಾ! ಲೇ ಚಂದ್ರಾ!" ಎಂದು ಸುರಮಾಬಾಯಿ ಮಗಳನ್ನು ಕೂಗಿದರು. ಬಂದೇ ಎನ್ನುತ್ತಿದ್ದ ಹಾಗೆಯೇ ಢಡಢಡನೆಂದು ಮಹಡಿಯಿಂದ ಇಳಿದು ಬಂದಳು ಚಂದ್ರವದನೆ.

"ಓಹೋ, ನೀವು ಯಾವಾಗ ಬಂದಿರೀ ಮಿ|| ಶ್ರೀಧರ್. ನನಗೆ ಗೊತ್ತಾಗಲೇ ಇಲ್ಲವಲ್ಲಾ" ಎನ್ನುತ್ತಾ ಬೆತ್ತದ ಕುರ್ಚಿಯೊಂದನ್ನೆಳೆದು ಕೊಂಡು ಅವನ ಸಮೀಪದಲ್ಲಿ ಕೂತಳು ಚಂದ್ರವದನೆ.

"ಈಗತಾನೇ ಬಂದೆ. ಸಂಚಾರ ಹೊರಡುವ ಮುಂಚೆ ನಿಮ್ಮನ್ನೊಂದು ಸಲ ನೋಡಿಕೊಂಡು ಹೋಗೋಣಾಂತ ಬಂದೆ. ನಾಳೆ ಬೆಳಗ್ಗೆ ನಾವು ಹೊರಡ್ತೇವೆ."

" ಎಲ್ಲಿಗೆ ಸಂಚಾರ ಹೊರಡ್ತೀರಿ ಏನುಕತೆ ! ನನಗೊಂದೂ ಹೇಳಲೇ ಇಲ್ಲವಲ್ಲಾ ಮಿ|| ಶ್ರೀಧರ್ !"

" ಅದೇ ಮನ್ನೆ ಸ್ಟಡೀ ಸರ್ಕಲಿನಲ್ಲಿ ಡಿಸ್‌ಕಸ್ ಮಾಡ್ಲಿಲ್ಲವೇ ನಾವು. 'ವಿದ್ಯಾರ್ಥಿಗಳೂ, ಸಮಾಜಸೇವೆಯೂ' ಎಂಬ ವಿಷಯದ ಮೇಲೆ ನಮ್ಮ ಕಾಲೇಜಲ್ಲಿ ಭಾಷಣಗಳಾಗಲಿಲ್ಲವೇ. ಆಗ ನಾವು ಸಿದ್ಧಪಡಿಸಿಕೊಂಡಿದ್ದ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಹೊರಟಿದ್ದೀವಿ. ನಮ್ಮ ಕೆಲಸ ದಲ್ಲಿ ಎಷ್ಟರಮಟ್ಟಿಗೆ ಯಶಸ್ವಿಗಳಾಗುತ್ತೇವೆಯೋ ಕಾದು ನೋಡಬೇಕಾಗಿದೆ."

" ಸರಿಸರಿ, ಈಗರ್ಥವಾಯಿತು. ನಿಮ್ಮ 'ವಯಸ್ಕರ ವಿದ್ಯಾಭ್ಯಾಸ' 'ಗ್ರಾಮಾಭ್ಯುದಯ' ಮುಂತಾದ ಚಳುವಳಿಗಳನ್ನು ಪ್ರಾರಂಭಿಸ್ತೀರೋ. ಯಾರ್‍ಯಾರು ಹೊರಡ್ತೀರಿ ! ಯಾವ್ಯಾವ ಹಳ್ಳಿಗಳಿಗೆ ಹೋಗ್ತೀರಿ !"

" ಇನ್ನೂ ಯಾರ್‍ಯಾರು ಬರ್ತಾರೋ ನಿಷ್ಕರ್ಷೆಯಿಲ್ಲ. ಒಂದು ಹತ್ತು ಜನ ಸೇರಿ ನೂರು ರೂಪಾಯಿ ಜಮಾಯಿಸಿದ್ದೇವೆ. ಪಾತ್ರೆ ಪದಾರ್ಥ ಗಳನ್ನು ಒದಗಿಸಿಕೊಂಡಿದ್ದೇವೆ. ಇದೇನೂ ದೊಡ್ಡ ರಾಷ್ಟ್ರೀಯ ಯೋಜನೆ ಯಲ್ಲ. ಕೇವಲ ಪ್ರಯೋಗ ಪರೀಕ್ಷೆ ಮಾತ್ರ."

" ನೀವು ಹೇಳಿದ್ದು ಸರಿ ಮಿ|| ಶ್ರೀಧರ್. ಓಹೋ ಮರೆತೇಹೋಯ್ತು. ಪಾಪ ಬಿಸಿಲಲ್ಲಿ ಅಷ್ಟು ದೂರದಿಂದ ನಡಕೊಂಡು ಬಂದಿದ್ದೀರಿ. ನಾನೂ ಸರಿಯೆ. ಮಾತಾಡ್ತಾ ಕೂತ್ಬಿಟ್ಟೆ. ಇರೀ ಬಂದೆ" ಎನ್ನುತ್ತಾ ಚಂದ್ರವದನೆ ಎದ್ದು ಒಳಕ್ಕೆ ಹೋದಳು. ಸ್ವಲ್ಪ ಹೊತ್ತಿನ ನಂತರ ಎರಡು ಗ್ಲಾಸುಗಳಲ್ಲಿ ನಿಂಬೇ ಹಣ್ಣಿನ ಷರಬತ್ತು ತಂದು ಮೇಜಿನಮೇಲಿಟ್ಟಳು. ಚಂದ್ರವದನೆ ಯಂದಹಾಗೆ ಊಟವಾದ ಕೂಡಲೇ ಬಿಸಲಲ್ಲಿ ನಡೆದು ಶ್ರೀಧರ ದಣಿದಿದ್ದ. ಕೂಡಲೇ ಒಂದು ಗ್ಲಾಸನ್ನು ಕೈಗೆ ತೆಗೆದುಕೊಂಡು ಕ್ಷಣಾರ್ಧದಲ್ಲಿ ಅದನ್ನು ಬರಿದುಮಾಡಿಬಿಟ್ಟ. ಆ ಒಂದು ಗ್ಲಾಸು ಪಾನೀಯ ದಣಿದಿದ್ದ ಅವನ ಮೈ ಮನಗಳೆರಡಕ್ಕೂ ತಣ್ಣನ್ನುಂಟುಮಾಡಿತು.

" ಈಗ ನನಗೋಸ್ಕರ ಮಾಡಿದಿರಾ ಷರಬತ್ತನ್ನ. ಸುಮ್ನೇ ತೊಂದ್ರೆ ತೆಗೆದುಕೊಂಡಿರಿ." ಶ್ರೀಧರನಂದ.

" ತೊಂದ್ರೆಯೇನು ಬಂತು. ನಮ್ಮ ಮನೇ ಪದ್ಧತಿ ನಿಮಗೆ ಗೊತ್ತಿ ಲ್ಲವೇ ಮಿ|| ಶ್ರೀಧರ್. ನಮ್ಮನೇಗೆ ಯಾರು ಎಷ್ಟೊಹೊತ್ತಿಗೆ ಬಂದ್ರೂ

ಹಾಗೇ ಕಳಿಸೋಲ್ಲ. ನಿಮಗೆ ತಿಳಿದ ಹಾಗೇನೇ ನಮ್ಮ ತಾಯಿಾ ಕಾಫೀ ಕುಡಿಯೋಲ್ಲ. ಅವರು ಮಧ್ಯಾಹ್ನದ ಹೊತ್ತು ಷರಬತ್ತೇ ಕುಡಿಯೋದು. ಸಮ್ಮರ್ ಷುರುವಾದಾಗಿನಿಂದ ಮಧ್ಯಾಹ್ನದ ಹೊತ್ತೂ ನಾನೂ ಷರಬತ್ತೇ ಕುಡಿಯುತ್ತಿದೀನಿ."

ಅಷ್ಟು ಹೊತ್ತಿಗೆ ಸುರಮಾಬಾಯಿ ಎರಡು ಬೆಳ್ಳಿಯ ತಟ್ಟೆಗಳನ್ನು ಟೇಬಲ್ಲಿನಮೇಲೆ ತಂದಿಟ್ಟರು. "ಇದೇನು ತಾಯಿಾ, ಇಷ್ಟೆಲ್ಲಾ ಉಪಚಾರ ಮಾಡ್ತೀರಿ ನನಗೆ! ಅದಕ್ಕೇ ನಾನು ಸರಾಗವಾಗಿ ಬರೋಲ್ಲ ನಿಮ್ಮನೇಗೆ. ನಾನು ಬಂದ್ರೇ ಸರಿ ನೀವೇನಾದರೂ ತಿಂಡೀ ತೀರ್ಥ ಮಾಡದೇ ಇರೋಲ್ಲ. ನನ್ನಿಂದ ನಿಮಗೆ ವೃಥಾ ತೊಂದರೆ." ಶ್ರೀಧರ ಸಂಕೋಚದಿಂದ ನುಡಿದ.

"ನಿಮಗೋಸ್ಕರ ನಾನು ಮಾಡಿಲ್ಲಪ್ಪಾ. ನಮ್ಮ ಮನೇಲಿ ತಿಂಡಿ ಯಿಲ್ಲದೆ ಒಂದು ದಿನವೂ ಸಾಗೋಲ್ಲ. ಪರವಾಗಿಲ್ಲ ತಗೋಪ್ಪ. ನೀನೂ ನಮ್ಮನೇಗೆ ಸೇರಿದವನೇ."

"ತಗೊಳ್ಳಿ ಮಿ|| ಶ್ರೀಧರ್. ನಾಳೆಯಿಂದ ವನವಾಸ ಷುರುವಾಗುತ್ತೆ. ಎಲ್ಲಿಯ ಹಳ್ಳಿಯೋ ಏನು ಕತೆಯೋ. ಹೊತ್ತೊತ್ತಿಗೆ ಊಟಾ ತಿಂಡೀ ನಿಮಗೆಲ್ಲಿ ಸಿಗುತ್ತೆ."

"ಅದಕ್ಕೆಲ್ಲಾ ನಾವು ಸರಿಯಾದ ಏರ್ಪಾಡು ಮಾಡಿದ್ದೀವೀನ್ರಿ."

ಅಂದು ಮಧ್ಯಾಹ್ನದ ಫಲಹಾರಕ್ಕೆ ಸುರಮಾಬಾಯಿ ಕಾರದವಲಕ್ಕಿ, ಮತ್ತು ಬೇಸನ್ ಲಾಡುಗಳನ್ನು ಮಾಡಿದ್ದರು. ಇವೆರಡೂ ಶ್ರೀಧರನಿಗೆ ಇಷ್ಟವಾಗಿದ್ದ ತಿಂಡಿಗಳು. ಅವನು ಸಂತೋಷದಿಂದ ತಟ್ಟೆಗೆ ಕೈಹಾಕಿದ.

"ನಾನೂ ನಾಳೆ ನಿಮ್ಮ ಜತೇಲಿ ಬರ್ತೇನೆ. ಕರ್ಕೊಂಡು ಹೋಗ್ತೀರಾ ಮಿ|| ಶ್ರೀಧರ್!"

"ನಾನು ಕರಕೊಂಡು ಹೋಗೋದೇನುಬಂತು. ಅಗತ್ಯವಾಗಿ ಬನ್ನಿ. ನಮಗೂ ಸಂತೋಷವೇ."

"ನಮ್ಮ ಕೆಲಸವೇನೂಂತೀರಿ. ನಿಮಗೆಲ್ಲಾ ಅಡಿಗೇ ಮಾಡಿ ಹಾಕೋದು ತಾನೇ." ನಕ್ಕು ನುಡಿದಳು ಚಂದ್ರವದನೆ.

"ಅಡಿಗೆಯೊಂದೇ ಅಲ್ಲ. ನೀವು ಮಾಡಬೇಕಾದ ಕೆಲಸ ಇನ್ನೂ ಇದೆ. ಹೇಗಿದ್ರೂ ನಾಳೆ ನಮ್ಮ ಜತೇಲಿ ಬರ್ತೀರಲ್ಲ. ನೀವು ಮಾಡಬೇಕಾದ ಕೆಲಸವೇನೆಂದು ನಿಮಗೇ ತಿಳಿಯುತ್ತೆ."

"ಟೂರಿಗೆ ಏನೇನು ತಗೋಬೇಕು ಹೇಳಿಬಿಡಿ. ಈಗಲೇ ಎಲ್ಲಾ ಸವರಿಸಿಕೊಂಡುಬಿಡ್ತೇನೆ."

"ಹೆಚ್ಚಿಗೆ ಏನೂ ತೆಗೆದುಕೊಳ್ಳಬೇಡಿ. ನಿಮ್ಮ ಸಾಮಾನೆಲ್ಲಾ ಒಂದು ಹೋಲ್ಡಾಲಿನಲ್ಲಿ ಭರ್ತಿಮಾಡಿಬಿಡಿ. ಅಂದಹಾಗೆ ಜ್ಞಾಪಕಕ್ಕೆ ಬಂತು. ನಿಮಗೆ ತೊಂದರೆಯಾಗದಿದ್ರೆ, ನಿಮ್ಮ ಜತೇಲಿ ನಿಮ್ಮ ಹಾಡಿನ ಪುಸ್ತಕಾ, ಹಾರ್ಮೋನಿಯಮ್ಮೂ ಇದ್ದುಬಿಟ್ರೆ ಬಹಳ ಅನುಕೂಲ."

"ಅಗತ್ಯವಾಗಿ ತರ್‍ತೇನೆ ಮಿ|| ಶ್ರೀಧರ್. ನಾಳೆ ಎಷ್ಟೊತ್ತಿಗೆ ಹೊರಡೋ ದೂಂತ ಏರ್ಪಾಡು?"

"ತಿಂಡೀ ಕಾಫೀ ಮುಗಿಸಿಕೊಂಡು ಬೆಳಿಗ್ಗೆ ಒಂಭತ್ತಕ್ಕೆಲ್ಲಾ ಹೊರಡ ಬೇಕೆಂದಿದ್ದೇವೆ."

"ಏನು ಕಾಲ್ನಡಿಗೆಯಲ್ಲೋ."

"ರೈಲಿರುವ ಕಡೆ ರೈಲಲ್ಲಿ. ಬಸ್ಸಿರುವ ಕಡೆ ಬಸ್ಸಿನಲ್ಲಿ. ಇವೆರಡೂ ಇಲ್ಲದಿರುವ ಕಡೆ ಗೊತ್ತೇಇದೆ."

ಅಷ್ಟು ಹೊತ್ತಿಗೆ ಇಬ್ಬರ ತಟ್ಟೆಗಳೂ ಬರಿದಾಗದ್ದುವು. ಶ್ರೀಧರ ಒಂದು ಲೋಟಾ ನೀರು ಕುಡಿದೆದ್ದ. "ಸರಿ ನಾನಿನ್ನು ಬರ್‍ತೇನೆ. ಇನ್ನೂ ಪ್ರಯಾಣಸಿದ್ಧತೆಗಳಾಗಬೇಕಾಗಿವೆ. ಸ್ವಲ್ಪ ಪೇಟೆಗೆ ಹೋಗಿ ಬರಬೇಕಾಗಿದೆ."

"ಇನ್ನು ಹೊರಡೀ ಮಿ|| ಶ್ರೀಧರ್. ನಿಮಗೆ ಹೊತ್ತಾಗುತ್ತೆ. ನಾಳೆ ಬೆಳಿಗ್ಗೆ ಒಂಭತ್ತಕ್ಕೆ ಕಾಲೇಜಿನ ಹತ್ರ ಇದ್ರೆ ಸರೀತಾನೇ."

"ಇನ್ನೂ ಬೇಗಲೇ ಬಂದರೆ ಅನುಕೂಲ."

"ಆಗಬಹುದು ಮಿ|| ಶ್ರೀಧರ್. ಆದಷ್ಟು ಬೇಗ ಬರ್‍ತೀನಿ."

"ನಾನಿನ್ನು ಬರಲೇ."

"ನೀವಿನ್ನು ಹೊರಡಿ ಮಿ|| ಶ್ರೀಧರ್."

ಶ್ರೀಧರ ಮನೆಯಿಂದ ಹೊರಬಿದ್ದ. ಬೀದಿಯಬಾಗಿಲು ಮುಚ್ಚಿ ಚಂದ್ರವದನೆ ಮಹಡಿ ಹತ್ತಿದಳು.

೨೭

ಶ್ರೀಧರನ ಮಿತ್ರಮಂಡಲಿ ಮೈಸೂರಿಗೆ ಹದಿನೈದು ಮೈಲಿ ದೂರದಲ್ಲಿದ್ದ ಹಳ್ಳಿಯೊಂದನ್ನು ಹನ್ನೊಂದುಗಂಟೆಯ ಹೊತ್ತಿಗೆ ತಲುಪಿತು. ನಂಜನ

ಗೂಡಿನತನಕಾ ರೈಲಿನಲ್ಲಿ ಬಂದು ನಾಲ್ಕೈದು ಮೈಲಿಗಳಷ್ಟು ಕಾಲ್ನಡಿಗೆಯ ಪ್ರಯಾಣ ಮಾಡಬೇಕಾಯಿತು. ಅವರವರ ಸಾಮಾನು ಅವರವರೇ ಹೊತ್ತಿದ್ದರು. ಚಂದ್ರವದನೆಯೂ ಸುಮಿತ್ರೆಯೂ ಕೈ ಬೀಸಿಕೊಂಡು ಬರುತ್ತಿದ್ದರು. ಅವರ ಸಾಮಾನುಗಳನ್ನು ಮಿತ್ರರೇ ಹೊತ್ತುಕೊಂಡಿದ್ದರು. ನಡಿಗೆಯಲ್ಲಿ ಸ್ವಲ್ಪ ಹಿಂದೆಬಿದ್ದಿದ್ದರು. ಎಷ್ಟಾದರೂ ಹೆಂಗಸರು ಪಾಪ. ಮೈಸೂರಲ್ಲಿ ಇಷ್ಟು ದೂರ ನಡೆಯುವ ಪ್ರಸಂಗವೆಲ್ಲಿಬಂತು? ಮನೆಯಿಂದ ಕಾಲೇಜಿಗೆ-ಕಾಲೇಜಿಂದ ಮನೆಗೆ-ಇಷ್ಟೇ ಅವರ ಸಂಚಾರ. ಆದರೂ ಅವರ ಉತ್ಸಾಹಕ್ಕೇನೂ ಕೊರತೆಯಿದ್ದಿರಲಿಲ್ಲ. ಜನತಾಸೇವೆ ಮಾಡಲು ದೊರೆತಿರುವ ಅವಕಾಶವನ್ನು ಸದುಪಯೋಗಪಡಿಸಿಕೊಳ್ಳುತ್ತೇವೆ ಎಂಬ ದೃಢ ನಿರ್ಧಾರ ಅವರಿಬ್ಬರ ಮುಖಗಳಲ್ಲೂ ಅಭಿವ್ಯಕ್ತವಾಗಿತ್ತು.

ಜನವಸತಿಯಿದೆಯೋ ಇಲ್ಲವೋ ಎಂಬುವಷ್ಟು ನಿಶ್ಶಬ್ದವಾಗಿತ್ತು ಹಳ್ಳಿಯ ವಾತಾವರಣ. ಊರ ಮುಂದುಗಡೆಯೇ ಒಂದು ಮಾರೀಗುಡಿ. ಸ್ವಲ್ಪ ದೂರದಲ್ಲೇ ಒಂದು ದೊಡ್ಡ ಅಶ್ವತ್ಥ ವೃಕ್ಷ. ಪ್ರಯಾಣದ ದಣಿವನ್ನು ನಿವಾರಿಸಿಕೊಳ್ಳಲು ಎಲ್ಲರೂ ಅಶ್ವತ್ಥ ಕಟ್ಟೆಯ ಮೇಲೆ ತಮ್ಮ ಸಾಮಾನು ಸರಂಜಾಮುಗಳನ್ನಿಟ್ಟು ಕೂತರು. ಯಾರೋ ಹೊಸಬರು ತಮ್ಮೂರಿಗೆ ಬಂದಿರುವುದನ್ನು ನೋಡಿ ಹಳ್ಳಿಯ ಹೈದರು ನಾಲ್ಕೈದು ಮಂದಿ ಅಲ್ಲಿಗೆ ಬಂದರು. ಬಂದಿದ್ದವರನ್ನು ಆಶ್ಚರ್ಯದಿಂದ ನೋಡತೊಡಗಿದರು. "ನಿಮ್ಮೂರಲ್ಲಿ ಪಾಠಶಾಲೆಯಿದೆಯೇನ್ರಯ್ಯಾ?" ಶ್ರೀಧರ ಆ ಹೈಕಳನ್ನು ಪ್ರಶ್ನಿಸಿದ.

ಪಾಠಶಾಲೆಯೆಂದರೇನೆಂಬುದು ಅರ್ಥವಾಗದೆ ಅವರು ತಬ್ಬಿಬ್ಬಾಗಿ ಒಬ್ಬರ ಮುಖ ಒಬ್ಬರು ನೋಡುತ್ತಾ ನಿಂತರು. "ಪಾಠಶಾಲೆಯೆಂದರೇ ಅವರಿಗೇನರ್ಥವಾಗತ್ತೆ ಶ್ರೀಧರಾ? ಇಸ್ಕೋಲ್ ಇದೆಯೇನ್ರಯ್ಯಾ ನಿಮ್ಮ ಹಳ್ಳಿಯಲ್ಲಿ?" ವೆಂಕಟಾದ್ರಿ ಕೇಳಿದ.

"ಐತೆಬುದ್ಧೀ. ಉಪಾಧ್ಯರೊಬ್ಬರಿದ್ದಾರೆ." ಹೈಕಳು ಹೇಳಿದರು.

"ಇಲ್ಲಿಗೆಷ್ಟು ದೂರವಾಗತ್ತೇ ನಿಮ್ಮ ಇಸ್ಕೋಲ್."

"ಸುಮಾರು ದೂರವಾಗತ್ತೇ ಬುದ್ಧೀ. ಹೀಗೇ ನೆಟ್ಟಗ್ಹೋಗಿ ಪಕ್ಕಕ್ಕೆ ತಿರಕ್ಕೊಂಡ್ರೆ ಅಲ್ಲೊಂದು ಕೆರೆಐತೆ. ಅದ್ರಪಕ್ಕದಲ್ಲೇ ಐತೇ ಬುದ್ಧೀ ಇಸ್ಕೋಲ್."

"ಮೇಷ್ಟ್ರ ಮನೆ ಎಲ್ಲಿದೆ ?"

"ನಮ್ಮ ಹಳ್ಳೀಗೆ ಮೇಷ್ಟ್ರುಯಾರೂ ಇಲ್ಲಾಸೋಮಿ. ಪಕ್ಕದ ಸೋಮನಹಳ್ಳಿಯಿಂದ ಮೇಷ್ಟ್ರು ಬೈಸ್ಕಲ್ಲಮೇಲೆ ಬರ್ತಾರೆ ದಿನಾ. ಅವ್ರು ಅಲ್ಲೀ ವಾಸವಾಗವ್ರೆ."

"ಹೋಗಲಿ ಮೇಷ್ಟ್ರು ಎಷ್ಟೊತ್ತಿಗೆಬರ್ತಾರೆ ಇಸ್ಕೋಲ್‌ಗೆ ?"

"ಹೊತ್ತಾರೆ ಬಂದು ಇಷ್ಟೊತ್ತಿಗೆ ಹೊಂಟೋಗ್ತಾರೆ ಬುದ್ಧೀ. ಪುನಾ ಬರಾಕಿಲ್ಲ."

"ಅವರ ಹೆಸರೇನು ?"

"ತಿಳೀದು ಬುದ್ಧೀ. ಅಯ್ಯನೋರ ಹೆಸ್ರು ಕೇಳೋಕಾದಾತಾ ಬುದ್ಧೀ!"

ಹಳ್ಳಿಯ ಹೈದರ ಮಾತು ಕೇಳಿ ಎಲ್ಲರೂ ಘೊಳ್ಳೆಂದು ನಕ್ಕರು. ಹುಡುಗರ ಮುಗ್ಧಸ್ವಭಾವವನ್ನು ಕಂಡು ಶ್ರೀಧರನಿಗೆ ಬಹಳ ಕನಿಕರವುಂಟಾಯಿತು.

"ನಿಮ್ಮ ಹಳ್ಳಿಯ ಶಾನುಭೋಗರ ಮನೇ ತೋರಿಸ್ತೀರೇನಪ್ಪಯ್ಯಾ?"

"ನಡೀರಿ ಬುದ್ಧಿ. ತೋರಿಸ್ತೀವಿ. ಇಲ್ಲೇ ಐತೆ ಅವ್ರಮನೆ."

"ನೀವೆಲ್ಲಾ ಇಲ್ಲೇ ಇರಿ. ನಾನೂ ಅನಂತರಾಮೈಯ್ಯನೂ ಶಾನುಭೋಗರ ಮನೇ ನೋಡಿಕೊಂಡು ಬರ್ತೀವಿ" ಎಂದು ಹೇಳಿ ಶ್ರೀಧರನೂ ಅನಂತರಾಮೈಯ್ಯನೂ ಆ ಹಳ್ಳಿಯ ಹೈದರನ್ನು ಹಿಂಬಾಲಿಸಿ ಹೋದರು. ಸ್ವಲ್ಪ ದೂರದಲ್ಲೇ ಶಾನುಭೋಗರ ಮನೆ ಸಿಕ್ಕಿತು.

ಹುಡುಗರು ಶಾನುಭೋಗರ ಮನೆಯ ಮುಂದೆ ನಿಂತು, "ಸೋಮೀ ಸೋಮೀ" ಎಂದು ಕೂಗಿದರು. ಮನೆಯೊಳಗಿಂದ ವೃದ್ಧಳಾದ ಹೆಂಗಸೊಬ್ಬಳು ಬಂದು, "ಏಕೋ ಏನಾಗಬೇಕಾಗಿತ್ತೋ ಶಾನುಭೋಗ್ರಿಂದ? ಈಗತಾನೇ ಮಡಿಯುಟ್ಟು ದೇವರಪೂಜೆ ಮಾಡ್ತಿದಾರೆ. ಆಮೇಲೆ ಬನ್ನಿ ಹೋಗಿ" ಎಂದಳು.

"ನಮಗೇನೂ ಬೇಕಾಗಿಲ್ಲಮ್ಮ. ಇವ್ರು ಯಾರೋ ಮೈಸೂರಿಂದ ಬಂದವ್ರೆ. ಶಾನುಭೋಗರ ಮನೇ ತೋರಿಸೀಂತ ಕೇಳಿದ್ರು. ಅದಕ್ಕೋಸ್ಕರ ಕರಕೊಂಡು ಬಂದ್ವಿತಾಯೀ" ಎಂದರು ಹುಡುಗರು.

ಹೊರಗೆ ಬಂದಿದ್ದಾಕೆ ಆಗುಂತಕರಿಬ್ಬರನ್ನೂ ಆಪಾದಮಸ್ತಕವಾಗಿ ಈಕ್ಷಿಸಿದಳು. ಅವರ ಉಡುಪನ್ನು ನೋಡಿ ಅವರು ವಿದ್ಯಾರ್ಥಿಗಳಿರಬಹು ದೆಂಬುದನ್ನು ಗ್ರಹಿಸಿಕೊಂಡಳು. ಆಕೆಗಾಗ ಅವರನ್ನು ಒಳಗೆ ಕರೆಯ ಬೇಕೆಂದೆನಿಸಿತು. "ಬನ್ನೀಪ್ಪಾ. ಒಳಗೆ ಬನ್ನೀ. ಅವನು ದೇವರಪೂಜೆಗೆ ಕೂತಿದ್ದಾನೆ. ಅವನಿಗೆ ಹೇಳ್ತೀನಿ" ಎಂದಳಾಕೆ.

"ಪರವಾಗಿಲ್ಲಾ ತಾಯಿ. ನಾವು ಸ್ವಲ್ಪ ಹೊತ್ತು ಬಿಟ್ಟು ಬರ್ತೀವೆ" ಎಂದ ಶ್ರೀಧರ ಸಂಕೋಚದಿಂದ.

"ಹೋಗಬೇಡಿ ಬನ್ನೀ ಅಪ್ಪಾ. ಬಂದುಬಿಡ್ತಾನೆ." ಆಕೆ ಒತ್ತಾಯ ಮಾಡಿದಳು. ಗೆಳೆಯರಿಬ್ಬರೂ ಮನೆಯೊಳಕ್ಕೆ ಹೋದರು. ಹಳೇ ಕಾಲದ ಮನೆ. ತೀರಾ ತಗ್ಗು. ಬೀದಿಯ ಬಾಗಿಲನ್ನು ಪ್ರವೇಶಿಸುತ್ತಿದ್ದಹಾಗೆಯೇ ಅನಂತರಾಮೈಯ್ಯ ತಲೆ ಹೊಡೆದುಕೊಂಡ. "ಮೆತ್ತಗಯ್ಯಾ, ಸ್ವಲ್ಪ ತಲೆ ತಗ್ಗಿಸಿಕೊಂಡು ನಡಿಯಯ್ಯಾ" ಎಂದೆಚ್ಚರಿಸಿದ ಶ್ರೀಧರ. ಅವರಿಬ್ಬರನ್ನೂ ಪಡಸಾಲೆಯಲ್ಲಿ ಚಾಪೆಯ ಮೇಲೆ ಕೂರಿಸಿ ಆಕೆ ಒಳಕ್ಕೆ ಹೊರಟುಹೋದಳು.

ಚಾಪೆಯ ಮೇಲೆ ಕುಳಿತಿದ್ದ ಗೆಳೆಯರ ದೃಷ್ಟಿ ಮನೆಯಸುತ್ತ ಹರಿಯಿತು. ಹಳೆಯಕಾಲದ ತೊಟ್ಟಿಯ ಮನೆ. ನಾಲ್ಕು ಕಡೆಗೂ ಕೊಠಡಿ ಗಳು ತಾವು ಕೂತಿದ್ದ ಪಡಸಾಲೆಯ ಮಧ್ಯದಲ್ಲಿ ಒಂದು ತೊಟ್ಟಿ. ಮದುವೇ ಮುಂಜಿ ಮುಂತಾದ ಶುಭಕಾರ್ಯಗಳಿಗಾಗಿಯೇ ನಿರ್ಮಿತವಾಗಿದ್ದ ದೊಡ್ಡ ದಾದ ಹಸೇಮಣೆ. ಅಂಗಳಕ್ಕೆ ಹೋಗಬೇಕಾದರೆ ನಡುಮನೆ ಅಡಿಗೇಮನೆ ಗಳನ್ನು ದಾಟಿಹೋಗಬೇಕು. ಅಂಗಳ ವಿಶಾಲವಾಗಿತ್ತು. ಅಂಗಳದ ಮಧ್ಯ ದಲ್ಲಿ ದೊಡ್ಡದೊಂದು ಬೃಂದಾವನ. ಅದರ ಎಡಬಲಗಳಲ್ಲಿ ಹಲವಾರು ಹೂವಿನ ಗಿಡಗಳು. ಅಂಗಳಕ್ಕೆ ಸೇರಿದಹಾಗೆಯೇ ದನದ ಕೊಟ್ಟಿಗೆ. ಎರಡು ಹಸುಗಳೂ, ನಾಲ್ಕು ಎಮ್ಮೆಗಳೂ ಇದ್ದವು.

"ಅವರು ಶಾನುಭೋಗರ ತಾಯಿಯಿರಬಹುದಲ್ಲವೇ ಅನಂತ ರಾಮೈಯ್ಯ?" ಶ್ರೀಧರ ಕೇಳಿದ.

"ಇರಬಹುದಪ್ಪಾ. ನೋಡಿದರೆ ಒಳ್ಳೇವರಹಾಗೆ ಕಾಣುತ್ತೆ."

"ಶಾನುಭೋಗರು ಬಂದರೆ ತಿಳಿಯುತ್ತೆ."

ಅಷ್ಟು ಹೊತ್ತಿಗೆ ಮೊದಲು ಮಾತನಾಡಿಸಿ ಹೋದಾಕೆಯೇ ಎರಡು ಲೋಟಾಗಳಲ್ಲಿ ಬಿಸಿಬಿಸಿಯಾದ ಕಾಫೀ ತಂದು ಅವರ ಮುಂದಿಟ್ಟಳು.

"ಇದೇನು ತಾಯೀ. ಇಷ್ಟೊತ್ತಲ್ಲಿ ಕಾಫೀ ತಂದುಕೊಟ್ರೀ ?" ಶ್ರೀಧರ ಕೇಳಿದ. "ಪರವಾಗಿಲ್ಲ ತಗೊಳ್ಳೀಪ್ಪಾ. ಕಾಫೀ ನಮ್ಮನೇಲಿ ಸದಾಸಿದ್ಧ ವಾಗಿರುತ್ತೆ. ಪಾಪ ಎಷ್ಟು ದೂರದಿಂದಾ ಬಂದಿದ್ದೀರೋ ಏನೋ. ಆಯಾಸ ವಾಗಿರಬಹುದು."

ಗೆಳೆಯರಿಬ್ಬರಿಗೂ ಆಕೆಯ ಸೌಜನ್ಯವನ್ನು ಕಂಡು ಬಹಳ ಸಂತೋಷ ವುಂಟಾಯಿತು. ಇಬ್ಬರೂ ಕಾಫೀ ಕುಡಿಯಲಾರಂಭಿಸಿದರು. ಕಾಫೀ ಬಹಳ ರುಚಿಯಾಗಿತ್ತು. ರುಚಿಯಾಗಿಯೇ ಇದ್ದಿರಬೇಕು. ಕಾಫಿಯ ಸಹಜವಾದ ರುಚಿಯ ಜತೆಗೆ ಮನೆಯಾಕೆಯ ಪ್ರೀತಿ ವಿಶ್ವಾಸಗಳೂ ಬೆರೆತಿದ್ದು ದರಿಂದ ಕಾಫಿಗೆ ಮತ್ತಷ್ಟು ರುಚಿಬಂದಿತ್ತು.

"ಬಹಳ ಸೊಗಸಾಗಿದೇ ತಾಯೀ. ನೀವು ಕೊಟ್ಟ ಕಾಫೀ" ಎಂದ ಶ್ರೀಧರ ಲೋಟಾ ಕೆಳಗಿಡುತ್ತಾ. ಆಕೆ ನಸುನಕ್ಕು ಒಳಕ್ಕೆ ಹೊರಟು ಹೋದಳು.

"ನಮಸ್ಕಾರಾ ಸ್ವಾಮಿ" ಎಂದು ವಿನಯಪೂರ್ವಕವಾಗಿ ಕೈಜೋಡಿಸಿ ಕೊಂಡು ನಗುನಗುತ್ತಾ ಶ್ಯಾನಭೋಗರು ಪಡಸಾಲೆಗೆ ಬಂದರು.

"ನಮಸ್ಕಾರ. ಬನ್ನಿ" ಎಂದು ಗೆಳೆಯರಿಬ್ಬರೂ ಪ್ರತಿವಂದಿಸಿದರು.

ಶಾನುಭೋಗರು ಚಾಪೆಯ ಮೇಲೆ ಕೂತರು. ಭವ್ಯವಾದ ಆಕೃತಿ ಯವರದು. ನಡುವಯಸ್ಸನ್ನು ದಾಟಿದ್ದಿರಬಹುದು. ಮುಖದಲ್ಲಿ ಒಳ್ಳೆಯ ವರ್ಚಸ್ಸು ಒಡೆದು ಕಾಣುತ್ತಿತ್ತು. ಅದೇ ತಾನೇ ದೇವರಮನೆಯಿಂದ ಹೊರಬಿದ್ದಿದ್ದರಾದ್ದರಿಂದ ಮುಖಮುದ್ರೆ ಬಹಳ ಪ್ರಸನ್ನವಾಗಿತ್ತು. ಹಣೆಯ ತುಂಬಾ ವಿಭೂತಿಯ ಪಟ್ಟೆಗಳು. ಹಣೆಯ ಮಧ್ಯದಲ್ಲಿ ಸಣ್ಣದೊಂದು ಕುಂಕುಮದ ಬೊಟ್ಟು. ಕೊರಳಲ್ಲಿ ಒಂದೆಳೆ ಬಂಗಾರದ ಚೈನು. ಎರಡು ಕೈಗಳಲ್ಲೂ ಎರಡೆರಡು ಉಂಗುರಗಳು. ಪಟ್ಟೇ ಮಗುಟವನ್ನುಟ್ಟಿದ್ದರು. ಒಟ್ಟಿನಲ್ಲಿ ವ್ಯಕ್ತಿಯ ದರ್ಶನ ಮಾಡಿದವರಲ್ಲಿ ಒಂದು ಬಗೆಯ ಗೌರವ, ಪೂಜ್ಯತೆಗಳನ್ನು ಹುಟ್ಟಿಸುವಂಥ ಆಕರ್ಷಣೀಯ ವ್ಯಕ್ತಿತ್ವ. ಮೊದಲು ಶಾನುಭೋಗರೇ ಪ್ರಶ್ನಿಸಿದರು.

"ಯಾವ್ರೂರಿಂದ ಬಂದಿದ್ದೀರಿ ಸ್ವಾಮೀ ?"

"ಮೈಸೂರಿಂದ ಬಂದಿದ್ದೇವೆ. ಕಾಲೇಜಿನಲ್ಲಿ ಓದ್ತಿದೇವೆ."

"ಓಹೋ ಬಹಳ ಸಂತೋಷ. ಈಗ ಬೇಸಿಗೇ ರಜವೆಂದು ಕಾಣುತ್ತೆ. ಪರೀಕ್ಷೆ ಮುಗಿಸಿಕೊಂಡು ಊರುಗಳಿಗೆ ಹೋಗದೆ ನಮ್ಮ ಹಳ್ಳಿಗೇಕೆ ಸ್ವಾಮಿಾ ಬಂದ್ರೀ."

"ಏಕೆ ಬಂದೆವೆಂದು ನಿಮಗೆ ಹೇಳಬೇಕೆಂದೇ ಬಂದಿದ್ದೇವೆ ಶಾನು ಭೋಗರೇ."

"ಸಂತೋಷಸ್ವಾಮಿ. ಅಡಿಗೆ ಆಗಿಹೋಗಿದೆ. ಮೊದಲು ಸ್ನಾನ ಮಾಡಿ ಊಟಕ್ಕೇಳಿ. ಮೊದಲು ಊಟ ಮಾಡಿಬಿಡಿ. ಆಮೇಲೆ ನಿಧಾನ ವಾಗಿ ಕೂತು ಮಾತಾಡೋಣ."

"ಊಟಕ್ಕೆ ತೊಂದರೇ ತಗೋಳ್ಬೇಡೀ ಶಾನುಭೋಗರೇ. ನಾವು ಅಡಿಗೇಮಾಡಿಕೊಳ್ತೀವಿ."

"ಇದೇನು ಸ್ವಾಮೀ ಹೀಗೆ ಹೇಳ್ತೀರಿ! ನಮ್ಮನೇ ಇರೋವಾಗ ನೀವು ಅಡಿಗೇ ಮಾಡಿಕೊಳ್ಳೋಣಾಂದ್ರೇನು !!"

"ನಾವಿಬ್ಬರೇ ಅಲ್ಲಾ ಶಾನುಭೋಗರೇ. ನಮ್ಮ ಪರಿವಾರ ಇನ್ನೂ ಇದೆ."

"ಎಷ್ಟು ಪರಿವಾರವಾದರೂ ಇರಲೀ ಸ್ವಾಮೀ. ನಾನು ನಿಭಾಯಿಸ್ತೇನೆ. ನಿಮ್ಮ ಪರಿವಾರಾನೆಲ್ಲಾ ಎಲ್ಲಿ ಬಿಟ್ಟುಬಂದಿದ್ದೀರಿ ?"

"ಇಲ್ಲೇ ಅಶ್ವತ್ಥಕಟ್ಟೇ ಮೇಲೆ ಕೂತುಕೊಂಡಿದ್ದಾರೆ."

"ಚೆನ್ನಾಯ್ತುಸ್ವಾಮೀ. ಅದೇಕೆ ಹಾಗೆಮಾಡಿದಿರಿ. ಮೊದಲು ನಡೀರಿ. ಅವರ್ನೆಲ್ಲಾ ಕರಕೊಂಡು ಬಂದುಬಿಡೋಣ."

ಗೆಳೆಯರಿಬ್ಬರೂ ಏನುಮಾಡಬೇಕೆಂಬುದು ತೋರದೆ ಒಬ್ಬರ ಮುಖ ವೊಬ್ಬರು ನೋಡಿಕೊಂಡರು. ಶಾನುಭೋಗರು, "ನಡೀರಿಸ್ವಾಮೀ ಬೇಗ. ಊಟದ ಹೊತ್ತಾಯ್ತು. ಹಸಿದುಕೊಂಡು ಕೂತಿದ್ದಾರೆ ಪಾಪ" ಎನ್ನುತ್ತಾ ಭುಜದ ಮೇಲೊಂದು ಶಲ್ಯವನ್ನು ಹೊದ್ದುಕೊಂಡು ಹೊರಟೇಬಿಟ್ಟರು. ಗೆಳೆಯರಿಬ್ಬರೂ ಅವರನ್ನು ಹಿಂಬಾಲಿಸತೊಡಗಿದರು.

* * *

ಎಲ್ಲರವೂ ಊಟವಾಗುವ ಹೊತ್ತಿಗೆ ಮಧ್ಯಾಹ್ನ ಮೂರು ಗಂಟೆಯಾಗಿ ಹೋಯಿತು. ಶಾನುಭೋಗರ ಧರ್ಮಪತ್ನಿ ವಿಶಾಲಾಕ್ಷಮ್ಮ ಬಹಳ ಸಂಪ್ರದಾಯಸ್ಥಳಾದ ಹೆಂಗಸು. ಮನೆಯಲ್ಲಿ ಮಡೀ, ಆಚಾರ, ಪೂಜೆ, ಪುನಸ್ಕಾರಗಳನ್ನು ಶ್ರದ್ಧಾಭಕ್ತಿಗಳಿಂದ ನಡೆಸುತ್ತಿದ್ದಳು. ಒಟ್ಟಿನಲ್ಲಿ ಆ ಅತ್ತೆಗೆ ತಕ್ಕ ಸೊಸೆ ಅನ್ನಿಸಿಕೊಂಡಿದ್ದಳು. ಅತ್ತೇ ಸೊಸೆಯರಿಬ್ಬರಿಗೂ ಮನೆಗೆ ಬರುವ ಅತಿಥಿಗಳನ್ನು ಆದರಿಸಿ, ಅವರ ಊಟ ಉಪಚಾರ ಮುಂತಾದುವುಗಳನ್ನು ಬಹಳ ಆಸ್ಥೆಯಿಂದ ನಿರ್ವಹಿಸುವುದರಲ್ಲಿ ಬಹಳ ಆನಂದ.

ಶಾನುಭೋಗರ ಮನೆಯೆಂದ ಮೇಲೆ ಕೇಳಬೇಕೇ! ಅವರ ಮನೆಗೆ ಬಂದು ಹೋಗುವ ಜನರಿಗೇನೂ ಕೊರತೆಯಿದ್ದಿರಲಿಲ್ಲ. ಅತಿಥಿಗಳು ಅದೆಷ್ಟೇ ಹೊತ್ತಿಗೆಬರಲಿ, ಅತ್ತೇ ಸೊಸೆಯರಿಬ್ಬರೂ ಹಸನ್ಮುಖದಿಂದ ಅವರ ಸೇವೆಗೆ ಸಿದ್ಧರಾಗಿರುತ್ತಿದ್ದರು.

ಮಧ್ಯಾಹ್ನ ನಾಲ್ಕರ ಸಮಯ. ಶಾನುಭೋಗರ ಮನೆಯ ಹಜಾರದಲ್ಲಿ ಶ್ರೀಧರನ ಮಿತ್ರಗೋಷ್ಠಿ ನೆರದಿತ್ತು. ಎಲ್ಲರಿಗೂ ಕಾಫೀ ವಿನಿಯೋಗವಾಗುತ್ತಿತ್ತು. ಶಾನುಭೋಗರ ಮುಂದೆ ಬೆಳ್ಳಿಯತಟ್ಟೆಯೊಂದರಲ್ಲಿ ತಾಂಬೂಲ ಸಾಮಗ್ರಿಗಳು ಯಥೇಚ್ಛವಾಗಿದ್ದುವು. ಅವರು ತಾಂಬೂಲ ಚರ್ವಣ ಮಾಡುತ್ತಿದ್ದರು.

"ಈವತ್ತು ರಾತ್ರಿಯಿಂದ ನಾವು ಅಡಿಗೇಮಾಡಿಕೊಳ್ಳೋಕ್ಕೆ ಅಪ್ಪಣೆ ಕೊಡ್ತೀರಾ ಶಾನುಭೋಗರೇ?" ಶ್ರೀಧರ ಕೇಳಿದ.

"ಸ್ವಾಮೀ, ಪುನಃ ನನ್ನ ಆ ಪ್ರಶ್ನೆ ಕೇಳಬೇಡಿ. ನೀವು ನಮ್ಮೂರಲ್ಲಿ ರೋತನಕಾ ಅಡಿಗೇಯೋಚ್ನೆ ಬಿಟ್ಬಿಡಿ. ನೀವೆಷ್ಟುದಿನ ಬೇಕಾದರೂ ಇರಬಹುದು. ನಿಮ್ಮ ಊಟ ತಿಂಡಿಗಳ ಏರ್ಪಾಡನ್ನು ನಾನು ನೋಡಿಕೊಳ್ತೀನಿ."

"ಈ ತುಟ್ಟೇ ಕಾಲದಲ್ಲಿ ನಿಮಗೆ ತೊಂದ್ರೆಯಾಗುತ್ತಲ್ಲಾ ಶಾನುಭೋಗರೇ. ನಾವು ಹತ್ತುಮಂದಿಯಿದ್ದೇವೆ. ನಿಮ್ಮೂರಲ್ಲಿ ನಾವೆಷ್ಟುದಿನ ಇರ್ತೀವೋ ಈಗಲೇ ಹೇಳಲು ಸಾಧ್ಯವಿಲ್ಲ. ನಾವು ಸಾಮಾನು ಸರಂಜಾಮುಗಳನ್ನು ತಂದುಕೊಂಡಿದ್ದೇವೆ. ನಮ್ಮ ಜತೇಲಿ ಇಬ್ಬರು ಹೆಂಗಸರೂ ಬಂದಿದ್ದಾರೆ. ಅಡಿಗೇಮಾಡಿ ಹಾಕ್ತಾರೆ. ಏನೂ ಯೋಚನೆಯಿಲ್ಲ." ಎನ್ನುತಾ

ಶ್ರೀಧರ ತುಸುದೂರದಲ್ಲಿ ಕೂತಿದ್ದ ಚಂದ್ರವದನೆ ಸುಮಿತ್ರೆಯರ ಕಡೆ ಬೆರಳು ಮಾಡಿ ತೋರಿಸಿದ. ಶಾನುಭೋಗರು ಅವನ ಮಾತಿಗೆ ಘೊಳ್ಳೆಂದು ನಕ್ಕುಬಿಟ್ಟರು.

“ಸರಿಸ್ವಾಮೀ. ನೀವು ಪಕ್ಕಾಮನುಷ್ಯರಿದ್ದೀರಿ. ಎಲ್ಲಾ ಏರ್ಪಾಡೂ ಮಾಡಿಕೊಂಡು ಬಂದಿದ್ದೀರಿ. ಆದರೂ ನೀವೆಲ್ಲಾ ನಮ್ಮ ಮನೇಲಿ ಇರ ಬೇಕೆಂದು ನನ್ನಿಷ್ಟ. ಮುಂದಿನ ಹಳ್ಳೀಲಿ ಬೇಕಾದರೆ ನೀವು ಅಡಿಗೇಮಾಡಿ ಕೊಳ್ಳುವಿರಂತೆ. ಇಲ್ಲಿ ಬೇಡ. ದೇವರು ನನಗೇನೂ ಕಮ್ಮಿಮಾಡಿಲ್ಲ. ತಕ್ಕ ಮಟ್ಟಿಗೆ ಅನುಕೂಲವಾಗಿಟ್ಟಿದ್ದಾನೆ. ಮನೆಗೆ ಬಂದ ನಾಲ್ಕು ಮಂದಿಗೆ ಅನ್ನಾಹಾಕೋ ಯೋಗ್ಯತೇನ ದಯಪಾಲಿಸಿದ್ದಾನೆ ಭಗವಂತ.”

“ನೀವಿಷ್ಟು ಕೇಳಿಕೊಳ್ಳುತ್ತಿರೋವಾಗ ಇಲ್ಲವೆನ್ನಲು ನನಗೆ ಮನಸ್ಸು ಬಾರದು ಶಾನುಭೋಗರೇ. ನಿಮ್ಮಿಷ್ಟದಂತೆಯೇ ಆಗಲಿ. ನಮ್ಮ ಕೆಲಸದಲ್ಲಿ ನಿಮ್ಮ ಸಹಕಾರ ಸಹಾನುಭೂತಿಗಳನ್ನು ಕೋರುತ್ತೇವೆ.”

“ಅಗತ್ಯವಾಗಿ ಆಗಬಹುದುಸ್ವಾಮೀ. ನನ್ನಿಂದೇನೇನಾಗಬೇಕಾ ಗಿದೆಯೋ ಹೇಳಿಬಿಡಿ. ಎಲ್ಲವನ್ನೂ ಶಿರಸಾವಹಿಸಿ ನಡೆಸಿಕೊಡ್ತೇನೆ.”

“ನಿಮ್ಮೂರಿನ ಮುಖಂಡರನ್ನೆಲ್ಲಾ ಕರೆಸಿ ನಾಳೆ ಬೆಳಿಗ್ಗೆ ನಿಮ್ಮನೇಲಿ ಒಂದು ಸಣ್ಣ ಸಭೆ ಸೇರಿಸಬೇಕಲ್ಲ ಶಾನುಭೋಗರೇ. ಮೊದಲು ನಾವು ನಿಮ್ಮೂರಿಗೆ ಬಂದಿರುವ ಉದ್ದೇಶವನ್ನು ಸಭೆಯ ಮುಂದೆ ಮಂಡಿಸಬೇಕೆಂದಿ ದ್ದೇವೆ. ಅಲ್ಲದೆ ನಮ್ಮ ಕಾರ್ಯಕಲಾಪಗಳೇನೆಂಬುದನ್ನು ಸೂಕ್ಷ್ಮವಾಗಿ ತಿಳಿಸಬೇಕೆಂದಿದ್ದೇವೆ. ನಾವು ಬಂದಿರುವ ಉದ್ದೇಶ ನೆರವೇರಬೇಕಾದರೆ ನಿಮ್ಮೆಲ್ಲರ ಸಹಕಾರ ಅತ್ಯಗತ್ಯ.”

“ಅದಕ್ಕೇನುಸ್ವಾಮೀ. ಅಗತ್ಯವಾಗಿ ಏರ್ಪಾಡು ಮಾಡ್ತೇನೆ. ಸಂಜೆಗೇ ಸಭೆ ಸೇರಿಸೋಣಂತೆ ಬೇಕಾದರೆ.”

“ಬೇಡಾ ಶಾನುಭೋಗರೇ. ನಮ್ಮ ಸ್ನೇಹಿತರೆಲ್ಲಾ ಪ್ರಯಾಣದ ಆಯಾಸದಿಂದ ಬಹಳ ದಣಿದಿದ್ದಾರೆ. ಈವತ್ತು ಅವರೆಲ್ಲಾ ವಿಶ್ರಾಂತಿ ತೆಗೆದುಕೊಳ್ಳಲಿ. ನಾಳೆಯಿಂದ ಕೆಲಸ ಶುರುಮಾಡೋಣ.”

“ಶಾನುಭೋಗರೇ.”

“ಏನುಸ್ವಾಮೀ.”

"ಬಂದಾಗಿನಿಂದ ಮಾತೂಕಥೆಯಲ್ಲೇ ಮುಗಿದುಹೋಯ್ತು. ಪರಸ್ಪರ ಪರಿಚಯುಗಳೂ ಆಗಿಹೋದ್ವು. ಆದರೆ ನಿಮ್ಹೆಸರೇ ತಿಳೀಲಿಲ್ಲವಲ್ಲಾ !

"ಮೈಲಾರಯ್ಯಾಂತ ಕರೀತಾರೇ ಸ್ವಾಮೀ. ತಮ್ಮ ಹೆಸರೇನು ಸ್ವಾಮೀ."

"ಶ್ರೀಧರಾಂತ. ಇವರು ನನ್ನ ಪರಮಾಪ್ತ ಮಿತ್ರರು ಅನಂತ ರಾಮೈಯ್ಯ. ನನ್ನ ಪ್ರತಿಯೊಂದು ಕಾರ್ಯದಲ್ಲೂ ನನಗೆ ಭುಜಬಲವಾಗಿ ನಿಂತು ಕೆಲಸ ನಿರ್ವಹಿಸುವ ಪುಣ್ಯಾತ್ಮಾ ಈತ."

"ಬಹಳ ಸಂತೋಷಾ ಸ್ವಾಮೀ. ನಾನಿನ್ನು ಸ್ವಲ್ಪ ಹೊರಗೆಹೋಗಿ ಬರ್ತೀನಿ. ಹಾಗೇ ಪಟೇಲರನ್ನೂ ನೋಡಿಕೊಂಡು ಬರ್ತೀನಿ."

"ನೀವು ಹೋಗಿಬನ್ನಿ ಶಾನುಭೋಗರೇ."

ಶಾನುಭೋಗರು ಭುಜದ ಮೇಲೊಂದು ವಲ್ಲಿಯನ್ನು ಧರಿಸಿ ಹೊರಗೆ ಹೊರಟರು. ಮಿತ್ರರೆಲ್ಲರೂ ವಿನೋದವಾಗಿ ಹರಟೆ ಕೊಚ್ಚುತ್ತಾ ಕೂತರು.

## ೨೮

ಬೆಳಿಗ್ಗೆ ಎಂಟು ಗಂಟೆಗೆಲ್ಲಾ ಶಾನುಭೋಗರ ಮನೆಯ ಮುಂದೆ ಹಳ್ಳಿಯ ಜನ ಸಭೆ ಸೇರಿಬಿಟ್ಟಿತ್ತು. ಶಾನುಭೋಗರೇ ಖುದ್ದಾಗಿ ಎಲ್ಲರನ್ನೂ ಆದರಪೂರ್ವಕವಾಗಿ ಬರಮಾಡಿಕೊಂಡು ಹಜಾರದಲ್ಲಿ ಕೂಡಿಸುತ್ತಿದ್ದರು. ಬೀದಿಯಬಾಗಿಲು ತಳಿರುತೋರಣಗಳಿಂದಲಂಕೃತವಾಗಿತ್ತು. ಮನೆಯ ಮುಂದುಗಡೆ ಸೊಗಸಾದ ರಂಗವಲ್ಲಿಯನ್ನು ರಚಿಸಿದ್ದರು ವಿಶಾಲಾಕ್ಷಮ್ಮ. ಅಂದು ಶಾನುಭೋಗರ ಮನೆಗೆ ಹಬ್ಬದ ಕಳೆ ಬಂದುಬಿಟ್ಟಿತ್ತು. ಅವರ ಮನೆಯಲ್ಲಿ ಸಂಭ್ರಮವೋ ಸಂಭ್ರಮವಾಗಿಹೋಗಿತ್ತು. ಈ ಎಲ್ಲ ಏರ್ಪಾಡು ಗಳನ್ನೂ ನೋಡಿ ಶ್ರೀಧರ ಸಂತೋಷದಿಂದ ಕುಣಿದಾಡಿದ. ಶಾನುಭೋಗ ರನ್ನು ಮನಸ್ಸಿನಲ್ಲೇ ನೂರು ಬಾರಿ ವಂದಿಸಿದ. ಎಲ್ಲ ಏರ್ಪಾಡುಗಳೂ ಮುಗಿದನಂತರ ಶಾನುಭೋಗರು ಅವನ ಹತ್ತಿರಬಂದು, "ಇನ್ನೇನಾಗ ಬೇಕಾಗಿದೆ ಹೇಳೀಸ್ವಾಮೀ" ಎಂದು ಕೈ ಮುಗಿದು ಕೇಳಿಕೊಂಡರು. ಶ್ರೀಧರ ನಾಗ ಸಂತೋಷದಿಂದ ಉತ್ತರಿಸಿದ.

"ಶಾನುಭೋಗರೇ ನಿಮಗೆ ನಾವೆಷ್ಟು ಋಣಿಗಳಾಗಿದ್ದರೂ ಸಾಲದು. ಈವತ್ತು ನನ್ನ ಸಂತೋಷವನ್ನಂತೂ ಹೇಳತೀರದು. ನನ್ನ ಕೆಲಸವಿಷ್ಟು ಸುಸೂತ್ರವಾಗಿ ನಡೆದುಹೋಗುತ್ತೇಂತ ನಾನು ಕನಸಿನಲ್ಲೂ ಎಣಿಸಿರಲಿಲ್ಲ. ನಿಮ್ಮ ಉಪಕಾರ ಅಷ್ಟಿಷ್ಟಲ್ಲ."

"ಎಲ್ಲಾ ಆ ಭಗವಂತನ ಅನುಗ್ರಹ ಸ್ವಾಮೀ! ನನ್ನದೇನಿದೆ ಇದರಲ್ಲಿ! ಕೊಡೋ ಧಣಿ ಅವನು! ಹತ್ತು ಜನಕ್ಕೆ ಉಪಕಾರಮಾಡೋಕ್ಕೆಂದು ಹೊರ ಡೋರಿಗೆ ಯಾರ ಮುಖಾಂತರವಾದರೂ ಸಹಾಯ ತೋರಿಸ್ತಾನೆ ಭಗವಂತ."

"ನೀವು ಹೇಳಿದ್ದು ನಿಜಾ ಮೈಲಾರಯ್ಯ. ಈವತ್ತು ಇಷ್ಟು ಜನಾ ನೆರೆದಿರೋದೇ ಅದಕ್ಕೆ ಸಾಕ್ಷಿ. ಮುಖ್ಯ ನಿಮ್ಮ ಮನಸ್ಸು ಬಹಳ ದೊಡ್ಡದು. ನಾವೆಲ್ಲಾ ನಿಮಗೆ ಬಹಳ ಕೃತಜ್ಞರಾಗಿದ್ದೇವೆ."

"ಇನ್ನು ಸಭೆ ಷುರುಮಾಡಿ ಬಿಡೋಣ ಸ್ವಾಮೀ. ಪಟೇಲರೂ ಬಂದಿದ್ದಾರೆ."

"ಆಗಬಹುದು ಮೈಲಾರಯ್ಯ. ಬಂದೆ ನಡೀರಿ."

ಶ್ರೀಧರನ ಕೋರಿಕೆಯಂತೆ ಪಟೇಲರೇ ಅಂದಿನ ಸಭೆಯ ಅಧ್ಯಕ್ಷತೆ ವಹಿಸಿದರು. ಚಂದ್ರವದನೆಯೂ ಸುಮಿತ್ರೆಯೂ "ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು" ಎಂಬ ರಾಷ್ಟ್ರಗೀತೆಯನ್ನು ಬಹಳ ಸುಶ್ರಾವ್ಯವಾಗಿ ಹಾಡಿದರು. ಪ್ರಾರ್ಥನೆಯಾದ ನಂತರ ಅಧ್ಯಕ್ಷತೆ ವಹಿಸಿದ್ದ ಬೋರೇಗೌಡರು ಎದ್ದು ನಿಂತರು. ಹಳ್ಳಿಯವರಿಗೆಲ್ಲಾ ಆಶ್ಚರ್ಯ; ನಮ್ಮ ಪಟೇಲರು ಭಾಷಣ ಮಾಡುತ್ತಾರೆಯೇ ಎಂದು! ಬೋರೇಗೌಡರು ನಿಧಾನವಾಗಿ ಪ್ರಾರಂಭಿ ಸಿದರು.

"ಸೋದರ, ಸೋದರಿಯರೇ. ನಿಮ್ಮನ್ನೆಲ್ಲಾ ಇಲ್ಲಿ ಸಭೆ ಸೇರಿಸಿ ಈ ಉತ್ಸವವನ್ನು ಏರ್ಪಡಿಸಿರುವುದರ ಉದ್ದೇಶವಾದರೂ ಇಷ್ಟೆ. ಮೈಸೂರಿಂದ ನಮ್ಮ ಸ್ನೇಹಿತರು ದಯಮಾಡಿಸಿದ್ದಾರೆ. ಅವರೆಲ್ಲಾ ಕಾಲೇಜಿನಲ್ಲಿ ಓದುತ್ತಿ ರುವವರು. ಬಹಳ ವಿದ್ಯಾವಂತರು. ನಮ್ಮ ಹಳ್ಳಿಯ ಜನರಿಗೆ ಓದುಬರೆಹ ಕಲಿಸಿಕೊಡಲು ಇಲ್ಲಿಗೆ ಬಂದಿದ್ದಾರೆ. ಈಗ ನಮ್ಮ ದೇಶದಲ್ಲಿ ಶೇಕಡ ಎಂಭತ್ತಕ್ಕೆ ಮೇಲ್ಪಟ್ಟು ಜನ ಅವಿದ್ಯಾವಂತರಾಗಿದ್ದಾರೆ. ದೇಶದಲ್ಲಿ ಇಷ್ಟೊಂದು ಜನ ಅವಿದ್ಯಾವಂತರಿದ್ದರೆ ಆ ದೇಶ ಅಭಿವೃದ್ಧಿಯಾಗುವುದಾದರೂ

ಹೇಗೆ? ಒಂದು ದೇಶ ಎಲ್ಲ ವಿಧಗಳಲ್ಲಿಯೂ ಮುಂದುವರಿಯಬೇಕಾಗಿದ್ದರೆ, ಮೊಟ್ಟಮೊದಲು ಅಲ್ಲಿಯ ಜನ ವಿದ್ಯಾವಂತರಾಗಬೇಕು.

ಅದರಲ್ಲೂ ನಮ್ಮ ಹಳ್ಳಿಗಳಲ್ಲಿರತಕ್ಕ ರೈತಬಾಂಧವರ ಸ್ಥಿತಿಗತಿಗಳು ಬಹಳ ಶೋಚನೀಯವಾಗಿವೆ. ನಮ್ಮದು ಮುಖ್ಯವಾಗಿ ವ್ಯವಸಾಯದ ದೇಶ. ನೂರಕ್ಕೆ ತೊಂಭತ್ತರಷ್ಟು ಮಂದಿ ತಮ್ಮ ಜೀವನೋಪಾಯಕ್ಕೆ ವ್ಯವಸಾಯವನ್ನೇ ಅವಲಂಬಿಸಿಕೊಂಡಿದ್ದಾರೆ. ಆದರೆ ಆ ವ್ಯವಸಾಯವೊಂದರಿಂದಲೇ ನಮ್ಮ ಹೊಟ್ಟೆ ತುಂಬುತ್ತಿಲ್ಲ. ರೈತಾಪಿ ಜನಗಳು ಸಾಲಸೋಲಗಳಲ್ಲಿ ಬಿದ್ದು ನರಳುತ್ತಿದ್ದಾರೆ. ತಮಗಿರುವ ಅಲ್ಪಸ್ವಲ್ಪ ಭೂಮಿ, ಕಾಣಿಗಳನ್ನೂ ಸಾಹುಕಾರರಿಗೆ, ದಳ್ಳಾಳಿಗಳಿಗೆ ಒತ್ತೆಯಿಟ್ಟುಬಿಟ್ಟು ಬೀದಿಯ ಭಿಕಾರಿಗಳಾಗಿ ನಿಂತುಬಿಟ್ಟಿದ್ದಾರೆ.

ನಮ್ಮ ರೈತಬಾಂಧವರಲ್ಲಿ ಆವರಿಸಿರುವ ಅಜ್ಞಾನ, ಅವಿದ್ಯೆಗಳ ದೆಸೆಯಿಂದ ದ್ವೇಷಾಸೂಯೆಗಳೂ, ಅಂಧಶ್ರದ್ಧೆಗಳೂ, ರೋಗರುಜಿನಾದಿಗಳೂ ನಮ್ಮ ಹಳ್ಳಿಗಳಲ್ಲಿ ತಾಂಡವವಾಡುತ್ತಿವೆ. ಇವೆಲ್ಲ ಅನಿಷ್ಟಗಳೂ, ವಿಪತ್ಪರಂಪರೆಗಳೂ ನಿರ್ಮೂಲವಾಗಬೇಕಾದರೆ ಮೊದಲು ನಮ್ಮ ರೈತಬಾಂಧವರು ವಿದ್ಯಾವಂತರಾಗಬೇಕು. ನಮ್ಮ ಕೋಟ್ಯಾಂತರ ಹಳ್ಳಿಗಳಲ್ಲಿ ವಿದ್ಯಾಪ್ರಚಾರ ಸಂತತವಾಗಿ ನಡೆಯಬೇಕು.

ಈಗ ನಮ್ಮ ಘನಸರ್ಕಾರದವರೇ ವಿಶೇಷವಾಗಿ ಹಣ ಖರ್ಚುಮಾಡಿ ಹಳ್ಳಿಗಾಡಿನಲ್ಲಿರತಕ್ಕ ವಯಸ್ಕರಿಗೆಲ್ಲಾ ಉಚಿತ ವಿದ್ಯಾಭ್ಯಾಸವನ್ನು ಒದಗಿಸಲು ಸಂಸ್ಥಾನಾಮುಳಿ ಏರ್ಪಾಡು ಮಾಡಿದ್ದಾರೆ. ಅಷ್ಟೇ ಅಲ್ಲ. ಓದಿ ಬುದ್ಧಿವಂತರಾಗಿರುವ ಮಹನೀಯರನೇಕರು, ಸೇವಾದೃಷ್ಟಿಯಿಂದ ಮುಂದೆ ಬಂದು, ಹಳ್ಳಿಹಳ್ಳಿಗೂ ಹೋಗಿ, ಅಲ್ಲೆಲ್ಲಾ ವಯಸ್ಕರ ಶಿಕ್ಷಣ ಶಾಲೆಗಳನ್ನೂ ರಾತ್ರಿ ಪಾಠಶಾಲೆಗಳನ್ನೂ ತೆರೆದು, ನಿರಕ್ಷರಕುಕ್ಷಿಗಳಾದ ತಮ್ಮ ದೇಶಬಾಂಧವರನ್ನು ವಿದ್ಯಾವಂತರನ್ನಾಗಿ ಮಾಡಲು ಸಂತತವಾಗಿ ದುಡಿಯುತ್ತಿದ್ದಾರೆ. ಸರ್ಕಾರದವರೂ, ವಿದ್ಯಾವಂತರಾದ ಮಹನೀಯರೂ ನಮಗೊದಗಿಸಿಕೊಟ್ಟಿರುವ ಅವಕಾಶಗಳನ್ನು ಸದುಪಯೋಗಪಡಿಸಿಕೊಳ್ಳುವುದು ನಮ್ಮೆಲ್ಲರ ಅವಶ್ಯ ಕರ್ತವ್ಯವಾಗಿರುತ್ತೆ. ನಾನು ಈ ಮಾತನ್ನು ತಮಗೆ ಒತ್ತಿ ಹೇಳಬೇಕಾಗಿದೆ. ನಾವು ಇಂತಹ ಸುಸಂಧಿಯನ್ನು ಕಳೆದುಕೊಳ್ಳಕೂಡದು.

ಮೈಸೂರಿಂದ ನಮ್ಮ ಸ್ನೇಹಿತರು ದಯಮಾಡಿಸಿದ್ದಾರೆ. ಅವರಿಗೆ ಬೇಕಾದ ಸಹಾಯ ಸಲಕರಣೆಗಳನ್ನೊದಗಿಸಿಕೊಟ್ಟು ಅವರ ಉದ್ದೇಶವನ್ನು ಸಾರ್ಥಕಗೊಳಿಸಬೇಕೆಂದು ನಿಮ್ಮೆಲ್ಲರನ್ನೂ ಪ್ರಾರ್ಥಿಸಿಕೊಳ್ಳುತ್ತೇನೆ. ನನಗಿಂತಲೂ ಬುದ್ಧಿವಂತರೂ, ತಿಳಿದವರೂ ಆದ ನಮ್ಮ ಸ್ನೇಹಿತರು ನಿಮಗಿನ್ನೂ ಹೆಚ್ಚಿನ ವಿಷಯಗಳನ್ನು ತಿಳಿಸುತ್ತಾರೆ. ನೀವೆಲ್ಲರೂ ಅವರ ಭಾಷಣಗಳನ್ನು ಸಾವಧಾನಚಿತ್ತರಾಗಿ ಕೇಳುವುದು ಮಾತ್ರವಲ್ಲದೆ, ಅವರಿಗೆ ನಿಮ್ಮ ಸಹಕಾರವನ್ನು ನೀಡುತ್ತೀರೆಂಬ ಪೂರ್ಣ ಭರವಸೆಯನ್ನು ವ್ಯಕ್ತಪಡಿಸಿ ನಾನು ಕೂತುಕೊಳ್ಳುತ್ತೇನೆ."

ಇಷ್ಟು ಹೇಳಿ ಬೋರೇಗೌಡರು ಆಸನಾರೂಢರಾದರು. ಶ್ರೀಧರ ಮಾತಾಡಲು ಎದ್ದುನಿಂತ. "ನನ್ನ ಪ್ರಿಯ ದೇಶಬಾಂಧವರೇ. ಇಂದು ನಿಮ್ಮೆಲ್ಲರನ್ನೂ ಇಲ್ಲಿ ಸಭೆ ಸೇರಿಸಿರುವುದರ ಉದ್ದೇಶವೇನೆಂಬುದನ್ನು ನಿಮ್ಮ ಪಟೇಲರೇ ತಿಳಿಸಿದ್ದಾರೆ. ನಿಮಗೆಲ್ಲರಿಗೂ ಓದುಬರೆಹ ಕಲಿಸಲು ನಾವು ಬಂದಿದ್ದೇವೆ. ನಾಳೆಯಿಂದಲೇ ತರಗತಿಗಳನ್ನು ಆರಂಭಿಸಬೇಕೆಂದು ಸಂಕಲ್ಪಿಸಿದ್ದೇವೆ. ತಮ್ಮ ಮನೆಯಲ್ಲೇ ತರಗತಿಗಳನ್ನು ನಡೆಸಲು ಶಾನುಭೋಗರು ಕೃಪೆಯಿಟ್ಟು ಒಪ್ಪಿರುತ್ತಾರೆ. ಅವರ ಈ ಮಹದುಪಕಾರಕ್ಕಾಗಿ ನಾವೆಲ್ಲರೂ ಅವರಿಗೆ ಬಹಳ ಕೃತಜ್ಞರಾಗಿದ್ದೇವೆ. ನಮ್ಮ ನಾಡಿನಲ್ಲಿ ತಾಂಡವವಾಡುತ್ತಿರುವ ಅಜ್ಞಾನ ಮತ್ತು ಬಡತನ ಇವೆರಡೂ ಪ್ಲೇಗು ಮತ್ತು ಮಾರಿಕಾ ರೋಗಗಳಿದ್ದ ಹಾಗೆ. ನಮ್ಮ ಜನ ಅದರಲ್ಲೂ ಹಳ್ಳಿಗಳಲ್ಲಿರತಕ್ಕ ನಮ್ಮ ರೈತಬಾಂಧವರು ಇವೆರಡು ಉಪದ್ರವಗಳಿಗೆ ಬಲಿಯಾಗಿ ಪ್ರತ್ಯಕ್ಷ ನರಕವನ್ನನುಭವಿಸುತ್ತಿದ್ದಾರೆ. ನಮ್ಮ ದೇಶದಾದ್ಯಂತವೂ ಆವರಿಸಿರುವ ಈ ಎರಡು ಭಯಂಕರ ಅಂಟುಜಾಡ್ಯಗಳನ್ನು ನಿರ್ಮೂಲಗೊಳಿಸಲು ವಿದ್ಯೆಯೊಂದೇ ನಮಗಿರುವ ಏಕೈಕಸಾಧನ.

ನಮ್ಮ ಕೋಟ್ಯಾಂತರ ಮಂದಿ ರೈತಬಾಂಧವರು ಮೊದಲು ಅಕ್ಷರಸ್ಥರಾಗಬೇಕು. ಓದು ಬರೆಹ ಕಲಿಯಬೇಕು. ಇದಾದ ನಂತರ ವಿದ್ಯಾರ್ಜನೆಯಲ್ಲಿ ತಾನೇತಾನಾಗಿ ಆಸಕ್ತಿ ಹುಟ್ಟುತ್ತದೆ. ಜನ ವಿದ್ಯಾವಂತರಾದರೆಂದರೆ ದೇಶದಲ್ಲಿರುವ ಅಜ್ಞಾನ ನಿರ್ನಾಮವಾದಂತೆಯೇ ಸರಿ. ಅದರೊಂದಿಗೇ ನಮ್ಮ ಬಡತನ, ಅಂಧಶ್ರದ್ಧೆ, ಅಂತಃಕಲಹ, ವೈಮನಸ್ಯಗಳು, ರೋಗರುಜಿ

ನಾದಿ ಸಮಸ್ತ ಉಪದ್ರವಗಳೂ ನಾಶವಾಗಿಹೋಗುವುವು. ನಮ್ಮ ದೇಶದ ಪ್ರಮುಖ ನಾಯಕರೂ, ದೇಶಪ್ರೇಮಿಗಳೂ, ಸಮಾಜ ಸುಧಾರಕರೂ ಹೇಳಿರತಕ್ಕ ಮಾತುಗಳನ್ನೇ ನಾನಿಂದು ನಿಮ್ಮ ಮುಂದೆ ಒತ್ತಿ ಹೇಳುತ್ತಿದ್ದೇನೆ. ವಿದ್ಯೆಯ ಮಹತ್ವವೆಷ್ಟೆಂಬುದರ ಅರಿವು ಸ್ವಲ್ಪಮಟ್ಟಿಗಾದರೂ ನಿಮಗಾಗಿದ್ದರೆ ನನ್ನ ಭಾಷಣದ ಉದ್ದೇಶ ಸಾರ್ಥಕವಾಯಿತೆಂದು ಭಾವಿಸುತ್ತೇನೆ." ಇಷ್ಟು ಹೇಳಿ ಶ್ರೀಧರ ಕೂತ. ನೆರೆದಿದ್ದ ಸಭೆ ಚಪ್ಪಾಳೆಗಳ ಸುರಿಮಳೆಗರೆಯಿತು. ಬಳಿಕ ಚಂದ್ರವದನೆಯೂ ಸುಮಿತ್ರೆಯೂ ಜತೆಯಾಗಿ ಹಾಡಲಾರಂಭಿಸಿದರು. ಮೊದಲು ಒಂದೆರಡು ತ್ಯಾಗರಾಜ ಕೀರ್ತನೆಗಳನ್ನೂ ಬಳಿಕ ಪುರಂದರ ದಾಸರ ಮತ್ತು ಕನಕದಾಸರ ಕೀರ್ತನೆಗಳನ್ನೂ ಸುಶ್ರಾವ್ಯವಾಗಿ ಹಾಡಿ ಸಭಿಕರೆಲ್ಲರ ಮನಸ್ಸನ್ನೂ ರಂಜಿಸಿದರು. ಅವರಿಬ್ಬರ ಸಂಗೀತ ನಡೆಯುತ್ತಿದ್ದಾಗ ಎಲ್ಲರ ಮುಖಗಳಲ್ಲೂ ಸಂತೋಷ ತುಂಬಿ ತುಳುಕಾಡುತ್ತಿತ್ತು. ಹಾಡುಗಾರಿಕೆ ಮುಗಿದ ನಂತರ ಸಭಿಕರಲ್ಲಿ ಕೆಲವರೆದ್ದು ನಿಂತು "ಇನ್ನೂ ಒಂದೆರಡು ದೇವರನಾಮಾ ಹಾಡಬೇಕು ತಾಯಿ" ಎಂದು ಪ್ರಾರ್ಥಿಸಿಕೊಂಡರು. ಸಭಿಕರ ಪ್ರಾರ್ಥನೆಯನ್ನು ನಿರಾಕರಿಸಲು ಗಾಯಕಿಯರಿಗೆ ಮನಸ್ಸು ಬರಲಿಲ್ಲ. ಮತ್ತೆರಡು ದೇವರನಾಮಗಳನ್ನು ಹಾಡಿ ಸಭಿಕರ ಮೆಚ್ಚುಗೆಗೆ ಪಾತ್ರರಾದರು. ಸಂಗೀತವಾಚನಂತರ ಒಂದು ಸಣ್ಣ ಪ್ರಸಂಗ ನಡೆಯಿತು. ಅಷ್ಟುಹೊತ್ತಿನ ವರೆಗೂ ಹಾರ್ಮೋನಿಯಮ್ಮಿನ ಶ್ರುತಿ ಮೀಟುತ್ತಿದ್ದ ಮೈಲಾರಯ್ಯನವರು ಉತ್ಸಾಹಪೂರಿತರಾಗಿ "ಅಪ್ಪಣೆಯಾದರೆ ನಾನೂ ಒಂದಿಷ್ಟು ಭಾರತಾ ಓದ್ತೀನಿ ಸ್ವಾಮಿ" ಎಂದು ಶ್ರೀಧರನ ಕಡೆ ನೋಡುತ್ತಾ ಹೇಳಿದರು. ಶಾನುಭೋಗರ ಮಾತು ಕೇಳಿ ಶ್ರೀಧರನಿಗೆ ಮಹದಾಶ್ಚರ್ಯವಾಯಿತು. "ಓಹೋ ಅಗತ್ಯವಾಗಿ ಆಗಬಹುದು ಶಾನುಭೋಗರೇ. ನೀವು ಭಾರತ ಓದ್ತೀರೀಂತ ನನಗೆ ತಿಳಿದಿದ್ದರೆ ಮೊದಲು ನಿಮ್ಮಿಂದಲೇ ಭಾರತ ವಾಚನವಿಡಿಸುತ್ತಿದ್ದೆ. ಈಗಲೂ ಮೀರಿಹೋದ್ದೇನೂ ಇಲ್ಲ. ಒಂದರ್ಧಗಂಟೆ ಭಾರತ ಓದಿ. ಆಮೇಲೆ ಸಭೆಯನ್ನು ಬರಖಾಸ್ತು ಮಾಡೋಣ" ಎಂದ ಶ್ರೀಧರ.

ಕೂಡಲೇ ಮೈಲಾರಯ್ಯನವರು ಒಳಗೆ ಹೋಗಿ ಜೀರ್ಣವಾಗಿಹೋಗಿದ್ದ ಹಳೆಯ ಪುಸ್ತಕವೊಂದನ್ನು ಕೈಯಲ್ಲಿಟ್ಟುಕೊಂಡು ಬಂದರು. ಪುಸ್ತಕವನ್ನು ತೆರೆದು ಹಾರ್ಮೋನಿಯಮ್ಮಿನ ಮೇಲಿಟ್ಟುಕೊಂಡರು.

"ಯಾವ ಭಾಗವನ್ನು ಓದಲಿ ಸ್ವಾಮಿ?" ಎಂದು ಶ್ರೀಧರನನ್ನು ಪ್ರಶ್ನಿಸಿದರು.

"ನೀವು ಯಾವ ಭಾರತ ಓದ್ತೀರಿ ಶ್ಯಾನುಭೋಗರೇ? ಕುಮಾರ ವ್ಯಾಸನ ಭಾರತವನ್ನೋ? ಜೈಮಿನಿಯನ್ನೋ?"

"ನನಗೆ ಕುಮಾರವ್ಯಾಸನ ಭಾರತವೇ ಬಹಳ ಪ್ರಿಯವಾದ್ದು ಸ್ವಾಮಿ. ಅದನ್ನೇ ನಾನು ಅಭ್ಯಾಸ ಮಾಡಿರೋದು."

"ಸರಿ ಹಾಗಾದರೆ. ನಿಮಗಿಷ್ಟವಾಗಿರುವ ಭಾಗವನ್ನೇ ಓದಿ ಪೈಲಾರಯ್ಯ."

ಶ್ರೀಧರನ ಮಾತು ಕೇಳಿ ಶಾನುಭೋಗರಿಗೆ ಅಮಿತಾನಂದವುಂಟಾಗಿ ಬಿಟ್ಟಿತು. ತಮಗೆ ಅತ್ಯಂತ ಪ್ರಿಯವಾಗಿದ್ದ 'ಕುಂತೀ-ಕರ್ಣ ಸಂವಾದ'ವನ್ನೇ ಅಂದಿನ ವಾಚನಕ್ಕೆ ಆರಿಸಿಕೊಂಡರು. ಸಂಗೀತ ಜ್ಞಾನವೂ ತಕ್ಕಮಟ್ಟಿ ಗಿದ್ದುದರಿಂದ ಸುಶ್ರಾವ್ಯವಾಗಿಯೇ ಭಾರತ ವಾಚನ ಗೈದರು. ಅವರ ವಾಚನ ಪೂರೈಸಲು ಮುಕ್ಕಾಲು ಗಂಟೆ ಹಿಡಿಯಿತು. ಅವರ ವಾಚನವಾದ ನಂತರ, "ಬಹಳ ಸೊಗಸಾಗಿ ಭಾರತಾ ಓದ್ತೀರಿ ಪೈಲಾರಯ್ಯಾ. ಕೇಳಿ ಬಹಳ ಸಂತೋಷವಾಯಿತು" ಎಂದ ಶ್ರೀಧರ. ಅವನ ಮಿತ್ರರೆಲ್ಲರೂ ಅವನ ಅಭಿಪ್ರಾಯವನ್ನೇ ವ್ಯಕ್ತಪಡಿಸಿದರು. ನೆರೆದಿದ್ದ ಸಭಿಕರಿಗೆಲ್ಲಾ ತಮ್ಮ ಶಾನುಭೋಗರು ಭಾರತ ವಾಚನ ಮಾಡುತ್ತಾರೆಂದು ಅಂದೇ ತಿಳಿದದ್ದು. ಅಂತೆಲೇ ಅವರ ಕುತೂಹಲ ಆಶ್ಚರ್ಯಗಳಿಗಂತೂ ಕೊನೆಮೊದಲಿರಲಿಲ್ಲ. ಕಡೆಯದಾಗಿ ರಾಷ್ಟ್ರಗೀತೆ ಹಾಡಿದ ನಂತರ ಅಂದಿನ ಸಭೆ ಬಹಳ ಯಶಸ್ವಿ ಯಾಗಿ ಮುಕ್ತಾಯಗೊಂಡಿತು.

## ೨೯

ಮರುದಿನದಿಂದಲೇ ಶ್ರೀಧರ ಉದ್ದೇಶಿಸಿದ್ದ ಕಾರ್ಯಕ್ರಮ ಬಹಳ ಬಿರುಸಿ ನಿಂದ ಆರಂಭವಾಗಿಹೋಯಿತು. ಶ್ರೀಧರ ತನ್ನ ಮಿತ್ರಮಂಡಲಿಯನ್ನು ಮೂರು ಭಾಗವಾಗಿ ವಿಂಗಡಿಸಿದ. ಹಳ್ಳಿಯವರಿಗೆ ಅಕ್ಷರಾಭ್ಯಾಸ ಮಾಡಿ ಸುವ ಸಲುವಾಗಿ ನಾಲ್ಕು ಜನರನ್ನೊಳಗೊಂಡ ಶಿಕ್ಷಣ ಮಂಡಲಿಯೊಂದನ್ನು ನಿರ್ಮಿಸಿದ. ಅದರಲ್ಲಿ ಶ್ರೀಧರನೂ, ಅನಂತರಾಮಯ್ಯನೂ, ಇನ್ನಿಬ್ಬರು

ಮಿತ್ರರೂ ಇದ್ದರು. ಐದುಜನ ಮಿತ್ರರನ್ನೊಳಗೊಂಡ 'ಗ್ರಾಮಸುಧಾರಣಾ ಸಮಿತಿ'ಯೊಂದನ್ನು ರಚಿಸಿದ ಶ್ರೀಧರ. ಆ ಸಮಿತಿಯ ಕಾರ್ಯ ಕಲಾಪಗಳು ಬಹು ಮುಖವಾಗಿದ್ದುವು. ಗ್ರಾಮ ಸುಧಾರಣೆಗೆಸಂಬಂಧ ಪಟ್ಟ ವಿಚಾರಗಳ ಅಂದರೆ ಗ್ರಾಮನಿರ್ಮಲೀಕರಣ, ಅದರ ಆವಶ್ಯಕತೆ ಮತ್ತು ಅದರ ಸಾಧನೋಪಾಯಗಳು, ಜನಸಾಮಾನ್ಯರಿಗೆ ತಿಳಿದಿರ ಬೇಕಾದ ಆರೋಗ್ಯ ಸೂತ್ರಗಳು ಹಾಗೂ ಅವುಗಳನ್ನು ಪಾಲಿಸುವ ಬಗೆ, ನಮ್ಮ ಹಳ್ಳಿಗಳಲ್ಲಿ ಪ್ರಸ್ತುತ ರೂಢಿಯಲ್ಲಿರತಕ್ಕ ವ್ಯವಸಾಯಪದ್ಧತಿ, ಅದರ ಕುಂದುಕೊರತೆಗಳು, ಅವುಗಳ ನಿವಾರಣೋಪಾಯಗಳು, ಮತ್ತು ಅವು ಗಳಲ್ಲಿ ಅತ್ಯವಶ್ಯವಾಗಿ ಆಗಲೇಬೇಕಾಗಿರುವ ಸುಧಾರಣೆಗಳು, ನಮ್ಮ ರೈತಾಪಿ ಜನ ಬೆಳೆಯಬೇಕಾಗಿರುವ ವ್ಯಾಪಾರೀ ಮತ್ತು ತರಕಾರೀ ಬೆಳೆಗಳು—ಅವು ಗಳನ್ನು ಬೆಳೆಸುವ ವಿಧಾನಗಳು, ನಮ್ಮ ಹಳ್ಳಿಗಳ ಆರ್ಥಿಕ ವ್ಯವಸ್ಥೆಯಲ್ಲಿ ಪಶುಪಾಲನೆಗಿರತಕ್ಕ ಮಹತ್ವ, ಗೋಮಾಳದ ಉಪಯುಕ್ತತೆ, ಗ್ರಾಮಾಭಿ ವೃದ್ಧಿ ಕಾರ್ಯದಲ್ಲಿ ಸಹಕಾರತತ್ವಕ್ಕಿರುವ ಪ್ರಾಧಾನ್ಯತೆ, ಅದನ್ನು ಹಳ್ಳಿಯ ಆರ್ಥಿಕ ಜೀವನದಲ್ಲಿ ಉಪಯೋಗಿಸಿಕೊಳ್ಳುವ ಮಾರ್ಗಗಳು, ಸಹಕಾರ ತತ್ವದ ಬಗ್ಗೆ ಸಾಕಷ್ಟು ಪ್ರಚಾರ ನಡೆಯಬೇಕಾದ ಆವಶ್ಯಕತೆ, ಕಡೆಯ ದಾಗಿ ರೈತಬಾಂಧವರ ರಕ್ತವನ್ನೆಲ್ಲಾ ಶೋಷಿಸಿ ಅವರನ್ನು ಭಿಕಾರಿಗ ಳನ್ನಾಗಿ ಮಾಡುತ್ತಿರುವ ಸಾಹುಕಾರರಿಂದುಂಟಾಗುತ್ತಿರುವ ಅನರ್ಥ ಪರಂಪರೆಗಳು, ಒಂದೇ ಎರಡೇ ಹೇಳುವುದಕ್ಕೆ! ಮುಖ್ಯವಾಗಿ ನಮ್ಮ ಹಳ್ಳಿಗಳ ಸರ್ವತೋಮುಖವಾದ ಪ್ರಗತಿಯನ್ನು ಸಾಧಿಸಲು ರೈತಬಾಂಧವರು ಅತ್ಯವಶ್ಯಕವಾಗಿ ಕೈಗೊಳ್ಳಬೇಕಾಗಿರುವ ಕಾರ್ಯಕ್ರಮಗಳ ಬಗ್ಗೆ ಸಾಕಷ್ಟು ತಿಳಿವಳಿಕೆಯುಂಟುಮಾಡುವುದೇ ಈ ಗ್ರಾಮಸುಧಾರಣಾ ಸಮಿತಿಯ ಮುಖ್ಯ ಕರ್ತವ್ಯವಾಗಿತ್ತು. ಅಷ್ಟಕ್ಕೇ ಮುಗಿದಹಾಗಾಗಲಿಲ್ಲ ಈ ಸಮಿತಿಯ ಕೆಲಸ. ಬೋಧನೆಯ ಜತೆಗೆ ರಚನಾತ್ಮಕ ಸಲಹೆಗಳನ್ನು ಕೊಡುವುದೂ, ಆ ಸಲಹೆಗಳನ್ನು ಕಾರ್ಯರೂಪಕ್ಕೆ ತರಲು ಬೇಕಾದ ಸಹಾಯಸಂಪತ್ತು ಗಳನ್ನೊದಗಿಸುವುದೂ ಈ ಸಮಿತಿಯಲ್ಲಿ ಕೆಲಸ ಮಾಡುವವರ ಹೊಣೆಗಾರಿಕೆ ಯಾಗಿತ್ತು. ಇಂಥಹ ದೊಡ್ಡ ಜವಾಬ್ದಾರಿಯನ್ನು ನಿರ್ವಹಿಸುವ ಶಕ್ತಿ ಶ್ರೀಧರನಿಗಿರಲಿಲ್ಲ ನಿಜ. ಆದರೆ ಆವನು ಏರ್ಪಡಿಸಿದ ಪ್ರಚಾರ ಭಾಷಣಗಳು

ರೈತಬಾಂಧವರಮೇಲೆ ಮಹತ್ತರ ಪ್ರಭಾವವನ್ನುಂಟುಮಾಡಿದವು. ಪಟೇಲರು ಶಾನುಭೋಗರಾದಿಯಾಗಿ ಪ್ರತಿಯೊಬ್ಬರೂ ತಮ್ಮ ಕೈಲಾದ ಧನಸಹಾಯ ನೀಡಲು ಮುಂದೆ ಬಂದರು. ಹೀಗೆ ಸಂಗೃಹೀತವಾದ ಹಣ ವನ್ನು ಹಲವಾರು ರಚನಾತ್ಮಕ ಕಾರ್ಯಗಳಿಗಾಗಿ ವಿನಿಯೋಗಿಸಿದ ಶ್ರೀಧರ. ಅವನ ಕಾರ್ಯದಕ್ಷತೆಯನ್ನೂ, ವ್ಯವಸ್ಥಾ ಚತುರತೆಯನ್ನೂ ಹಳ್ಳಿಯ ಜನ ಬಾಯಿತುಂಬಾ ಕೊಂಡಾಡತೊಡಗಿದರು.

ಮೂರನೆಯದಾಗಿ 'ಮನರಂಜನಾ ಸಮಿತಿ'ಯೊಂದನ್ನು ಏರ್ಪಡಿಸಿದ ಶ್ರೀಧರ. ಸಂಗೀತ ಅಂದರೆ ದೇವರನಾಮಗಳ ಹಾಡುಗಾರಿಕೆ, ಭಾರತ ಮತ್ತು ಕಾವ್ಯ ವಾಚನ, ವಯಸ್ಕರ ವಿದ್ಯಾಭ್ಯಾಸ ಸಮಿತಿಯವರು ಪ್ರಕಟಿಸಿ ಸಿರುವ ಪುಸ್ತಕಗಳ ಓದುವಿಕೆ ಮುಂತಾದುವನ್ನು ನಿರ್ವಹಿಸುವುದು ಆ ಸಮಿತಿಯ ಕರ್ತವ್ಯವಾಗಿತ್ತು. ಇದರಲ್ಲಿ ಚಂದ್ರವದನೆಯೂ, ಸುಮಿತ್ರೆಯೂ ಶ್ರೀಧರನೂ, ರಂಗನಾಥನೂ ಭಾಗವಹಿಸಿದ್ದರು. ಮೈಲಾರಯ್ಯನವರೂ ಆಗಾಗ್ಗೆ ಭಾರತ ವಾಚನ ಮಾಡಿ ಈ ಸಮಿತಿಯ ಕಾರ್ಯಕಲಾಪಗಳಿಗೆ ಒಂದು ಮೆರುಗನ್ನು ತಂದುಕೊಡುತ್ತಿದ್ದರು.

ಹೀಗೆ ಮೂರು ಸಮಿತಿಗಳ ಮೂಲಕ ಶ್ರೀಧರ ತನ್ನ ಯೋಜನೆಗಳನ್ನು ಕಾರ್ಯರೂಪಕ್ಕೆ ತರಲು ಪ್ರಯತ್ನಿಸಿದ. ಅವನ ಪ್ರಯತ್ನಕ್ಕೆ ಅವನ ಮಿತ್ರರ ಹಾಗೂ ರೈತಬಾಂಧವರ ಸಹಕಾರ ಸಹಾನುಭೂತಿಗಳು ದೊರೆತೇ ದೊರೆತವು. ಅವನ ಪ್ರಯತ್ನ ಫಲಕಾರಿಯಾಯಿತು. ಅವನ ಬಹುದಿನಗಳ ಕನಸು ನನಸಾಗತೊಡಗಿತು.

ಶ್ರೀಧರ ಏರ್ಪಡಿಸಿದ್ದ ಕಾರ್ಯಕ್ರಮ ಹೀಗಿತ್ತು : ಬೆಳಿಗ್ಗೆ ಎಂಟರಿಂದ ಹನ್ನೊಂದರವರೆಗೆ ವಯಸ್ಕರ ಶಿಕ್ಷಣ ತರಗತಿಗಳು ನಡೆಯುತ್ತಿದ್ದವು. ಅಪರಾಹ್ನ ನಾಲ್ಕರಿಂದ ಆರರ ವರೆಗೆ ಗ್ರಾಮಸುಧಾರಣೆಗೆ ಸಂಬಂಧಪಟ್ಟ ವಿಚಾರಗಳ ಮೇಲೆ ಸಣ್ಣ ಸಣ್ಣ ಪ್ರಚಾರ ಭಾಷಣಗಳು ನಡೆಯುತ್ತಿದ್ದವು. ಭಾಷಣಗಳನ್ನು ಕೇಳಿಯುಂಟಾಗಿರಬಹುದಾದ ಬೇಸರವನ್ನು ನೀಗಲು ಸಂಗೀತ, ಕಾವ್ಯವಾಚನ ಮುಂತಾದ ಮನರಂಜನೆಯ ಕಾರ್ಯಕ್ರಮಗಳು ಆರಂಭವಾಗುತ್ತಿದ್ದವು. ರಾತ್ರಿ ಒಂಭತ್ತು ಗಂಟೆಯಾದರೂ ಸಭೆ ಅಲ್ಲಾಡದೆ ಕೂತಿರುತ್ತಿತ್ತು. ರಾಷ್ಟ್ರಗೀತೆಯಾದನಂತರ ಪ್ರತಿದಿನದ ಕಾರ್ಯಕ್ರಮ

ಕೊನೆಗೊಳ್ಳುತ್ತಿತ್ತು. ಬೆಳಿಗ್ಗೆಯಿಂದ ಹಿಡಿದು ರಾತ್ರಿಯ ವರೆಗೂ ಶ್ಯಾನು ಭೋಗರ ಮನೆಯ ಮುಂದಿನ ಚಪ್ಪರದಲ್ಲಿ ಜನ ಮದುವೆಗೆ ನೆರೆದಂತೆ ಕಿಕ್ಕಿರಿ ಯುತ್ತಿದ್ದರು. ಪಟೇಲರಾದಿಯಾಗಿ ಹಲವಾರು ಭಾರೀ ಕುಳಗಳಿಗೆ ಶಾನು ಭೋಗರ ಮನೆಯಲ್ಲೇ ಊಟ ಉಪಚಾರಗಳು ನಡೆದುಹೋಗುತ್ತಿದ್ದವು ರಾತ್ರಿಯ ಕಾರ್ಯಕ್ರಮುವನ್ನು ಮುಗಿಸಿಕೊಂಡು ಹಟ್ಟಿಗಳಿಗೆ ಹೋಗದ ಮುದಿ ರೈತರನೇಕರು ಶಾನುಭೋಗರ ಮನೆಯ ಹಜಾರದಲ್ಲೇ ಸ್ವಸ್ಥವಾಗಿ ಕಂಬಳಿ ಹಾಸಿ ಮಲಗಿಬಿಡುತ್ತಿದ್ದರು.

ಹದಿನೈದು ದಿನಗಳ ವರೆಗೆ ಅವಿಚ್ಛಿನ್ನವಾಗಿ ಮೇಲೆ ಹೇಳಿದಂತೆ ಕಾರ್ಯಕ್ರಮಗಳು ಜರುಗಿದುವು. ಮುಂದಿನ ಹಳ್ಳಿಗೆ ಪ್ರಯಾಣ ಬೆಳೆಸ ಬೇಕೆಂಬುದು ಶ್ರೀಧರನ ಅಪೇಕ್ಷೆ. ಆದರೆ ಅಷ್ಟು ಸುಲಭವಾಗಿ ಹಳ್ಳಿಯ ಜನ ಅವನನ್ನೂ ಅವನ ಮಿತ್ರಮಂಡಲಿಯನ್ನೂ ಬಿಟ್ಟುಕೊಡಲು ಸಿದ್ಧರಾಗಿರಲಿಲ್ಲ. ಪಟೇಲರೂ ಶಾನುಭೋಗರೂ ಶ್ರೀಧರನ ಹತ್ತಿರ ಬಂದು “ ಇನ್ನೂ ಸ್ವಲ್ಪ ದಿನ ನಮ್ಮೂರಲ್ಲೇ ಇರಬೇಕು ಸ್ವಾಮಿ ” ಎಂದು ದುಂಬಾಲು ಬಿದ್ದು ಕೇಳಿ ಕೊಂಡರು.

“ ನಿಮ್ಮೂರಲ್ಲೇ ಕೂತಿದ್ದರೆ ನಮ್ಮ ರಜವೆಲ್ಲಾ ಮುಗಿದುಹೋಗುತ್ತೆ. ನಾವಿನ್ನೂ ಬಹಳ ಹಳ್ಳಿಗಳಿಗೆ ಹೋಗಬೇಕಾಗಿದೆ. ಅಲ್ಲೆಲ್ಲಾ ಪ್ರಚಾರ ಕಾರ್ಯ ಕೈಗೊಳ್ಳಬೇಕೆಂದಿದ್ದೇವೆ. ಮುಂದಿನ ಬೇಸಿಗೆಯಲ್ಲಿ ಬೇಕಾದರೆ ನೀವು ಹೇಳಿದಷ್ಟು ದಿನ ಇರ್ತೇವೆ. ಈ ಸಲ ಸಾಧ್ಯವಿಲ್ಲ” ಎಂದು ಕರಾಖಂಡಿತ ವಾಗಿ ಹೇಳಿಬಿಟ್ಟ ಶ್ರೀಧರ. ಶ್ರೀಧರನಿತ್ತ ಸಮಾಧಾನದಿಂದ ಅವರಿಗೇನೂ ತೃಪ್ತಿಯಾದಹಾಗೆ ಕಂಡುಬರಲಿಲ್ಲವಾದರೂ ನಿರ್ವಾಹವಿಲ್ಲದೆ ಅವನನ್ನು ಬೀಳ್ಕೊಡಲು ಸಿದ್ಧರಾದರು.

* * * *

ಆದೇ ತಾನೇ ಊಟವಾಗಿತ್ತು. ಶ್ರೀಧರನೂ ಅನಂತರಾಮಯ್ಯನೂ ಹಜಾರದಲ್ಲಿ ಮಾತನಾಡುತ್ತಾ ಕುಳಿತಿದ್ದರು.

“ ನಮ್ಮ ಪ್ರೋಗ್ರಾಮಿನ ಪ್ರಕಾರವೇ ಈ ಹಳ್ಳಿಯಲ್ಲಿ ನಮ್ಮ ಪ್ರಚಾರ ಕಾರ್ಯ ಬಹಳ ಯಶಸ್ವಿಯಾಗಿ ನೆರವೇರಿದ ಹಾಗಾಯಿತು. ಈಗ ಮುಂದಿನ ಹಳ್ಳಿಗೆ ಹೋಗಬಹುದಲ್ಲಾ ಅನಂತರಾಮಯ್ಯ.”

"ಒಟ್ಟು ಹತ್ತು ಹಳ್ಳಿಗಳಿಗೆ ಹೋಗಬೇಕಾಗಿದೆ. ಒಂದೊಂದು ಹಳ್ಳಿಯಲ್ಲೂ ಒಂದು ವಾರಕ್ಕಿಂತಲೂ ಹೆಚ್ಚಿಗೆ ನಿಲ್ಲಲು ಕಾಲಾವಕಾಶವಿಲ್ಲ. ನಾವು ಮೈಸೂರು ಬಿಟ್ಟು ಆಗಲೇ ಹದಿನೈದು ದಿನಗಳಾಗಿ ಹೋದವು. ನಾಳೆಯೇ ಊರು ಬಿಡೋಣ ಶ್ರೀಧರಾ. ನಮ್ಮ ಪ್ರೋಗ್ರಾಂ ಕೀಪ್ ಅಪ್ ಮಾಡಬೇಕಲ್ಲ."

"ಹಾಗೇ ಮಾಡೋಣಯ್ಯ. ಈ ಊರಿನ ಜನ ಬಹಳ ಒಳ್ಳೆಯವರು. ನಮ್ಮ ಕರೆಗೆ ಓಗೊಟ್ಟು ಶ್ರದ್ಧಾಭಕ್ತಿಗಳಿಂದ ದಿನವೂ ಎಷ್ಟೊಂದು ಜನ ಸಭೆ ಸೇರುತ್ತಿದ್ದಾರೆ ನೋಡು ಅನಂತರಾಮಯ್ಯ! ನಮ್ಮ ಕಾರ್ಯಕ್ರಮ ಎಷ್ಟು ಯಶಸ್ವಿಯಾಗಿ ಪ್ರಾರಂಭವಾಗಿದೆ ನೋಡು. ಇದೇ ರೀತಿಯ ಜನ ನಮಗೆ ಪ್ರತಿಯೊಂದು ಹಳ್ಳಿಯಲ್ಲಿಯೂ ಸಿಕ್ಕರೆ ನಾವು ಜಯಭೇರಿ ಹಾಕಿ ಬಿಡಬಹುದಲ್ಲವೆ?"

"ಅಷ್ಟಲ್ಲದೆ! ಅದಿರಲಿ. ನಾಳೆ ಎಷ್ಟೊಹೊತ್ತಿಗೆ ಪ್ರಯಾಣ?"

"ಬೆಳಿಗ್ಗೆಯೇ ಹೊರಟುಬಿಡೋಣಯ್ಯ. ಸಾವಕಾಶವೇಕೆಮಾಡಬೇಕು."

"ಹೊರಟುಬಿಡೋಣಾಂತ ಎಷ್ಟು ಧೈರ್ಯವಾಗಿ ಹೇಳ್ತಿದೀಯ ಶ್ರೀಧರಾ! ನಿನ್ನೆ ರಾತ್ರಿಯೆಲ್ಲಾ ಏಕೋ ಚಳಿಚಳಿಯಾಗುತ್ತೆಂದು ಹೇಳಿ ನಮಗೆಲ್ಲಾ ಗಾಭರಿ ಹುಟ್ಟಿಸಿಬಿಟ್ಟೆಯಲ್ಲಾ! ಇಲ್ಲಿಗೆ ಬಂದಾಗಿಂದಲೂ ನಚ್ಚುನಚ್ಚಾಗೇ ಇದ್ದೀಯ. ನಿನ್ನ ಆರೋಗ್ಯ ಚೆನ್ನಾಗಿಲ್ಲ. ನೀನಿಲ್ಲೇ ಇದ್ದು ಔಷಧೀ ತಗೊಂಡು ಸುಧಾರಿಸಿಕೊ. ನಾವೆಲ್ಲಾ ನೋಡ್ಕೊಳ್ತೀವಿ. ನೀನ್ಯೇನೂ ಯೋಚನೆ ಮಾಡಬೇಡ."

"ನೀವೆಲ್ಲಾ ಇರೋವಾಗ ನನಗೇನೂ ಯೋಚನೆಯಿಲ್ಲಾ ಅನಂತರಾಮಯ್ಯ. ಈಗ ನಾವು ಹೋಗುತ್ತಿರೋದು ಎರಡನೇ ಹಳ್ಳಿಗೆ. ದ್ವಿತೀಯವಿಘ್ನವಾಗುತ್ತಲ್ಲಾಂತ ಚಿಂತೆ ಅಷ್ಟೆ."

"ದ್ವಿತೀಯ ವಿಘ್ನವೂ ಇಲ್ಲ ಏನೂ ಇಲ್ಲ. ನೀನೊಬ್ಬನೇ ಬಂದಿದ್ದರೆ ಆ ಮಾತು. ನಿನ್ನ ಜತೇಲಿ ನಾವೆಲ್ಲಾ ಬಂದಿದ್ದೀವಲ್ಲಾ. ಹೇಗಿದ್ದರೂ ನೀನು ಮೇಲ್ಪಂಕ್ತಿ ಹಾಕಿಕೊಟ್ಟಿದ್ದೀಯ. ಅದರಂತೆ ನಾವು ನಡೆದುಕೊಳ್ಳುತ್ತೇವೆ.

"ಅದು ಸರಿಯಯ್ಯ. ನೀವೆಲ್ಲಾ ಹೊರಟು ಹೋದರೆ ನಾನೊಬ್ಬನೇ ಇಲ್ಲಿ ನೊಣಾ ಹೊಡೀತಿರಬೇಕು!"

ಅಷ್ಟುಹೊತ್ತಿಗೆ ಮೈಲಾರಯ್ಯನವರು ಔಷಧೀ ಶೀಸೆಯೊಂದನ್ನು ತಂದು ಶ್ರೀಧರನ ಕೈಗಿತ್ತರು.

ಔಷಧೀ ತರಿಸಿದಿರಾ, ಮೈಲಾರಯ್ಯ ? ಎಲ್ಲಿಂದ !" ಎಂದ ಶ್ರೀಧರ ಆಶ್ಚರ್ಯದಿಂದ.

"ಹೌದು ಸ್ವಾಮೀ ನಮ್ಮ ರೈತರು ಬೆಳಿಗ್ಗೆ ನಂಜನಗೂಡಿಗೆ ಏನೋ ಕೆಲಸದ ಮೇಲೆ ಹೋಗಿದ್ದರು. ಅವರ ಕೈಲಿ ನಿಮಗೆ ವಾಪಸಿನಿಂದ ಔಷಧೀ ತರಿಸಿದ್ದೀನಿ. ಮೂರು ಹೊತ್ತು ಔಷಧೀನೂ ಮೂರು ಮಾತ್ರೇನೂ ಕೊಟ್ಟಿದ್ದಾರೆ ಡಾಕ್ಟ್ರು. ಈಗೊಪ್ಪತ್ತು ಔಷಧೀ ಕುಡಿದುಬಿಡೀ ಸ್ವಾಮೀ."

"ಕುಡೀತೀನಿ ಮೈಲಾರಯ್ಯ. ನಿಮಗೆ ವೃಥಾ ತೊಂದರೆಯಾಯಿತಲ್ಲಾ".

"ಛೆ ಛೆ ತೊಂದರೆಯೇನು ಬಂತು ಸ್ವಾಮೀ ಇದರಲ್ಲಿ. ತರೋ ಪುಣ್ಯಾತ್ಮರು ತಂದುಕೊಟ್ಟರು. ನಾನೇನು ಕಷ್ಟಪಟ್ಟೆ ಮಹಾ."

ಮಾರನೆಯ ದಿನ ಬೆಳಿಗ್ಗೆ ಬರದವಳ್ಳಿಗೆ ಪ್ರಯಾಣ ಬೆಳೆಸುವುದೆಂದು ನಿಷ್ಕರ್ಷೆಯಾಯಿತು. ಪ್ರಯಾಣದ ಸಿದ್ಧತೆಗಳೂ ನಡೆಯತೊಡಗಿದವು. ಬರದವಳ್ಳಿಯ ಪಟೇಲ್, ಶಾನುಭೋಗರಿಗೆ ಪರಿಚಯ ಪತ್ರಗಳನ್ನು ಬರೆದು ಕೊಟ್ಟರು ಮೈಲಾರಯ್ಯ. ಸಂಜೆ ಮಿತ್ರಗೋಷ್ಠಿ ಊರು ನೋಡಿಕೊಂಡು ಬರಲು ಹೊರಟಿತು. ಶ್ರೀಧರ ಅಸ್ವಸ್ಥತೆಯಿಂದ ಮನೆಯಲ್ಲೇ ಉಳಿಯ ಬೇಕಾಯಿತು. ಆ ಹಳ್ಳಿಯ ಹೆಸರು ಸಿರಿವಂತೆ. ಹೆಸರಿಗೆ ತಕ್ಕಂತೆಯೇ ಸೊಗಸಾದ ಊರು. ಸುಮಾರು ನೂರು ಒಕ್ಕಲಿದ್ದರೆ ಹೆಚ್ಚು. ಬ್ರಾಹ್ಮಣ ಸಂಸಾರಗಳು ಐದಾರು ಇದ್ದಿರಬಹುದು. ಸುಮಾರಾಗಿ ದೊಡ್ಡದಾದ ಒಂದೆರಡು ದಿನಸಿ ಅಂಗಡಿಗಳಿದ್ದವು. ಆಂಜನೇಯಸ್ವಾಮಿಯ ಹೆಸರಿನಲ್ಲಿ ಸಹಕಾರ ಸಂಘವೊಂದು ಸ್ಥಾಪಿತವಾಗಿತ್ತು. ಸಾಲಾಗಿ ಇರ್ಕಜೆಗಳಲ್ಲೂ ಮನೆಗಳು. ಅದೇ ಊರಿನ ಮುಖ್ಯಬೀದಿ. ಆ ರಸ್ತೆಯ ತುದಿಯಲ್ಲಿ ಸಣ್ಣದೊಂದು ಈಶ್ವರ ದೇವಸ್ಥಾನ. ಹಳ್ಳಿಯ ಪುರೋಹಿತರು ಗಿರಿಭಟ್ಟರೇ ದೇವಸ್ಥಾನದ ಪೂಜಾರಿ. ಒಂದರ್ಧ ಮೈಲಿಯ ಸುತ್ತಳತೆಯಲ್ಲಿ ಊರೆಲ್ಲಾ

ಅದೃಶ್ಯವಾಗಿ ಹೋಗುತ್ತದೆ. ಊರು ದಾಟಿದ ಕೂಡಲೇ ಕಣ್ಣಿಗೆ ಹಬ್ಬವುಂಟು ಮಾಡುವ ಪ್ರಕೃತಿಯ ಮನಮೋಹಕ ದೃಶ್ಯಗಳು ಕಂಗೊಳಿಸುತ್ತವೆ. ಕಣ್ಣಿನ ದೃಷ್ಟಿ ಹೋಗುವ ತನಕ ಪಚ್ಚೆಪೈರುಗಳು ಹಬ್ಬಿರುತ್ತವೆ. ಒಂದು ಕಡೆ ಬಂಗಾರದ ಭತ್ತದ ಗದ್ದೆಗಳು ದಟ್ಟವಾಗಿ ಹರಡಿದ್ದರೆ, ಮತ್ತೊಂದೆಡೆ ತೆನೆ ತುಂಬಿದ ಜೋಳದ ರಾಶಿ ತಾನೇತಾನಾಗಿ ಹುಲುಸಾಗಿ ಬೆಳೆದು ತಲೆಯೆತ್ತಿ ನಿಂತಿರುತ್ತದೆ. ಸ್ವಲ್ಪ ದೂರದಲ್ಲೇ ಕಬ್ಬಿನ ಗದ್ದೆಗಳಿವೆ. ಕಬ್ಬಿನ ಗದ್ದೆಗಳಿಗೆ ಕಾಲುವೆಗಳ ಮೂಲಕ ನೀರು ಹಾಯಿಸಿದ್ದಾರೆ. ಕಾಲುವೆಗಳಲ್ಲಿ ಹರಿಯುತ್ತಿರುವ ನೀರು ಅದೆಷ್ಟು ತಿಳಿಯಾಗಿ ಸ್ವಚ್ಛವಾಗಿರುತ್ತದೆ! ಕುಡಿಯುವುದಕ್ಕಂತೂ ಕಲ್ಲುಸಕ್ಕರೆ ಪಾನಕದಷ್ಟು ಸವಿ. ಸಿರಿವಂತೆಯ ರೈತರು ಸೋಮಾರಿಗಳಲ್ಲ; ಬಹಳ ಕಷ್ಟಪಟ್ಟು ಬೇಸಾಯ ಮಾಡುವ ಜನ. ಹೊಲ ಗದ್ದೆಗಳ ಜತೆಗೆ ಸೊಗಸಾದ ತೋಟಗಳನ್ನೂ ಬೆಳೆಸಿಕೊಂಡಿದ್ದಾರೆ. ಬಾಳೆಯ ತೋಟಗಳೇ ಹೆಚ್ಚು. ಹಲವರು ತೆಂಗಿನ ತೋಟಗಳನ್ನೂ ಮಾಡಿಕೊಂಡಿದ್ದಾರೆ.

ಭೂಮಿ ಕಾಣಿ ಏನಿಲ್ಲದಿದ್ದರೂ ಕಡೆಗೊಂದು ಬಾಳೆಯ ತೋಟವನ್ನಾದರೂ ಬೆಳಸದಿರುವ ರೈತನೇ ಸಿರಿವಂತೆಯಲ್ಲಿರಲಿಲ್ಲವೆಂದು ಹೇಳಿದರೆ ತಪ್ಪಾಗಲಾರದು. ಸಿರಿವಂತೆಯ ಸೌಂದರ್ಯಕ್ಕೆ ಕಲಶವಿಟ್ಟಂತೆ ಸಣ್ಣದೊಂದು ಹೊಳೆ ಹರಿಯುತ್ತಿದೆ. ಹೊಳೆಯ ಪಾತ್ರ ಸಣ್ಣದಾದರೂ ನೀರು ಸದಾ ತುಂಬಿರುತ್ತದೆ. ಹಳ್ಳಿಯ ಬೇಸಾಯಕ್ಕೆ ಬಹಳ ಉಪಯುಕ್ತವಾಗಿದೆ ಆ ಹೊಳೆ.

ಗೆಳೆಯರು ಸಿರಿವಂತೆಯ ಪ್ರಕೃತಿ ಸೌಂದರ್ಯವನ್ನು ನೋಡಿ ಆನಂದಿಸಿದರು. ಶಾನುಭೋಗರು ಎಲ್ಲರನ್ನೂ ತಮ್ಮ ಕಬ್ಬಿನ ಗದ್ದೆಗಳಿಗೆ ಕರೆದುಕೊಂಡುಹೋದರು. ಪ್ರತಿಯೊಬ್ಬರಿಗೂ ಜಲ್ಲೆ ಜಲ್ಲೆ ಕಬ್ಬುಗಳನ್ನು ಕಿತ್ತು ಕೊಟ್ಟರು. ಎಲ್ಲರೂ ಕಬ್ಬು ತಿಂದು ತೃಪ್ತಿಗೊಂಡರು. ಶಾನುಭೋಗರು ಅವರನ್ನು ತಮ್ಮ ತೆಂಗಿನ ತೋಟಕ್ಕೆ ಕರೆದೊಯ್ದರು. ಎಲ್ಲರಿಗೂ ಯಥೇಚ್ಛವಾಗಿ ಎಳನೀರುಗಳ ಉಪಯೋಗವಾಯಿತು. ಮಿತ್ರರೆಲ್ಲರೂ ಶಾನುಭೋಗರ ಔದಾರ್ಯವನ್ನೂ ಸೌಜನ್ಯತೆಯನ್ನೂ ಕಂಡು ಬಹಳವಾಗಿ ಸಂತೋಷಿಸಿದರು. ಅವರು ನಡೆಸಿದ ಸತ್ಕಾರಕ್ಕಾಗಿ ಮಿತ್ರಮಂಡಲಿಯ ಪರವಾಗಿ ಅನಂತರಾಮಯ್ಯ ಅವರಿಗೆ ಧನ್ಯವಾದಗಳನ್ನರ್ಪಿಸಿದ. ಎಲ್ಲರೂ

ಹೊಳೆಯ ತೀರದಲ್ಲಿ ಕುಳಿತು ವಿನೋದವಾಗಿ ಹರಟೆಕೊಚ್ಚಲಾರಂಭಿಸಿದರು. ಮಿತ್ರಗೋಷ್ಠಿ ಮಾತುಕತೆಗಳಲ್ಲಿ ಮುಳುಗಿ ಹೋಗಿದ್ದುದರಿಂದ ಯಾರೊಬ್ಬರಿಗೂ ಹೊತ್ತುಗೊತ್ತುಗಳ ಪರಿವೆಯೇ ಇದ್ದಿರಲಿಲ್ಲ. ಕಡೆಗೆ ಶಾನುಭೋಗರೇ "ಹಾಗೆ ಕೂತು ಮಾತಾಡುತ್ತಿದ್ದರೆ ಬೆಳಗಾಗಿ ಹೋಗತ್ತೆ. ಇನ್ನು ನಡೀರಿ. ಮನೆಗೆ ಹೋಗೋಣ. ಗಂಟೆ ಎಷ್ಟಾಯಿತೋ ಏನೋ" ಎಂದು ಎಲ್ಲರನ್ನೂ ಎಚ್ಚರಿಸಿದರು. ಗೆಳೆಯರೆಲ್ಲರೂ ಎದ್ದು ಮನೆಯ ದಾರಿ ಹಿಡಿದರು.

* * * *

ಮರುದಿನ ಬೆಳಿಗ್ಗೆ ಏಳು ಗಂಟೆಗೆಲ್ಲಾ ಮಿತ್ರಮಂಡಲಿಯ ಪ್ರಯಾಣದ ಸಿದ್ಧತೆಗಳು ಮುಗಿದುಹೋದವು. ಶ್ರೀಧರ ಮಾತ್ರ ತಾನೂ ಪ್ರಯಾಣ ಬೆಳೆಸುವ ಹಾಗಿಲ್ಲವಲ್ಲಾ ಎಂದು ಮನ್ಮರುಗುತ್ತಾ ಹಾಸಿಗೆಯ ಮೇಲೆ ಹೊರಳಾಡುತ್ತಿದ್ದ. ಇಡೀ ರಾತ್ರಿ ಅವನು ರೆಪ್ಪೆಗೆ ರೆಪ್ಪೆ ಹಚ್ಚಿರಲಿಲ್ಲ. ಕೆಂಡಾಮಂಡ ಜ್ವರ ಸುಡುತ್ತಿತ್ತು. ಹಿಂದಿನ ದಿನ ಮೂರು ಹೊತ್ತು ಔಷಧಿ ಬಿದ್ದಿದ್ದರೂ ಗುಣ ಮಾತ್ರ ಕಿಂಚಿತ್ತಾದರೂ ಕಂಡುಬರಲಿಲ್ಲ. ಶ್ರೀಧರನ ಸ್ಥಿತಿಯನ್ನು ನೋಡಿ ಎಲ್ಲರೂ ಕಳವಳಕ್ಕೀಡಾದರು. ಅವನನ್ನು ಅಂತಹ ಸ್ಥಿತಿಯಲ್ಲಿ ಬಿಟ್ಟುಹೋಗಲು ಅನಂತರಾಮಯ್ಯನಿಗೆ ಸುತರಾಂ ಇಷ್ಟವಿಲ್ಲವಾದರೂ, ಶ್ರೀಧರನ ಒತ್ತಾಯಕ್ಕೊಳಪಟ್ಟು ಅವನು ಪ್ರಯಾಣಕ್ಕೆ ಸಿದ್ಧನಾಗಿದ್ದ. ಹೋಗಲೋ ಬೇಡವೋ ಎಂದು ಚಂದ್ರವದನೆಯ ಮನಸ್ಸೂ ದೋಲಾಯಮಾನವಾಗಿತ್ತು. "ನೀವಿಲ್ಲೇ ಇದ್ದು ಶ್ರೀಧರನ ಆರೈಕೆ ನೋಡಿಕೊಳ್ಳಿ.ಸುಮಿತ್ರೆಯೂ ನಿಮ್ಮ ಜತೇಲೇ ಇರಲಿ. ನಾವೆಲ್ಲರೂ ಹೋಗಿ ಬರ್ತೀವೆ"ಅನಂತರಾಮೈಯ್ಯನಂದ.

"ಬೇಡ ಬೇಡ. ಅವರೂ ಹೋಗಲಿ. ಮೈಲಾರಯ್ಯನವರೇ ಔಷಧೋಪಚಾರ ಮಾಡುತ್ತಿದ್ದಾರಲ್ಲಾ ನನಗಿನ್ನೇನಾಗಬೇಕು. ನಮ್ಮ ಕೆಲಸಕ್ಕೆ ಹರಕತ್ತಾಗುವುದು ಬೇಡ" ಎಂದ ಶ್ರೀಧರ. "ನಾವೆಲ್ಲಾ ಇಷ್ಟು ಜನರಿರೋವಾಗ ನಿನ್ನೊಬ್ಬನನ್ನೇ ಹೀಗೆ ಬಿಟ್ಟು ಹೋಗುವುದು ಸರಿಯಲ್ಲಾ ಶ್ರೀಧರಾ. ಸುಮ್ಮನೇ ನನ್ನ ಮಾತು ಕೇಳು. ಚಂದ್ರವದನೆ ಇಲ್ಲೇ ಇರಲಿ. ನಿನಗೆ ಗುಣವಾದನಂತರ ಇಬ್ಬರೂ ಅಗತ್ಯವಾಗಿ ಬರುವಿರಂತೆ."

ಶ್ರೀಧರ ಗತ್ಯಂತರವಿಲ್ಲದೆ ಸ್ನೇಹಿತನ ಮಾತಿಗೊಪ್ಪಬೇಕಾಯಿತು. ಅನಂತರಾಮೈಯ್ಯ ಉಳಿದ ಮಿತ್ರಮಂಡಳಿಯೊಂದಿಗೆ ಹೊರಟುಬಿಟ್ಟ.

ಸ್ವಲ್ಪ ಹೊತ್ತಿನಂತರ ದೇವರ ಪೂಜೆ ಮುಗಿಸಿಕೊಂಡು ಮೈಲಾರಯ್ಯ ಶ್ರೀಧರನಿದ್ದ ಕೊಠಡಿಗೆ ಹೋದರು.

"ಈಗ ಹೇಗಿದೇ ಸ್ವಾಮೀ ದೇಹಸ್ಥಿತಿ."

"ಜ್ವರಾ ಇನ್ನೂ ಬಿಟ್ಟೇಇಲ್ಲಾ ಮೈಲಾರಯ್ಯಾ. ವಿಪರೀತ ಛಳಿಯಾಗುತ್ತೆ. ಎದೇ ನಡುಕಾನಿಂತಿಲ್ಲ. ಮಲೇರಿಯಾಂತ ಕಾಣುತ್ತೆ. ಇಲ್ಲೆಲ್ಲೂ ಕ್ವಿನೈನ್ ಪಿಲ್ಸ್ ಸಿಗೋಲ್ವೇ ?"

"ಇಲ್ಲವಲ್ಲಾ ಸ್ವಾಮೀ. ಎಲ್ಲಾ ನಂಜನಗೂಡಿನಿಂದಲೇ ಬರಬೇಕು. ನಾನೇ ಈವತ್ತು ಊರಿಗೆ ಹೋಗಿ ಒಂದಿಷ್ಟು ಔಷಧೀನೂ, ಕ್ವಿನೈನ್ ಗುಳಿಗೆಗಳನ್ನೂ ತರ್ತೀನಿ. ಬೇಕಾದ್ರೆ ಜತೇಲಿ ಡಾಕ್ಟ್ರನ್ನೂ ಕರಕೊಂಡು ಬರ್ತೀನಿ. ಅವರು ಬಂದು ಇಂಜಕ್ಷನ್ ಕೊಟ್ಟುಹೋದ್ರೆ ನಿಮಗೆ ಬೇಗ ಗುಣವಾದೀತು."

"ಡಾಕ್ಟರನ್ನ ಕರತರಬೇಕಾದ ಅಗತ್ಯವಿಲ್ಲ ಮೈಲಾರಯ್ಯ. ಮೈಸೂರಲ್ಲಿದ್ದಾಗಲೂ ಆಗಾಗ್ಗೆ ನನಗೆ ಛಳೀಜ್ವರಾ ಬರ್ತಾನೇಇತ್ತು. ನನ್ನದು ಸ್ವಲ್ಪ ಸೂಕ್ಷ್ಮ ಪ್ರಕೃತಿ. ಜ್ವರಾ ಬಂದಾಗಲೆಲ್ಲಾ ಕ್ವಿನೈನ್‌ಗುಳಿಗೆಗಳನ್ನ ನುಂಗಿಬಿಡ್ತಿದ್ದೆ ಅಷ್ಟೆ. ಜ್ವರಾ ಇಳಿದುಹೋಗ್ತಿತ್ತು. ಈಸಲ ನನ್ನ ಗ್ರಹಚಾರಕ್ಕೆ ಎರಡು ಮೂರು ದಿನಗಳಿಂದಲೂ ಒಂದೇಸಮನಾಗಿ ಜ್ವರಾ ಸುಡುತ್ತಿದೆ. ಒಳ್ಳೇಸಮಯಕ್ಕೇ ಹಾಸಿಗೆ ಹಿಡಿದೆ. ನಾನು ಮಾಡಬೇಕೆಂದಿದ್ದ ಕೆಲಸಗಳಿಗೆಲ್ಲಾ ಹರಕತ್ತು."

"ನೀವ್ಯೇನೂ ಚಿಂತಿಸಬೇಡೀಸ್ವಾಮೀ. ಏನೋ ಓಡಾಟದಿಂದ ದೇಹಾಲಸ್ಯವಾಗಿದೆ. ಈವತ್ತು ಔಷಧೀ ತಂದುಕೊಡ್ತೀನಿ. ಕುಡೀರಿ. ಜ್ವರಾ ಇಳಿದುಹೋಗುತ್ತೆ."

ಅಷ್ಟುಹೊತ್ತಿಗೆ ಶಾನುಭೋಗರ ನಚ್ಚಿನ ಬಂಟ ಮುನಿಯ ಬಂದು "ಗಾಡೀತಂದೀನ್ನಿ ಬುದ್ಧಿ. ಊರಿಗೆ ಹೊರಡಾಕಿಲ್ವಾ" ಎಂದ. "ನೀವಿನ್ನು ಹೊರಡೀ ಮೈಲಾರಯ್ಯ. ಇವರಿಬ್ಬರೂ ಇದ್ದಾರೆ. ನೋಡಿಕೊಳ್ತಾರೆ" ಎನ್ನುತ್ತಾ ಶ್ರೀಧರ ತನ್ನ ಗೆಳತಿಯರಿಬ್ಬರ ಕಡೆ ನೋಡಿ ಮುಗುಳ್ನಗೆನಕ್ಕ. ತುಸುನಾಚಿಕೆಯಿಂದ ಅವರಿಬ್ಬರೂ ತಲೆ ತಗ್ಗಿಸಿಕೊಂಡರು.

ಮೈಲಾರಯ್ಯ ಭುಜದ ಮೇಲೊಂದು ವಲ್ಲಿಯನ್ನು ಧರಿಸಿಕೊಂಡು ಗಾಡೀಹತ್ತಿ ಕುಳಿತರು. ಮುನಿಯನ ಗಾಡಿ ಕಿಣಿಕಿಣಿಲೆಂದು ಶಬ್ದಮಾಡುತ್ತಾ ಓಡತೊಡಗಿತು.

## ೩೦

ಬೆಳಿಗ್ಗೆ ಒಂಭತ್ತು ಗಂಟೆಯಿದ್ದಿರಬಹುದು. ಮೈಲಾರಯ್ಯ ದೇವರ ಪೂಜೆಯಲ್ಲಿ ನಿರತರಾಗಿದ್ದರು. ಹಿಂದಿನ ರಾತ್ರಿತಾನೇ ಶ್ರೀಧರನಿಗೆ ಜ್ವರ ಬಿಟ್ಟಿತ್ತು. ಅವನು ಹಾಸಿಗೆಹಿಡಿದು ವಾರವಾಗಿತ್ತು. ಈ ಅವಧಿಯಲ್ಲಿ ನಂಜನಗೂಡಿನಿಂದ ಖಾಸಗೀ ಡಾಕ್ಟರೊಬ್ಬರು ಬಂದು ಅವನಿಗೆರಡು ಇಂಜಕ್ಷನ್ನುಗಳನ್ನು ಚುಚ್ಚಿ ಹೋಗಿದ್ದರು. ಮೈಲಾರಯ್ಯ ದಿನವೂ ನಂಜನಗೂಡಿನಿಂದಲೇ ಔಷಧಿ ತರಿಸಿಕೊಡುತ್ತಿದ್ದರು. ಉಳಿದ ಪಥ್ಯೋಪಚಾರಗಳನ್ನು ನಡೆಸಲು ಚಂದ್ರವದನೆ ಮಾಸಲಾಗಿ ಕುಳಿತಿದ್ದಳು. ಕಾಲೋಚಿತವಾದ ಔಷಧೋಪಚಾರಗಳಿಂದ ಶ್ರೀಧರ ಗುಣಮುಖನಾದ. ಖಾಯಿಲೆ ನಿವಾರಣೆಯಾದರೂ ಶ್ರೀಧರನ ಮನಸ್ಸಿಗೆ ಎಳ್ಳಷ್ಟಾದರೂ ಸಮಾಧಾನವಿದ್ದಿರಲಿಲ್ಲ. ತಾನು ಕೈಗೊಂಡ ಕಾರ್ಯದಲ್ಲಿ ಅಡಚಣೆಯುಂಟಾಯಿತಲ್ಲಾ ಎಂಬುದೇ ಅವನ ಕಳವಳಕ್ಕೆ ಕಾರಣವಾಗಿತ್ತು.

ಶ್ರೀಧರನ ಮನಸ್ಸಿನ ದುಗುಡವೇನೆಂಬುದನ್ನು ಚಂದ್ರವದನೆ ಚೆನ್ನಾಗಿ ಬಲ್ಲಳು. ಅವನು ಹಾಗೆಯೇ ಚಿಂತಿಸುತ್ತಾ ಕುಳಿತರೆ ಖಾಯಿಲೆ ಮರುಕಳಿಸಿಕೊಳ್ಳುವುದು ಖಂಡಿತವೆಂದು ಅವಳಿಗನ್ನಿಸಿತು. ಅವನನ್ನು ಹೇಗಾದರೂ ಸಮಾಧಾನಗೊಳಿಸಬೇಕೆಂದು ಬಗೆದು ಶ್ರೀಧರನ ಹಾಸಿಗೆಯ ಪಕ್ಕದಲ್ಲಿ ಬಂದು ಕುಳಿತಳು.

"ಒಂದಿಷ್ಟು ಹಾಲು ತಂದುಕೊಡ್ತೀನಿ. ಕುಡೀತೀರಾ."

"ಬೇಡಾ ಚಂದ್ರಾ. ಈಗತಾನೇ ಔಷಧೀ ತೆಗೆದುಕೊಂಡಿದ್ದೀನಿ."

"ಖಾಯಿಲೆಗೆ ಯಾರ ಅಡ್ಡೀ ಹೇಳಿ. ಖಾಯಿಲೆಬಂತು ವಾಸಿಯಾಯಿತು. ಇನ್ನದರ ಚಿಂತೆಯೇಕೆ ಮಾಡುತ್ತೀರಿ ಬಿಡಿ."

"ಇಲ್ಲಾ ಚಂದ್ರಾ. ನನ್ನ ಉತ್ಸಾಹವನ್ನೆಲ್ಲಾ ತಣ್ಣಗೆಮಾಡಿತು ಈ ಹಾಳು ಖಾಯಿಲೆ. ಈ ಊರಲ್ಲಿ ಅದೆಷ್ಟು ಸೊಗಸಾಗಿ ನಡೀತು ಕಾರ್ಯ

ಕ್ರಮ. ಹೀಗೇ ಮಿಕ್ಕ ಹಳ್ಳಿಗಳಲ್ಲೂ ನಡೆಯೋದನ್ನ ಕಣ್ಣಾರೆ ನೋಡಿ ಸಂತೋಷಿಸಬೇಕೆಂದಿದ್ದೆ. ಆದನೆ ನನಗೆ ಅದೃಷ್ಟವಿಲ್ಲ."

"ನೋಡುವಿರಂತೆ. ಇನ್ನೊಂದು ನಾಲ್ಕೈದುದಿನಾ ಸುಧಾರಿಸಿಕೊಳ್ಳಿ. ಆಮೇಲೆ ನಾವೂ ಹೋಗಿ ನಮ್ಮ ಗೆಳೆಯರನ್ನ ಸೇರಿಕೊಳ್ಳೋಣ."

"ನನಗೋಸ್ಕರ ಬಹಳ ತೊಂದರೆತೆಗೆದುಕೊಳ್ಳುತ್ತಿದ್ದೀಯಾ ಚಂದ್ರಾ. ನಿನ್ನ ವಿಶ್ವಾಸಪೂರ್ವಕವಾದ ಆದರೋಪಚಾರಗಳಿಲ್ಲದೇ ಹೋಗಿದ್ದರೆ ನನಗಿಷ್ಟು ಬೇಗ ಗುಣವಾಗುತ್ತಿತ್ತೋ ಇಲ್ಲವೋ ಹೇಳಲಾರೆ.

"ನಾನ್ಯೇನು ಮಹಾಮಾಡಿದ್ದು ನಿಮಗೆ. ಪುಣ್ಯಾತ್ಮರು ಮೈಲಾರಯ್ಯ. ಅವರ ಹೆಂಡತೀ ಮಕ್ಕಳು ನೂರು ವರ್ಷ ಎಲ್ಲಾದರೂ ಚೆನ್ನಾಗಿರಲಿ."

ಅಷ್ಟುಹೊತ್ತಿಗೆ "ಸಾರ್! ಸಾರ್!" ಎಂದೂ ಯಾರೋ ಬೀದಿಯ ಬಾಗಿಲಲ್ಲಿ ಕೂಗುತ್ತಿರುವುದು ಕೇಳಿಸಿತು. ಶ್ರೀಧರನಿಗಾಶ್ಚರ್ಯವೆನಿಸಿತು. "ಯಾರದು ಹೋಗಿ ನೋಡು ಚಂದ್ರಾ" ಎಂದ ಶ್ರೀಧರ. ಅವಳೆದ್ದು ಹೋಗಿ ನೋಡಿದಳು. ಅಂಚೆಯಾಳೊಬ್ಬ ಕೈಯ್ಯಲ್ಲೊಂದು ಲಕ್ಕೋಟೆಹಿಡಿದು ನಿಂತಿದ್ದ.

ಹೊರಗೆ ಬಂದ ಚಂದ್ರವದನೆಯನ್ನು ನೋಡಿ, "ಶಾನುಭೋಗರಿದ್ದಾರೇ ನ್ರಮ್ಮಾ ಮನೇಲೀ" ಎಂದು ಕೇಳಿದ.

"ಇಲ್ಲ. ಏನಾಗಬೇಕಿತ್ತು?"

"ಅವರ ಅಡ್ರೆಸ್ಸಿಗೊಂದು ಟೆಲಿಗ್ರಾಂಬಂದಿದೇ ತಾಯೀ."

ಟೆಲಿಗ್ರಾಂಎಂದ ಕೂಡಲೇ ಚಂದ್ರವದನೆಯ ಎದೆ ಝಲ್ಲೆಂದಿತು.

"ಟೆಲಿಗ್ರಾಂಬಂದಿದೆಯೇ? ಎಲ್ಲಿಂದ?" ಎಂದು ಒಂದೇ ಉಸಿರಿನಲ್ಲಿ ಕೇಳಿದಳು.

"ಮೈಸೂರಿಂದ ಬಂದಿದೆತಾಯೀ.'' ಅಂಚೆಯಾಳು ಲಕ್ಕೋಟೆಯನ್ನು ಚಂದ್ರವದನೆಯ ಕೈಗಿತ್ತ. ಅವಳು ಮೇಲ್ವಿಳಾಸವನ್ನು ಓದಿಕೊಂಡಳು. ಪುನಃ ಓದಿಕೊಂಡಳು. ತನ್ನ ಹೆಸರಿಗೇ ಇತ್ತು ಟೆಲಿಗ್ರಾಂ. ''Srimati Chandravadana. C/o, Shanbhog. Sirivante Hobli Nanjangud Taiuk'' (ಶ್ರೀಮತಿ ಚಂದ್ರವದನಾ. ಕೇರ್‌ಆಫ್ ಶಾನುಭೋಗ್. ಸಿರಿವಂತೆ ಹೋಬ್ಳಿ. ನಂಜನಗೂಡು ತಾಲ್ಲೂಕು) ಎಂದು ಬರೆದಿತ್ತು.

ಗಾಭರಿಯಿಂದ ಅವಳ ಮುಖ ಕಳೆಗುಂದಿತು. ಲಕ್ಕೋಟೆಯನ್ನೊಡೆದು ಒಳಗಿದ್ದ ಕಾಗದವನ್ನು ಓದಿಕೊಂಡಳು.

"Mother Serious. Start immediately" (ನಿಮ್ಮ ತಾಯಿಗೆ ಸಖತ್ ಖಾಯಿಲೆ. ತಕ್ಷಣ ಹೊರಟು ಬಾ) ಎಂದಿಷ್ಟೇ ಬರೆದಿತ್ತು. ಇದನ್ನೋದಿದ ಕೂಡಲೇ ಅವಳ ಕೈಕಾಲುಗಳು ಕಂಪಿಸತೊಡಗಿದವು. ಮೈ ಬೆವತುಹೋಯಿತು. ದಿಗ್ಭ್ರಾಂತಳಾಗಿ "ಶ್ರೀಧರಾ, ಶ್ರೀಧರಾ" ಎಂದು ಕೂಗಿಕೊಳ್ಳುತ್ತಾ ಒಳಗೆ ಓಡಿಹೋದಳು. ಅಂಚೆಯಾಳು ತನ್ನ ಕೆಲಸವಾಯಿತೆಂದುಕೊಂಡು ಸೈಕಲ್ ಹತ್ತಿ ಹೊರಟುಹೋದ.

ಶ್ರೀಧರನಿಗರ್ಥವಾಗಲಿಲ್ಲ ಅವಳೇಕೆ ಹಾಗೆ ಕೂಗಿಕೊಂಡು ಓಡಿ ಬಂದಳೆಂದು. ಅವನೂ ಗಾಭರಿಯಿಂದ, "ಏನಾಯ್ತು ಚಂದ್ರಾ. ಅದ್ಯೇಕೆ ಹಾಗೆ ಕೂಗಿಕೊಂಡೆ?" ಎಂದು ಕೇಳಿದ.

"ಮೈಸೂರಿಂದ ನಮ್ಮ ಮಾವ ಟೆಲಿಗ್ರಾಂಕೊಟ್ಟಿದ್ದಾರೆ. ಅಮ್ಮನಿಗೆ ಬಹಳ ಖಾಯಿಲೆಯಂತೆ. ಸೀರಿಯಸ್ಸಾಗಿದೆ ಕೂಡ್ಲೇ ಹೊರಟು ಬಾ ಎಂದು ತಿಳಿಸಿದ್ದಾರೆ."

"ಸರಿ ಹಾಗಾದರೆ. ಈವತ್ತು ಮಧ್ಯಾಹ್ನದ ರೈಲಿಗೇ ಹೊರಟುಬಿಡು. ಶಾನುಭೋಗರಿಗೆ ಹೇಳಿ ಗಾಡೀ ಏರ್ಪಾಡು ಮಾಡ್ತೀನಿ."

"ನಿಮಗಿನ್ನೂ ಪೂರ್ತಿಯಾಗಿ ಗುಣವಾಗಿಲ್ಲ. ನಿಮ್ಮನ್ನು ಈಗಿನ ಸ್ಥಿತೀಲಿ ಬಿಟ್ಟುಹೋಗಲು ನನಗೆ ಇಷ್ಟವಿಲ್ಲ. ಹೋಗದಿದ್ದರೆ ವಿಧಿಯಿಲ್ಲ. ಈಗ ಹೋದರೆ ಪುನಃ ಬರೋಕ್ಕಾಗತ್ತೋ ಇಲ್ಲವೋ."

"ಮೊದಲು ಹೋಗಿ ನಿಮ್ಮಮ್ಮನ ಆರೈಕೆ ನೋಡಿಕೋ ಚಂದ್ರಾ. ನಿಮ್ಮ ತಾಯಿಗೆ ಗುಣಮುಖವಾದನಂತರ ಬೇಕಾದರೆ ಬರುವಿಯಂತೆ.

"ಈಗೇನೋ ಹೋಗ್ತೇನೆ. ಆದರೆ ಮನಸ್ಸೆಲ್ಲಾ ನಿಮ್ಮ ಮೇಲೇ ಇರುತ್ತೆ."

"ನೀನ್ಯೇನೂ ಯೋಚಿಸಬೇಡ ಚಂದ್ರಾ. ಮೈಲಾರಯ್ಯ ಎಲ್ಲವನ್ನೂ ನೋಡಿಕೊಳ್ತಾರೆ."

ಅಷ್ಟುಹೊತ್ತಿಗೆ ಊಟಕ್ಕೆ ಕರೆಬಂತು. ಶ್ರೀಧರ ತಿಳೀಸಾರಿನಲ್ಲಿ ಒಂದುತುತ್ತು ಊಟ ಮಾಡಿದ. ಅದೇತಾನೇ ಜ್ವರಬಿಟ್ಟಿದ್ದುದರಿಂದ ಅವನಿಗೆ ಊಟ ಅಷ್ಟಾಗಿ ಸೇರಲಿಲ್ಲ.

ಸ್ವಲ್ಪ ಹೊತ್ತಿನಂತರ ಮನೆಯ ಮುಂದೆ ಮುನಿಯ ಗಾಡೀತಂದು ನಿಲ್ಲಿಸಿದ. ಚಂದ್ರವದನೆಯ ಸಾಮಾನುಗಳನ್ನು ಗಾಡಿಯಲ್ಲಿ ತೆಗೆದುಕೊಂಡು ಹೋಗಿಟ್ಟ. ಗಾಡಿ ಹತ್ತುವಾಗ ಚಂದ್ರವದನೆ ಶ್ರೀಧರನನ್ನು ನೋಡಿ,

"ನಾನಿನ್ನು ಬರ್ತೀನಿ. ಎದ್ದು ಓಡಾಡಬೇಡಿ. ನಿನ್ನೇತಾನೇ ಜ್ವರ ಬಿಟ್ಟಿದೆ. ಹೆಚ್ಚು ಅಲಸಟಮಾಡಿಕೊಳ್ಳಬೇಡಿ" ಎಂದಳು.

"ಆಗಲೀ ಚಂದ್ರಾ. ನೀನು ಹೊರಡು."

"ನಾನೂ ಬೇಕಾದರೆ ಬರಲ್ವೇ ತಾಯೀ ಜತೇಲಿ" ಎಂದರು ಮೈಲಾರಯ್ಯ ನಗುತ್ತಾ.

"ಬೇಡ. ನಿಮಗ್ಯಾಕೆ ತೊಂದರೆ ಪಾಪ."

ಚಂದ್ರವದನೆ ಮನಸ್ಸಿಲ್ಲದ ಮನಸ್ಸಿನಲ್ಲಿ ಕಡೆಗೂ ಗಾಡೀ ಹತ್ತಿ ಕುಳಿತಳು. ಹೊರಡುವಾಗ ಅವಳ ಹೃದಯ ಅತಿ ಭಾರವಾಗಿತ್ತು. ಮನಸ್ಸಿನಲ್ಲಿ ಹೇಳಲಾರದ ದುಗುಡ ತುಂಬಿತ್ತು. ಶ್ರೀಧರನನ್ನು ಬಿಟ್ಟುಹೋಗಲು ಮನಸ್ಸಿಲ್ಲ; ಹಾಗೆಂದು ಹೆತ್ತತಾಯಿಗೆ ಸಖತ್ ಖಾಯಿಲೆಯೆಂದು ತಂತಿ ಬಂದಿರುವಾಗ ಹೋಗದಿರಲು ಶಕ್ಯವಿಲ್ಲ. ಹೀಗೆ ಇಬ್ಬಗೆಯಾಗಿ ಹೊಯ್ದಾಡುತ್ತಿತ್ತು ಅವಳ ಮನಸ್ಸು. ಮುನಿಯನ ಗಾಡಿ ವೇಗದಿಂದ ಚಲಿಸತೊಡಗಿತು. ಚಂದ್ರವದನೆ ದೀರ್ಘ ನಿಶ್ವಾಸವೊಂದನ್ನು ಹೊರಚೆಲ್ಲಿದಳು.

* * *

ಸಿರಿಸಂತೆಯಿಂದ ನಂಜನಗೂಡಿಗೆ ಆರುಮೈಲಿ ದೂರ. ಕಾಲುನಡಿಗೆಯ ಪ್ರಯಾಣವಾದರೆ ಒಂದು-ಒಂದೂವರೆ ಗಂಟೆ ಹಿಡಿಸಬಹುದು. ಮುನಿಯ ಮುದುಕನಾದರೂ ಹರೆಯದ ಹುಡುಗನಂತೆ ಗಾಡಿಯನ್ನು ಲೀಲಾಜಾಲವಾಗಿ ಓಡಿಸುತ್ತಿದ್ದ. ಮುನಿಯ ಮೈಲಾರಯ್ಯನವರ ಜೀತದಲ್ಲಿ ಸುಮಾರು ಅರ್ಧ ಶತಮಾನದಷ್ಟು ಆಯುರ್ಭಾಗವನ್ನೇ ಸವೆಸಿಬಿಟ್ಟಿದ್ದ. ಬಾಲ್ಯದಲ್ಲಿಯೇ ತಂದೆತಾಯಿಗಳನ್ನು ಕಳೆದುಕೊಂಡು ಅನಾಥನಾದ ಮುನಿಯನ ಮೇಲೆ ಮೈಲಾರಯ್ಯನವರ ಕೃಪಾದೃಷ್ಟಿ ಬಿತ್ತು. ಹುಡುಗನ ರಕ್ಷಣೆಯ ಭಾರವನ್ನು ಅವರೇ ವಹಿಸಿಕೊಂಡರು. ಅಂತೆಯೇ ಮುನಿಯ ಮೈಲಾರಯ್ಯನವರ ನಚ್ಚಿನ ಬಂಟನಾಗಿದ್ದ. ಅವರ ಮನೆಯಲ್ಲಿ ಮುನಿಯ ಮಾಡದಿರುವ ಕೆಲಸವಿರಲಿಲ್ಲ. ಅವನಿಗೆ ತಿಳಿಯದ ವ್ಯವಹಾರವಿರಲಿಲ್ಲ.

ಮೈಲಾರಯ್ಯನವರ ಜಮೀನಿನ ಸಾಗುವಳಿಯ ಉಸ್ತುವಾರಿ ನೋಡಿಕೊಳ್ಳುವುದು; ಪ್ರತಿತಿಂಗಳೂ ಮನೆಗೆ ಬೇಕಾದ ಸಾಮಾನುಗಳನ್ನು ತಂದು ಹಾಕುವುದು; ಮನೆಯ ಯಜಮಾನಿತಿ ವಿಶಾಲಕ್ಷಮ್ಮನವರ ಕೆಲಸ ಕಾರ್ಯಗಳಲ್ಲಿ ನೆರವಾಗುವುದು; ಬೆಳಿಗ್ಗೆ ಮತ್ತು ಸಂಜೆ, ಎರಡುಹೊತ್ತೂ ಹಾಲು ಕರೆದುಕೊಡುವುದು; ತೋಟಕ್ಕೆ ನೀರು ಹಾಕುವುದು; ಮಕ್ಕಳನ್ನು ಆಡಿಸುವುದು; ಇವೆಲ್ಲವೂ ಮುನಿಯನ ದಿನಚರಿಯ ಕೆಲಸಗಳಾಗಿದ್ದವು,

ಮೈಲಾರಯ್ಯನವರ ಮನೆ ಒಂದು ಧರ್ಮಸತ್ರವಾಗಿ ಹೋಗಿತ್ತು. ಅವರ ಮನೆಗೆ ಬಂದು ಹೋಗುವ ಅತಿಥಿಗಳಿಗೆ ಲೆಕ್ಕವಿದ್ದಿರಲಿಲ್ಲ. ಅವರ ಔದಾರ್ಯ-ಸೌಜನ್ಯಗಳು ಸುತ್ತುಮುತ್ತಿನ ಹಳ್ಳಿಗಳಲ್ಲೆಲ್ಲಾ ಮನೆಮಾತಾಗಿ ಹೋಗಿತ್ತು. ಅವರ ಕೈ ಹಿಡಿದ ಪತ್ನಿಯೂ ಪತಿಯಂತೆಯೇ ಧಾರಾಳಿಯೂ, ಅತಿಥಿ ಅಭ್ಯಾಗತರ ಸೇವೆ ಮಾಡುವುದರಲ್ಲಿ ಉತ್ಕಂಠಿತಳೂ ಆಗಿದ್ದುದರಿಂದ ಆ ಮನೆ ನಂದಗೋಕುಲದಂತೆ ಕಂಗೊಳಿಸುತ್ತಿತ್ತು.

ಮನೆಯಲ್ಲಿ ಎಷ್ಟೇ ಕೆಲಸ ಕಾರ್ಯಗಳಿರಲೀ, ತುಟಿ ಯೆರಡುಮಾಡದೆ ಗಾಣದ ಎತ್ತಿನಂತೆ ದುಡಿಯುತ್ತಿದ್ದ ಮುನಿಯ. ಒಂದು ದಿನವಾದರೂ ಕೆಲಸ ಹೆಚ್ಚೆಂದು ಗೊಣಗಾಡಿದವನಲ್ಲ; ಮುಖ ಸಿಂಡರಿಸಿಕೊಂಡವನಲ್ಲ. ಮೈಲಾರಯ್ಯ ಕಂದಾಯ ವಸೂಲಿಗಾಗಿ ಹಳ್ಳಿಗಳ ಕಡೆ ಸಂಚಾರ ಹೊರಟರೆಂದರೆ ತಿಂಗಳುಗಟ್ಟಲೆ ಮನೆಯಕಡೆ ತಲೆಹಾಕುತ್ತಿರಲಿಲ್ಲ. ಅವರ ಗೈರು ಹಾಜರಿಯಲ್ಲಿ ಮನೆಯ ಯಾಜಮಾನ್ಯ ತಾತ್ಕಾಲಿಕವಾಗಿ ಮುನಿಯನ ಕೈ ಸೇರುತ್ತಿತ್ತು. 'ಮುನಿಯಾ ಇರ್ತಾನೆ. ಏನಿದ್ದರೂ ಅವನಿಗೆ ಹೇಳಿ ತರಿಸಿಕೊಳ್ಳಿ, ಎಲ್ಲಾ ನಿಭಾಯಿಸಿಕೊಂಡು ಹೋಗ್ತಾನೆ' ಎಂದು ಮೈಲಾರಯ್ಯ ತಮ್ಮ ತಾಯಿಗೂ, ಹೆಂಡತಿಗೂ ಆಶ್ವಾಸನವನ್ನಿತ್ತು, ತಾವು ನಿಶ್ಚಿಂತರಾಗಿ ಸಂಚಾರ ಹೊರಟುಬಿಡುತ್ತಿದ್ದರು.

ಪ್ರಯಾಣದ ಅರ್ಧದಾರಿ ಸವೆದಿತ್ತು. ಎತ್ತುಗಳು ಗಾಡಿಯನ್ನು ಎಳೆಯಲಾರದೆ ಎಳೆದುಕೊಂಡು ಹೋಗುತ್ತಿದ್ದವು. ಗಾಡಿ ಕಾಲುದಾರಿಯಲ್ಲಿ ಕರ್ಕಶ ಶಬ್ದಮಾಡುತ್ತಾ ನಿಧಾನವಾಗಿ ಸಾಗುತ್ತಿತ್ತು. ಮುನಿಯ, 'ಹೇ....ಹೇ....ಟುರ್ರಿ....ಟುರ್ರಿ....' ಎಂದು ಕೂಗುತ್ತಾ, ಚಾವಟಿಯಿಂದ ಎತ್ತುಗಳ ಬೆನ್ನಮೇಲೆ ಬರೆಯೆಳೆದ. ಆದರೆ ದಣಿದಿದ್ದ ಎತ್ತುಗಳು ಮುನಿಯನ

ಚಾವಟಿಯೇಟಿಗೆ ಬೆದರಲಿಲ್ಲ; ಸಗ್ಗಲಿಲ್ಲ. ಮುಷ್ಕರ ಹಿಡಿದು ತಟಸ್ಥವಾಗಿ ನಿಂತುಬಿಟ್ಟವು.

"ಏಕೆ ಹೊಡೀತೀಯೋ ಮುನಿಯ-ಪಾಪ-ಮೂಕಪ್ರಾಣಿಗಳು-ಎಷ್ಟು ದಣಿದಿವೆಯೋ ಏನೋ-ಸ್ವಲ್ಪ ಸುಧಾರಿಸಿಕೊಳ್ಳಲಿ ಬಿಡು" ಎಂದಳು ಚಂದ್ರವದನೆ.

"ದಣಿಯೋಕ್ಕೆ ಅವಕ್ಕೇನುಬಂತು ತಾಯೀ ಧಾಡಿ! ಹೊತ್ತಾರೆ ಹೆಗಲ ಮೇಲೆ ನೊಗಾ ಏರಿಸಬಿಟ್ರೆ-ಪುನಾ ನೊಗಾಬಿಚ್ಚೋದು ಚಂಜೆಗೇನೇ. ಇಡೀ ದಿನ ಗಾಣದೆತ್ತಿನಂತೆ ದುಡೀತವೆ. ಈವತ್ತೇನೋ ಬಂದೈತೆ ಅವಕ್ಕೆ ರೋಗ."

"ಹಾಗಲ್ವೋ ಮುನಿಯ. ಪಾಪ ಅಷ್ಟೊತ್ತಿಗೇ ಗಾಡೀ ಕಟ್ಟಬಿಟ್ಟೆ. ಅಲ್ಲಿ ಕಾಣ್ತೈತೆರೋ ಕೆರೆಗಾದ್ರೂ ಕರಕೊಂಡು ಹೋಗಿ ನೀರುಕುಡ್ಸು. ಬಾಯಾರಿಕೆಯೋ ಏನೋ-ಮೂಕಜೀವ ಪಾಪ."

"ಆಗಲ್ರವ್ವ. ಹಂಗೇಮಾಡ್ತೀನಿ."

ಮುನಿಯ ತಾನು ಸೇದುತ್ತಿದ್ದ ಬೀಡಿಯನ್ನು ಬಿಸಾಡಿ ಎತ್ತುಗಳನ್ನು ಬಿಚ್ಚಿ ಕೆರೆಗೆ ಕರೆದುಕೊಂಡು ಹೋದ. ಹೋಗುವಾಗ ಚಂದ್ರವದನೆಯ ಕಡೆ ತಿರುಗಿ, "ನೀವೊಬ್ರೇ ಇರ್ತೀರಾ ತಾಯೀ ನಾಬರೋಗಂಟಾ. ಬೇಕಾದ್ರೆ ನೀವೂ ಕೆರೇತಾಕ್ಕೇ ಬನ್ನೀ ತಾಯೀ" ಎಂದ. ಅವನ ಮಾತು ಕೇಳಿ ಚಂದ್ರವದನೆ ಫಕ್ಕನೆ ನಕ್ಕುಬಿಟ್ಟಳು.

"ನನಗೇನೂ ದಿಗಿಲಿಲ್ವೋ ಮುನಿಯ. ಪರವಾಗಿಲ್ಲ ಇಲ್ಲೇ ಇರ್ತೀನಿ. ನೀನು ಹೋಗಿ ಬಾ" ಎಂದಳು. ಮುನಿಯ ಹೊರಟ.

ಚಂದ್ರವದನೆ ಸುತ್ತಣ ಪ್ರಕೃತಿಯ ಕಡೆಗೊಮ್ಮೆ ದೃಷ್ಟಿ ಹೊರಳಿಸಿದಳು. ಅಲ್ಲಿದ್ದ ವಾತಾವರಣ ಅತ್ಯಂತ ಪ್ರಶಾಂತವಾಗಿತ್ತು. ಕಾಲುದಾರಿಯ ಎರಡುಕಡೆಗಳಲ್ಲೂ ಹಚ್ಚನೆಯ ಬಯಲುಗಳು ಹರಡಿದ್ದುವು. ಅವುಗಳಲ್ಲಿ ಬತ್ತದ ಗದ್ದೆಗಳೇ ವಿಶೇಷ. ಅಲ್ಲಲ್ಲಿ ಕಬ್ಬಿನ ಗದ್ದೆಗಳೂ ಕಾಣಿಸುತ್ತಿದ್ದುವು. ಗದ್ದೆಗಳ ನಡುವೆ ಹಲವಾರು ಜೋಪಡಿಗಳಿದ್ದುವು. ಜೋಪಡಿಗಳ ಮುಂದೆ ಒಣಹುಲ್ಲಿನ ಬಣವೆಗಳು ಓರಣವಾಗಿ ಜೋಡಿಸಿಡಲ್ಪಟ್ಟಿದ್ದುವು ಅತಿ ದೂರದಿಂದ ಹಳ್ಳಿಯ ಹೈದರ, ತುರುಗಾಹಿಗಳ, ಸಿಳ್ಳಿನ ದನಿ ಕೇಳಿಬರುತ್ತಿತ್ತು. ನೀಲಾಕಾಶದಲ್ಲಿ ಹಿಂಜಿದ ಅರಳೆಯ ರಾಶಿಯಂತೆ ಬಿಳಿ ಮೋಡಗಳು ತೇಲಾ

ಡುತ್ತಿದ್ದವು. ನಡುಹಗಲಿನ ಸೂರ್ಯ ಬಿಳಿ ಮುಗಿಲುಗಳ ಜತೆಯಲ್ಲಿ ಕತ್ತಲುಬೆಳಕುಗಳ ಕಣ್ಣುಮುಚ್ಚಾಲೆಯಾಟವಾಡುತ್ತಿದ್ದ.

ಇದೆಲ್ಲವನ್ನೂ ನೋಡಿ ಚಂದ್ರವದನೆ ಹರ್ಷಪುಳಕಿತಳಾದಳು. ಶ್ರೀಧರ ನನ್ನಗಲಿ ಬಂದ ಚಿಂತೆ, ಬೇಸರ, ತುಸು ಕಡಿಮೆಯಾಯಿತು. ತನ್ನ ಸುತ್ತ ಸೂರೆಹೋಗಿದ್ದ ಪ್ರಕೃತಿ ಸೌಂದರ್ಯವನ್ನು ಕಂಡು ಆನಂದಿಸತೊಡಗಿದಳು.

"ಇದೇಕ್ರವ್ವಾ ಹೀಗೆ ಬೆಪ್ಪಾಗಿ ನಿಂತುಬಿಟ್ರೀ! ಗಾಡಿಕಟ್ಟೀನಿ. ಕೂತ್ಕೊಳ್ರವ್ವಾ" ಎನ್ನುತ್ತಾ ಮುನಿಯ ಚಂದ್ರವದನೆಯ ಆನಂದ ಸಮಾಧಿಗೆ ಭಂಗವನ್ನುಂಟುಮಾಡಿದ.

ಕನಸಿನಿಂದೆಚ್ಚೆತ್ತವಳಂತೆ ಚಂದ್ರವದನೆ ಬೆಚ್ಚಿಬಿದ್ದಳು. "ಏನೂ ಇಲ್ಲಾ ಮುನಿಯಾ ಸುಮ್ನೇ ನಿಂತಿದ್ದೆ ಅಷ್ಟೆ. ಗಾಡೀಕಟ್ಟು ಬೇಗ. ರೈಲಿಗೆ ಹೊತ್ತಾದೀತು" ಎಂದಳು. ಮುನಿಯ ನಿಮಿಷದಲ್ಲಿ ಗಾಡಿಕಟ್ಟಿದ.

"ಕೂತ್ಕೊಳ್ಳೀ ತಾಯೀ. ಒಂದ್ನಿಮಿಷದಲ್ಲಿ ಕರಕೊಂಡು ಹೋಗ್ಬಿಡ್ತೀನಿ ಊರ್ಗೆ" ಎನ್ನುತ್ತಾ ಮುನಿಯ ಗಾಡಿಹತ್ತಿದ. ಚಂದ್ರವದನೆಯೂ ಹತ್ತಿದಳು. ಮುನಿಯ ಬಾಯಿ ಚಪ್ಪರಿಸುತ್ತಾ ಚಾವಟಿಯ ಸದ್ದುಮಾಡಿದ ಕೂಡಲೇ ಎತ್ತುಗಳು ನಾಗಾಲೋಟದಲ್ಲಿ ಓಡತೊಡಗಿದವು. ಮುನಿಯನಂದ ಹಾಗೆ ಐದು ನಿಮಿಷದಲ್ಲಿ ಗಾಡಿ ಸ್ಟೇಷನ್ನಿಗೆ ಬಂದುಬಿಟ್ಟಿತು.

ಪ್ಲಾಟ್‌ಫಾರಮ್ಮಿಗೆ ರೈಲು ಬಂದುಬಿಟ್ಟಿತ್ತು. "ಟಿಕೀಟು ತರ್ತೀನ್ರವ್ವಾ"ಎನ್ನುತ್ತಾ ಮುನಿಯ ಟೀಕೀಟಾಫೀಸಿಗೆ ಹೋದ. ನಿಮಿಷದಲ್ಲಿ ಟಿಕೀಟು ತಂದ. ಚಂದ್ರವದನೆ ಗಾಡಿಹತ್ತಿ ಕುಳಿತಳು. ಮುನಿಯ ಅವಳ ಹೋಲ್ಡಾಲನ್ನೂ ಸೂಟುಕೇಸನ್ನೂ ರೈಲಲ್ಲಿ ತಂದಿಟ್ಟ. ಗಾರ್ಡು ಸೀಟಿ ಯೂದಿ ಹಸುರುಬಾವುಟ ಬೀಸಿದ. ಎಂಜಿನ್ನು ಕಿರೋ ಎಂದು ಕಿವಿ ಬಿರಿಯು ವಂತೆ ಕಿರಚಿಕೊಂಡಿತು. ನಿಲ್ದಾಣದಲ್ಲಿ ನಿಂತಿದ್ದ ಮುನಿಯನನ್ನು ನೋಡಿ ಚಂದ್ರವದನೆ "ನಾನಿನ್ನು ಬರ್ತೀನೆ ಮುನಿಯ. ಶ್ರೀಧರಪ್ಪನ್ನ ಹುಷಾರಾಗಿ ನೋಡ್ಕೊಳ್ಳಿ. ಅವರಿಗೆ ಬೇಕಾದ ಔಷಧೀ ವಗೈರೆ ತಪ್ಪದೇ ತಂದು ಕೊಡು. ನಾನೂ ಬೇಗಲೇ ಬಂದುಬಿಡ್ತೀನಿ" ಎಂದಳು.

"ಆಗಲ್ರವ್ವ. ಚೆನ್ನಾಗಿ ನೋಡ್ಕೊಳ್ತೀವಿ. ನೀವು ಹೋಗಿಬನ್ರವ್ವ." ಎಂದ ಮುನಿಯ.

ರೈಲು ಬುಸುಗುಟ್ಟುತ್ತಾ ನಿಲ್ದಾಣದಿಂದ ನಿಧಾನವಾಗಿ ಚಲಿಸತೊಡಗಿತು. ಚಂದ್ರವದನೆ ಕಿಟಕಿಯಲ್ಲೇ ತಲೆಹಾಕಿಕೊಂಡು ಮುನಿಯನನ್ನು ನೋಡುತ್ತಿದ್ದಳು. ಅವನ ಮುಖದಲ್ಲಿ ಯಾವುದೋ ನಿರ್ವಿಣ್ಣತೆ—ಅವರ್ಣನೀಯವಾದ ಮೂಕಯಾತನೆ ವ್ಯಕ್ತಪಟ್ಟಿತ್ತು.

"ಇದ್ದರೆ ಹೀಗಿರಬೇಕು ಆಳು. ಮನೆಯ ಯಜಮಾನನಿಗೆ ತಕ್ಕ ಭಂಟ. ಮನೆಗೆ ಬಂದು ಹೋಗುವವರ ಮೇಲೆ ಪ್ರಾಣಬಿಡ್ತಾನೆ ಪಾಪ." ಎಂದುಕೊಳ್ಳುತ್ತಾ ಚಂದ್ರವದನೆ ತನ್ನ ಜಾಗದಲ್ಲಿ ಹೋಗಿ ಕೂತಳು. ರೈಲು ಕಣ್ಮರೆಯಾಗುವವರೆಗೂ ನಿಲ್ದಾಣದಲ್ಲೇ ನಿಂತಿದ್ದು ಅತಿ ಭಾರವಾದ ಎದೆಯಿಂದ ನಿಧಾನವಾಗಿ ಕಾಲು ಹಾಕತೊಡಗಿದ ಮುನಿಯ.

## ೩೧

ರೈಲಲ್ಲಿ ಕುಳಿತ ಚಂದ್ರವದನೆಯ ಮನಸ್ಸು ಅಲ್ಲಕಲ್ಲೋಲ್ಲವಾಗಿ ಹೋಗಿತ್ತು. ಶ್ರೀಧರ ಹಾಸಿಗೆ ಹಿಡಿದು ಮಲಗಿರುವಾಗ ಅವನ ಔಷಧೋಪಚಾರಗಳನ್ನೂ, ಶುಶ್ರೂಷೆಯನ್ನೂ ತಾನೇ ಕೈಯಾರೆ ನಡೆಸಬೇಕೆಂದು ಅವಳ ಹೃದಯ ಮಿಡಿಯುತ್ತಿತ್ತು. ರೈಲಲ್ಲಿ ಕುಳಿತಿದ್ದರೂ ಅವಳ ಮನಸ್ಸು ಶ್ರೀಧರನ ಹಾಸಿಗೆಯ ಸುತ್ತ ಸುಳಿದಾಡುತ್ತಿತ್ತು. ಮೈಸೂರನ್ನು ಸಮೀಪಿಸುತ್ತಿದ್ದರೂ ಅವಳ ಧ್ಯಾನವೆಲ್ಲಾ ಸಿರಿವಂತೆಯ ಮೇಲಿತ್ತು.

'ಇಷ್ಟುಹೊತ್ತಿಗೆ - ಶ್ರೀಧರ ಏನುಮಾಡುತ್ತಿರಬಹುದು. ಔಷಧಿ ಕುಡಿಯುತ್ತಿರಬಹುದೆ? ಇಲ್ಲಾ ಮೈಲಾರಯ್ಯನವರ ಹತ್ತಿರ ಮಾತುಕತೆಯಾಡುತ್ತಿರಬಹುದೆ? ಅಡಿಗೇಮನೆಯಲ್ಲಿ ವಿಶಾಲಕ್ಷಮ್ಮ ತಿಂಡೀಮಾಡುತ್ತಿರಬಹುದೆ? ಅನಂತರಾಮಯ್ಯ ಬರದವಳ್ಳಿಯಿಂದ ಈವತ್ತು ಬರುತ್ತೇನೆಂದು ಹೇಳಿದ್ದ. ಹೊಸಹಳ್ಳಿಯಲ್ಲಿ ನಡೆದ ವಯಸ್ಕರ ಶಿಕ್ಷಣಶಾಲೆಯ ಪ್ರಾರಂಭೋತ್ಸವ ಇತ್ಯಾದಿ ವಿಷಯಗಳಲ್ಲಿ ಅವನು ಶ್ರೀಧರನಿಗೆ ವರದಿಯೊಪ್ಪಿಸುತ್ತಿರಬಹುದೆ?' ಎಂದೆಲ್ಲ ಯೋಚಿಸತೊಡಗಿದಳು. ಸಿರಿವಂತೆಯಲ್ಲಿ ನಡೆದಿರಬಹುದಾದ ವಿದ್ಯಮಾನಗಳನ್ನೆಲ್ಲಾ ಊಹಿಸತೊಡಗಿದಳು.

ಹತ್ತಾನೆ ರೈಲು ಚಾಮರಾಜಪುರಂ ನಿಲ್ದಾಣದಲ್ಲಿ ನಿಂತಾಗ ಚಂದ್ರ ವದನೆ ಕಾಣುತ್ತಿದ್ದ ಕನಸೊಡೆಯಿತು. ಅವಳು ಬೆಚ್ಚಿಬಿದ್ದು, 'ಇಲ್ಲೇ ಅಲ್ವೇ ನಾನಿಳೀ ಬೇಕಾದ್ದು. ಇಲ್ಲಿಳಿದರೆ ನಮ್ಮನೆಗೆ ಹತ್ರ' ಎಂದುಕೊಂಡು ತನ್ನ ಹೋಲ್ಡಾಲನ್ನೂ ಸೂಟುಕೇಸನ್ನೂ ಕೆಳಗಿಳಿಸಿಕೊಂಡಳು. ಯಾರಾದರೂ ಸ್ಟೇಷನಿಗೆ ಬಂದಿರುವರೇನೋ ಎಂದು ಕಿಟಕಿಯಲ್ಲಿ ತಲೆಹಾಕಿ ನೋಡಿದಳು. ಯಾರೂ ಬಂದಿದ್ದ ಹಾಗೆ ಕಾಣಿಸಲಿಲ್ಲ. ಚಂದ್ರವದನೆಯ ಮುಖ ಸಪ್ಪ ಗಾಯಿತು. ಕೂಲಿಯೊಳೊಬ್ಬನನ್ನು ಕರೆದು ತನ್ನ ಸಾಮಾನುಗಳನ್ನು ಹೇರಿಸಿಕೊಂಡು ನಡೆದಳು. ಟಾಂಗಾ ಗಾಡಿಯೊಂದನ್ನು ಗೊತ್ತುಮಾಡಿ ಕುಳಿತಳು. "ಎಲ್ಲಿಗೆ ಹೊಡೀಲಿತಾಯೀ ಗಾಡೀ" ಎಂದು ಕೇಳಿದ ಟಾಂಗಾ ವಾಲಾ. "ಸರಸ್ವತೀಪುರಕ್ಕೆ" ಎಂದುತ್ತರ ಬಂತು.

'ಮನೆಯಲ್ಲಿ ಅಮ್ಮನ ಸ್ಥಿತಿ ಏನಾಗಿದೆಯೋ ಏನೋ. ಅದಕ್ಕೇ ಯಾರೂ ಬರ್ಲಿಲ್ಲ ಸ್ಟೇಷನ್ನಿಗೆ. ನಾನು ಮನೆಗೆ ಹೋಗುವಷ್ಟರಲ್ಲಿ ಏನೇನು ಅನಾಹುತಗಳಾಗಿ ಹೋಗಿರುತ್ತವೆಯೋ; ನನಗಿನ್ನೂ ಏನೇನು ಕಷ್ಟಗಳು ಕಾದಿವೆಯೋ' ಎಂಬುದಾಗಿ ಚಂದ್ರವದನೆಯ ಮನಸ್ಸು ತುಡಿದುಕೊಳ್ಳು ತ್ತಿತ್ತು. ಮರುಕ್ಷಣದಲ್ಲೇ 'ಛೆ! ಛೆ! ನಾನೆಂತಹ ಅಶುಭವನ್ನ ನೆನೆಯುತ್ತಿ ದ್ದೇನೆ. ಎತ್ಕೊಳ್ತಾ ಹಾಳು ಕೆಟ್ಟ ಯೋಚ್ನೆಯೇ ಬರುತ್ತೆ ಮನಸ್ಸಿಗೆ' ಎಂದುಕೊಳ್ಳುತ್ತಾ ತನ್ನ ಮನಸ್ಸಿನಲ್ಲುದ್ಭವಿಸಿದ ಭೀತಿಯನ್ನು ತೊಡೆದು ಹಾಕಲು ಯತ್ನಿಸಿದಳು. ಹತ್ತು ನಿಮಿಷದಲ್ಲೆಲ್ಲಾ ಗಾಡಿ "ಬೃಂದಾವನ"ದ ಮುಂದೆ ಬಂದು ನಿಂತಿತು. ಮನೆಯ ಮುಂದೆ ಗಾಡಿಯೊಂದು ನಿಂತಿರು ವುದನ್ನು ನೋಡಿ ಬೋರ ಬೀದಿಯ ಬಾಗಿಲು ತೆಗೆದು ಹೊರಗೆ ಬಂದ. ಚಿಕ್ಕಮ್ಮಾವ್ರು ಗಾಡಿಯಿಂದಿಳಿಯುತ್ತಿರುವುದನ್ನು ನೋಡಿ ಅವನು ಕಕ್ಕಾಬಿಕ್ಕಿಯಾಗಿ ಹೋದ. ಗಾಡಿಯ ಹತ್ತಿರ ಓಡಿಹೋಗಿ, "ಇದೇಕ್ರವ್ವಾ, ಬರ್ತೀನೀಂತ ಒಂದು ಕಾಜಗಾ ಬರೀಬೇಡ್ವಾ? ಹಾಂಗೇ ಹೊಂಟು ಬಂದಿವ್ರಿ. ನಾನು ಟೇಷನ್ನಿಗೆ ಬರ್ತಿದ್ದೆ" ಎಂದ. "ಮೊದಲು ಹಾಸಿಗೇ ಟ್ರಂಕು ತೆಗೆದು ಕೊಂಡು ಹೋಗಿ ಒಳಗಿಡು. ಆ ಮೇಲೆ ಅದೆಲ್ಲಾ ಹೇಳ್ತೀನಿ" ಎನ್ನುತ್ತಾ ಚಂದ್ರವದನೆ ಬಿರಬಿರನೆ ಮನೆಯೊಳಕ್ಕೆ ನಡೆದಳು. "ಈವತ್ತೇಕೋ ಚಿಕ್ಕಮ್ಮಾವ್ರು ನನ್ನ ಮೇಲೆ ಮುನಿಸಿಕೊಂಡವ್ರೆ. ಅವರು ಯಾವತ್ತೂ

ನನ್ನನ್ನ ಈ ರೀತಿ ಗದರಿಸಿಕೊಂಡಿದ್ದಿಲ್ಲ" ಎಂದುಕೊಂಡು ಜೋರ ಹಾಸಿಗೆ ಟ್ರಂಕುಗಳನ್ನು ಮನೆಯೊಳಕ್ಕೆ ಒಯ್ದ. ಗಾಡಿಯವನು ದುಡ್ಡು ತೆಗೆದು ಕೊಂಡು ಹೊರಟುಹೋದ.

ಮನೆಯನ್ನು ಹೊಕ್ಕಕೂಡಲೇ ಚಂದ್ರವದನೆಯ ಮನಸ್ಸನ್ನು ಅದಾವುದೋ ಅಸ್ಪಷ್ಟ ಭೀತಿಯಾವರಿಸಿಬಿಟ್ಟಿತು. ಮನೆಯ ನಿಶ್ಯಬ್ದ ವಾತಾ ವರಣವೇ ಅದಕ್ಕೆ ಕಾರಣ.

ಅಮ್ಮನಿಗೇನಾಗಿದೆಯೋ ಎಂದುಕೊಂಡು ಮೊದಲು ಥಡ ಥಡನೆ ಮಹಡಿ ಹತ್ತಿಹೋದಳು. ಕೊಠಡಿಯೊಂದರಲ್ಲಿ ಸುರಮಾಬಾಯಿ ಮಲಗಿ ದ್ದರು. ಅವರ ಸಮೀಪದಲ್ಲಿ ಬೆತ್ತದ ಕುರ್ಚಿಯೊಂದರ ಮೇಲೆ ಮಹಾಬಲಯ್ಯ ಕುಳಿತಿದ್ದರು. ಅವರ ಮುಖಮುದ್ರೆ ಗಂಭೀರವಾಗಿತ್ತು. ಚಂದ್ರವದನೆ ಬಂದುದನ್ನು ನೋಡಿಯೂ ನೋಡದವರಂತೆ ಸುಮ್ಮನಿದ್ದುಬಿಟ್ಟರು. ಊರಿಂದ ಬಂದವಳನ್ನು ಯಾವಾಗ ಬಂದೆ ಎಂದು ಕೇಳುವ ಗೋಜಿಗೇ ಹೋಗಲಿಲ್ಲ. ತನ್ನನ್ನು ಮಾವನವರು ಮಾತಾಡಿಸದಿರು ವುದನ್ನು ಕಂಡು ಚಂದ್ರವದನೆಯ ಮನಸ್ಸಿಗೆ ಹೇಗೆಹೇಗೋ ಆಯಿತು. ಏನೋ ಒಂದು ವಿಧವಾದ ಅಪಮಾನವಾದಂತೆ ಅವಳಿಗೆ ಭಾಸವಾಯಿತು.

"ಅಮ್ಮಾ ಹುಷಾರಾಗಿದ್ದಾಳೆಯೋ ಮಾವಯ್ಯ. ಈವತ್ತು ಹನ್ನೆರಡು ಗಂಟೆಗೆ ನಿನ್ನ ತಂತೀ ಮುಟ್ಟಿತು. ಕೂಡಲೇ ಗಾಡೀಮಾಡಿಕೊಂಡು ಹಳ್ಳಿಯಿಂದ ಹೊರಟುಬಿಟ್ಟೆ. ನಂಜನಗೂಡಿಗೆ ಬಂದು ಅಲ್ಲಿ ರೈಲು ಹತ್ತಿ ಕುಳಿತೆ." ಚಂದ್ರವದನೆ ನುಡಿದಳು.

"ನಿಮ್ಮಮ್ಮನಿಗೆ ನಾಲ್ಕೈದು ದಿನಗಳಿಂದಲೂ ಹಿಡಿದ ಜ್ವರಬಿಡಲಿಲ್ಲ. ಡಾಕ್ಟ್ರು ಬಂದು ನೋಡಿಕೊಂಡು ಹೋಗುತ್ತಿದ್ದಾರೆ. ಈಗಾಗಲೇ ಐದಾರು ಇಂಜಕ್ಷನ್ ಕೊಟ್ಟಿದ್ದಾರೆ. ಔಷಧೀನೂ ಕೊಡ್ತಿದ್ದಾರೆ. ಇಂಥಾ ಖಾಯಿ ಲೇಂತ ಇನ್ನೂ ಹೇಳಿಲ್ಲ ಡಾಕ್ಟ್ರು. ಮನ್ನೇರಾತ್ರಿ ಇದ್ದಕ್ಕಿದ್ದ ಹಾಗೇ ನಿಮ್ಮಮ್ಮನಿಗೆ ನೂರುನಾಲ್ಕು ಡಿಗ್ರೀತನಕಾ ಜ್ವರಾ ಏರಿಬಿಟ್ಟಿತು. ಕೈಕಾಲೆಲ್ಲಾ ತಣ್ಣಗಾಗಿ ಹೋಯಿತು. ಏನ್ಯೇನೋ ಕನವರಿಸಿಕೊಳ್ಳ ತೊಡಗಿದಳು. ಮಧ್ಯೆ ಮಧ್ಯೆ ನಿನ್ನ ಹೆಸರೂ ಹೇಳುತ್ತಿದ್ದಳು. ನನಗೆ ಗಾಭರಿಯಾಗಿ ನಿನಗೆ ತಂತೀಕೊಟ್ಟೆ."

"ನೀನು ತಂತೀ ಕೊಟ್ಟಿದ್ದು ಒಳ್ಳೇದೇ ಆಯಿತು ಮಾವಯ್ಯ. ಅದಕ್ಕೇ ಗಾಭರಿಯಿಂದ ಹೊರಟುಬಂದೆ."

"ನಿನ್ನೇ ರಾತ್ರಿಯೆಲ್ಲಾ ಜಾಗರಣೆ ಮಾಡಿದ್ದಾಳೆ ನಿಮ್ಮಮ್ಮ. ರಾತ್ರಿಯೆಲ್ಲಾ ಜ್ವರಾ ಕೆಂಡಮುಂಡಾ ಸುಡುತ್ತಲೇ ಇತ್ತು. ಈಗೆಲ್ಲೋ ಬೆಳಗಿನ ಜಾವದಲ್ಲಿ ಅವಳಿಗೆ ಜೊಂಪು ಹತ್ತಿದೆ. ಹೇಗೂ ನೀನು ಬಂದೆಯಲ್ಲಾ. ಇನ್ನು ನನ್ನ ಜವಾಬ್ದಾರೀ ಅಷ್ಟಾಗಿಲ್ಲ. ಇನ್ನು ನಿಮ್ಮ ತಾಯಿಯನ್ನು ನೋಡಿಕೊಳ್ಳೋದು ನಿನ್ನ ಭಾರ."

"ಹಾಗಾದ್ರೆ ನೀನು ಊರಿಗೆ ಹೊರಟು ಹೋಗ್ತಿಯಾ ಮಾವಯ್ಯ! ಅಮ್ಮನಿಗೆ ಪೂರ್ತಿ ವಾಸಿಯಾಗೋ ತನಕಾ ಇದ್ದಿದ್ದರೆ ಚೆನ್ನಾಗಿತ್ತು. ನನಗೇನು ಗೊತ್ತಾಗತ್ತೆ. ದೊಡ್ಡೋರು ನೀವಿದ್ದರೆ ನನಗೆ ಧೈರ್ಯ"

"ನೀನು ಹೇಳೋದು ಸರಿಯಮ್ಮಾ ಚಂದ್ರಾ. ನಾನು ಹಳ್ಳೀ ಬಿಟ್ಟು ತಿಂಗಳಮೇಲಾಯಿತು. ಹೆಚ್ಚು ದಿನಾ ಊರು ಬಿಟ್ಟು ಹೊರಗಿರಲು ಸಾಧ್ಯವಿಲ್ಲ. ಹಳ್ಳೀಲಿ ಬಹಳ ಕೆಲಸವಿದೆ. ಸಾಲದ್ದಕ್ಕೆ ಮನೇಲಿ ನಿಮ್ಮತ್ತೆಗೆ ಮೈ ಹುಷಾರಿಲ್ಲ. ಈ ಸಲ ಅವಳಿಗೆ ಮೈಯಿಳಿದು ಹೋಯಿತು. ಮೊದಲೇ ಬಹಳ ಲಕ್ಷಣ ನಿಮ್ಮತ್ತೆ. ಈಗಂತೂ ಹೇಳಬೇಕಾದ್ದೇ ಇಲ್ಲ. ಶಾನುಭೋಗರ ತಾಯೀನ ಅಡಿಗೇ ಕೆಲಸಕ್ಕೆ ಗೊತ್ತುಮಾಡಿ ಬಂದಿದ್ದೇನೆ. ಊರಿನ ಸ್ಥಿತಿಗತಿಗಳೇನಾಗಿವೆಯೋ ನೋಡಿಕೊಂಡು ಬರ್ತಿನಿ."

ಇನ್ನು ಹೆಚ್ಚು ಬಲವಂತಪಡಿಸುವುದು ಸರಿಯಲ್ಲವೆಂದು ಚಂದ್ರವದನೆ ಸುಮ್ಮನಾದಳು. "ಅಂದಹಾಗೆ ಅಡಿಗೇ ಕೆಲಸ ಯಾರು ಮಾಡ್ತಿದ್ದಾರೆ ಮಾವಯ್ಯ,"

"ಸಾವಿತ್ರಮ್ಮ ಮಾಡುತ್ತಿದ್ದಾರೆ.

"ಸರಿ ಹಾಗಾದರೆ." ಚಂದ್ರವದನೆ ಮಹಡಿಯಿಳಿದು ಹೊರಟು ಹೋದಳು. ಮಹಾಬಲಯ್ಯ ಪಕ್ಕದಲ್ಲಿದ್ದ ಪತ್ರಿಕೆಯನ್ನು ಕೈಗೆತ್ತಿಕೊಂಡರು.

* * *

"ಸ್ವಲ್ಪ ಗಂಜೀ ಕಾಸಿಕೊಡಲೇನಮ್ಮಾ"

"ನನಗ್ಯೇನೂ ಬೇಡವೇ ತಾಯಿ."

"ಡಾಕ್ಟ್ರು ಹೇಳಿಹೋಗಿದ್ದಾರೆ. ಬಲವಂತ ಮಾಡಿ ಹೊಟ್ಟೆಗೆ ಒಂದಿಷ್ಟು ಹಾಲೋ ಗಂಜೀನೋ ಹಾಕೀಂತ."

"ಹಾಳು ಗಂಜೀ ಬೇಡವೇ ತಾಯೀ. ವಾಕರಿಕೆ ಬರುತ್ತೆ ಗಂಜೀ ಕುಡಿದರೆ."

"ಹೋಗಲಿ-ಸ್ವಲ್ಪ ಹಾಲಾದರೂ ಕುಡಿಯಮ್ಮ".

"ಅಯ್ಯೋ ಹಾಲೂ ಬೇಡ-ಏನೂ ಬೇಡ. ವಾರದಿಂದ ಹಾಲು ಕುಡಿದೂ ಕುಡಿದೂ ಬಾಯೆಲ್ಲಾ ವಳವಳಾಂತ ಆಗಿಹೋಗಿದೆ."

"ಕಿತ್ತಳೇ ಹಣ್ಣಿನ ರಸ ಸ್ವಲ್ಪ ಕುಡೀತೀಯೇನಮ್ಮಾ."

"ಏನೂ ಬೇಡವೇಮ್ಮ."

"ಹೀಗೆ ಉಪವಾಸವಿದ್ರೆ ಹೇಗಮ್ಮಾ. ಒಂದು ವಾರದಿಂದಾ ಜ್ವರಾ ಕಾದು ಬಹಳ ನಿಶ್ಯಕ್ತಿಯಾಗಿ ಹೋಗಿದ್ದೀಯ. ಹೊಟ್ಟೆಗೆ ಏನೂ ಇಲ್ಲದೇ ಹೋದರೆ ಹೇಗೆ."

"ಚಂದ್ರಾ ನಾನೊಂದು ಕೇಳ್ತೀನಿ. ತಂದು ಕೊಡ್ತೀಯ.

"ಏನು ಬೇಕೋ ಹೇಳಮ್ಮಾ".

"ಏನೂ ಇಲ್ಲ. ಬಾಯೆಲ್ಲಾ ಕೆಟ್ಟುಹೋಗಿದೆ. ನಿಂಬೇಹಣ್ಣಿನ ಉಪ್ಪಿನ ಕಾಯಿ ಒಂದು ಹೋಳು ತಂದುಕೊಡ್ತೀಯ."

"ಆಗಲಮ್ಮ."

ಚಂದ್ರವದನೆ, 'ಸಾವಿತ್ರಮ್ಮ, ಸಾವಿತ್ರಮ್ಮ' ಎಂದು ಕೂಗಿದಳು.

ಸಾವಿತ್ರಮ್ಮ ಹಾಜರಾದರು. "ಏನು ತಾಯಿ ಕೂಗಿದರಲ್ಲಾ."

"ಅಮ್ಮನಿಗೆ ಉಪ್ಪಿನಕಾಯಿ ಬೇಕಂತೆ. ತಂದು ಕೊಡೀ ಸಾವಿತ್ರಮ್ಮ"

"ಆಗಲೀ ತಾಯಿ."

"ಹಾಗೇ ಫಿಲ್ಟರಿನಲ್ಲಿ ಡಿಕಾಕ್ಷನ್ನಿದ್ದರೆ ನನಗೊಂದು ಲೋಟಾ ಕಾಫೀ ಮಾಡಿಕೊಂಡು ಬನ್ನಿ ಸಾವಿತ್ರಮ್ಮ."

"ತರ್ತೀನಮ್ಮ." ಸಾವಿತ್ರಮ್ಮ ಹೊರಟುಹೋದರು.

ಸುರಸಾಬಾಯಿ ಹಾಸಿಗೆಮೇಲೆ ಅತ್ತಿಂದಿತ್ತ ಹೊರಳಾಡತೊಡಗಿದರು. ಒಂದು ವಾರದಿಂದಲೂ ಜ್ವರ ಕಾದು ಅವರ ಮುಖ ಬಿಳಿಚಿಕೊಂಡಿತ್ತು. ಬಹಳವಾಗಿ ಸೊರಗಿಹೋಗಿದ್ದರು. ಒಮ್ಮೆ ಕಣ್ಣರಳಿಸಿ ಸುತ್ತಲೂ ನೋಡಿ

ದರು. ಸ್ವಲ್ಪ ದೂರದಲ್ಲಿ ಕೂತಿದ್ದ ಮಗಳನ್ನು ನೋಡಿ 'ಹತ್ತಿರ ಬರ್ತೀಯಾಮ್ಮಾ ಚಂದ್ರಾ' ಎಂದರು. ಚಂದ್ರವದನೆ ಆಶ್ಚರ್ಯಚಕಿತಳಾಗಿ ಹತ್ತಿರ ಹೋಗಿ ಕೂತಳು. ಸುರಮಾಬಾಯಿ ಮಂಚದ ಮೇಲೆ ಬಂದು ಕುಳಿತ ಮಗಳ ಹಸ್ತವನ್ನು ತಮ್ಮ ಅಂಗೈಯ್ಯಲ್ಲಿಟ್ಟುಕೊಂಡರು. ಅವಳ ಮುಂದಲೆಯನ್ನೊಮ್ಮೆ ಮೃದುವಾಗಿ ನೇವರಿಸಿದರು. ಏನನ್ನೋ ಹೇಳಬೇಕೆಂದು ಅವರ ಮನಸ್ಸು ತುಡಿದುಕೊಳ್ಳುತ್ತಿತ್ತು. ಆದರೆ ಹೇಳಲು ಬಾಯಿ ಬಾರದು. ಅವರ ತುಟಿ ನಡುಗುತ್ತಿದ್ದುದನ್ನು ಚಂದ್ರವದನೆ ನೋಡಿದಳು. ಅವಳಿಗೆ ಬಹಳ ಗಾಭರಿಯಾಯಿತು.

"ಏನು ಹೇಳಬೇಕೋ ಹೇಳಮ್ಮಾ ಪರವಾಗಿಲ್ಲ" ಎಂದಳು.

"ಚಂದ್ರಾ........ಚಂದ್ರಾ........" ಸುರಮಾಬಾಯಿ ಅತಿ ಪ್ರಯಾಸದಿಂದ ಈ ಎರಡು ಮಾತನ್ನುಚ್ಚರಿಸಿದರು. ಮುಂದೆ ಮಾತು ಹೊರಡಲಿಲ್ಲ. ಗಂಟಲು ಕಟ್ಟಿಹೋಯಿತು.

"ಏನದು ಹೇಳಮ್ಮಾ." ಚಂದ್ರವದನೆ ಕಾತರಳಾಗಿ ಕೇಳಿದಳು.

"ಚಂದ್ರಾ. ನಿಮ್ಮ ಮಾವ ಮನೇಲಿದ್ದಾನೇನೋ ನೋಡು."

ತಕ್ಷಣ ಚಂದ್ರವದನೆ ಮಹಡಿಯಿಳಿದು ಹೋದಳು. ಮನೆಯೆಲ್ಲಾ ಒಂದು ಪ್ರದಕ್ಷಿಣೆ ಹಾಕಿ, ಮಾವ ಮನೆಯಲ್ಲಿಲ್ಲವೆಂದು ನಿರ್ಧರಮಾಡಿಕೊಂಡಳು. ಧಡಧಡನೆ ಮಹಡಿ ಹತ್ತಿದಳು. ಎಳೆಯ ಮಗುವಿನಂತೆ ಓಡಿ ಬಂದು ತಾಯಿಯ ಹತ್ತಿರ ಕೂತಳು.

"ಮಾವ ಮನೇಲಿಲ್ಲಾಮ್ಮಾ. ಹೊರಗೆ ಹೋಗಿದ್ದಾನೆ. ಏನು ಹೇಳಬೇಕೋ ಧೈರ್ಯವಾಗಿ ಹೇಳಮ್ಮಾ" ಎಂದಳು.

ಸುರಮಾಬಾಯಿ ನಿಟ್ಟುಸಿರ್ಗರೆಯುತ್ತಾ ಶುರು ಮಾಡಿದರು.

"ಏನು ಹೇಳಲೇ ತಾಯಿ. ನಿಮ್ಮ ಮಾವ ನಿನಗೆ ಕಾಲೇಜು ಬಿಡಿಸಬೇಕೆಂದಿದ್ದಾನೆ. ನೀನು ಕಾಲೇಜು ಹುಡುಗರ ಜತೇಲಿ ಟೂರು ಹೋಗಿದ್ದೀಯೆಂದು ಹೇಳಿದ ಕೂಡಲೇ ನಿಮ್ಮ ಮಾವ ನನ್ನ ಮೇಲೆ ಉರಿದು ಬಿದ್ದ. ನನ್ನನ್ನ ಸಿಕ್ಕಾಪಟ್ಟೆ ಬೈದ. 'ಅವಳೇನೋ ಹುಡುಗಿ, ಇಷ್ಟು ದೊಡ್ಡೋಳು, ನಿನಗಲ್ಲಿ ಹೋಗಿತ್ತು ಬುದ್ಧಿ; ಅವಳನ್ಯಾಕೆ ಕಳಿಸಿದೆ ಆ ಪುಂಡುಪೋಕರಿಗಳ ಜತೇಲಿ' ಎಂದು ನನ್ನ ತರಾಟೆಗೆ

ತಗೊಂಡ. ನಾನೆಷ್ಟೋ ಸಮಾಧಾನ ಹೇಳಿದೆ ನಿಮ್ಮ ಮಾವನಿಗೆ. ‘ಅವಳೊಬ್ಬಳೇ ಅಲ್ಲಾ ಹೋಗಿರೋದು. ಅವಳ ಜತೇಲಿ ಅವಳ ಸ್ನೇಹಿತೆ ಸುಮಿತ್ರೆಯೂ ಹೋಗಿದ್ದಾಳೆ. ಅವಳ ಜತೇ ಹುಡುಗರು ಒಳ್ಳೇವರು. ಸಾಭ್ಯಸ್ಥರು ಏನೂ ಭಯವಿಲ್ಲಾಂತ’ ಹೇಳಿದೆ. ಏನು ಹೇಳಿದರೂ ನಿಮ್ಮ ಮಾವ ಕೇಳಲಿಲ್ಲ. ದಿನವೂ ನನ್ನ ಮುಂದೆ ಶಂಖ ಪೂರೈಸತೊಡಗಿದ. ನಿನ್ನನ್ನ ಬಾಯಿಗೆ ಬಂದ ಹಾಗೆ ಬೈಯಲಾರಂಭಿಸಿದ. ನನಗೆ ದಿಕ್ಕುತೋಚ ಲಿಲ್ಲ. ನನಗೆ ನಿನ್ನ ಮಾವನ ಕಾಟವೊಂದು ಕಡೆ, ಊರಿಗೆ ಹೋದ ನಿನ್ನ ಯೋಗಕ್ಷೇಮ ತಿಳೀದೆ ನಿನ್ನ ಗತಿಯೇನಾಗಿದೆಯೋ ಎಂಬ ಚಿಂತೆ ಯೊಂದು ಕಡೆ - ಎರಡೂ ಸೇರಿಕೊಂಡು ಮನೋರೋಗ ಹಿಡಿದು ಬಿಟ್ಟಿತು. ಹಾಸಿಗೆ ಹಿಡಿದು ಮಲಗಿಬಿಟ್ಟೆ. ದಿನದಿನಕ್ಕೂ ಜ್ವರ ವಿಷವೇರಿ ದಂತೆ ಏರುತ್ತಾ ಬಂತು. ನಿಮ್ಮ ಮಾವನಿಗೆ ಗಾಭರಿಯಾಗಿ ನಿನಗೆ ತಂತೀ ಕೊಟ್ಟ. ನೀನು ಊರಲ್ಲಿಲ್ಲದಿರೋವಾಗ ಇಷ್ಟೆಲ್ಲಾ ರಾದ್ಧಾಂತ ನಡೀತು ತಾಯಿ. ಸದ್ಯ ಈಗಲಾದರೂ ಬಂದೆಯಲ್ಲಾ. ನಾನು ಬದುಕಿದೆ.” ಸುರಮಾಬಾಯಿ ದೊಡ್ಡದಾಗಿ ನಿಟ್ಟುಸಿರಿಟ್ಟರು.

ತನ್ನ ತಾಯಿಯ ಮಾತು ಕೇಳುತ್ತಿದ್ದ ಹಾಗೆಯೇ ಚಂದ್ರವದನೆಯ ಮುಖ ಆಕ್ರೋಶದಿಂದ ಆರಕ್ತವಾಗತೊಡಗಿತು. ತನ್ನನ್ನು ಊರಿಗೆ ಬರ ಮಾಡಿಕೊಳ್ಳಲು ತನ್ನ ಮಾವ ಹೂಡಿದ ಕುಟಿಲ ತಂತ್ರವನ್ನು ಕಂಡು ಅವಳ ಮನಸ್ಸಿಗೆ ಸಹಿಸಲಾರದ ಯಾತನೆಯುಂಟಾಯಿತು. “ಮಾವ ಇಷ್ಟು ನೀಚ ಕೆಲಸಕ್ಕೆ ಕೈಹಾಕುತ್ತಾನೆಂದಿರಲಿಲ್ಲ ನಾನು. ಮಾವಯ್ಯಾಂದ್ರೆ ನಾನ್ಯೇ ನೋಂತ ತಿಳಿದುಕೊಂಡಿದ್ದೆ. ಅವನು ನನ್ನ ಏಕಮಾತ್ರ ಹಿತೈಷಿ; ಹೆತ್ತ ತಂದೆಗಿಂತಲೂ ಒಂದು ತೂಕ ಹೆಚ್ಚೆಂದು ಭಾವಿಸಿದ್ದೆ. ಆದರೆ ಈಗ ಮಾವನ ಸ್ವಭಾವವೆಂತಹುದೆಂದು ಚೆನ್ನಾಗಿ ವ್ಯಕ್ತಪಟ್ಟಿತು. ನಾನು ಕಾಲೇಜು ಹುಡುಗರ ಜತೇಲಿ ಟೂರು ಹೊರಟಿದ್ದು ಮಾವನಿಗೆ ಸರಿಬೀಳಲಿಲ್ಲ. ಈ ನಡುವೆ ಮಾವ ನನ್ನ ಕಂಡರೆ ಏಕೋ ಒಂದು ರೀತಿಯಾಗಿದ್ದಾನೆ. ಕಳ್ಳ ನನ್ನು ಕಾಣುವಂತೆ ನನ್ನ ಮೇಲೆ ಒಂದು ವಿಧವಾದ ಗುಮಾನಿಯಿಟ್ಟು ಕೊಂಡಿದ್ದಾನೆ. ನನ್ನ ಚಟುವಟಿಕೆಗಳನ್ನೆಲ್ಲಾ ಕಣ್ಣಲ್ಲಿ ಕಣ್ಣಿಟ್ಟು ನೋಡು ತ್ತಿದ್ದಾನೆ. ಎಲ್ಲವನ್ನೂ ಬಹಳ ಎಚ್ಚರಿಕೆಯಿಂದ ನಿರೀಕ್ಷಿಸುತ್ತಿದ್ದಾನೆ.

ಅಂತೂ ನನ್ನನ್ನು ಪಂಜರದಲ್ಲಿಟ್ಟು ರಕ್ಷಿಸುತ್ತಿದ್ದಾನೆ ನಮ್ಮ ಮಾವ" ಎಂದು ಕೊಂಡಳು ಚಂದ್ರವದನೆ. ತನ್ನ ಮಾವನ ಬಗ್ಗೆ ಒಂದು ವಿಧವಾದ ಅನಾದರಣೆಯೂ ತಾತ್ಸಾರವೂ ಆವಳಲ್ಲಿ ಉತ್ಪನ್ನವಾಯಿತು.

ಸುರಮಾಬಾಯಿ ಮಗಳ ಚಿಂತಾಮುದ್ರೆಯನ್ನು ನೋಡಿ, "ಏಕಮ್ಮಾ ಚಂದ್ರಾ ಹಾಗೆ ಬೆಪ್ಪು ಬಡಿದು ಕೂತುಬಿಟ್ಟೆ. ಈಗೇನಾಯಿತು ಹೇಳು. ಮಾವ ಹೇಳಿದ್ದು ಒಂದ್ವಿಧದಲ್ಲಿ ಅನುಕೂಲವೇ ಆಯಿತು. ನೀನು ಎಷ್ಟಾದರೂ ಹೆಂಗಸು. ಎಷ್ಟೇ ಸ್ನೇಹಿತರಾಗಿರಲೀ, ಆಪ್ತೇಷ್ಟರಾಗಿರಲೀ, ಗಂಡಸರು ಗಂಡಸರೇ. ಯಾವ ಹುತ್ತದಲ್ಲಿ ಯಾವ ಹಾವೋ! ಯಾರ್ಯಾರ ಮನಸ್ಸು ಹ್ಯಾಗ್ಯಾಗಿರುತ್ತೋ ತಿಳಿದವರಾರು! ಏನೇ ಆಗಲೀ ನೀನು ತಲೇ ಬೀಸಿಕೊಂಡು ಹೀಗೆಲ್ಲಾ ಗಂಡಸರೊಂದಿಗೆ ಓಡಾಡೋದು ಶುದ್ಧ ತಪ್ಪು. ಕಾಲೇಜಾಯಿತು ನೀನಾಯಿತೂಂತ ಇದ್ದುಬಿಡು. ಯಾವ ತಂಟೆಯೂ ಇಲ್ಲ" ಎಂದರು.

ಚಂದ್ರವದನೆಗೆ ತಾಯಿಯ ಹಿತೋಪದೇಶ ಸ್ವಲ್ಪವೂ ಹಿಡಿಸಲಿಲ್ಲ. ತನ್ನ ತಾಯಿಯೂ ಮಾವನ ಪಕ್ಷವನ್ನೇ ಹಿಡಿದು ವಾದಿಸುತ್ತಿರುವುದನ್ನು ಕಂಡು ಅವಳ ಮನಸ್ಸಿಗೆ ಬಹಳ ಕಸಿವಿಸಿಯುಂಟಾಯಿತು. 'ಮಾವನಂತೂ ಹೋಗಲಿ, ಅಮ್ಮಾ ಕೂಡಾ ತನ್ನ ಅಣ್ಣನ ಹಾಡಿಗೇ ತಾಳ ಹಾಕುತ್ತಿದ್ದಾಳಲ್ಲಾ. ಹೆತ್ತ ತಾಯಿಗೇ ನನ್ನ ಮನಸ್ಸನ್ನು ತಿಳಿದುಕೊಳ್ಳಲು ಶಕ್ಯವಿಲ್ಲದಿರುವಾಗ, ಬೇರೆಯವರಿಗೆ ನನ್ನ ಸ್ವಭಾವ ಹೇಗೆ ತಿಳಿಯಬೇಕು. ಅಂತೂ ಈ ಮನೇಲಿ ನನ್ನ ಸ್ವಾತಂತ್ರ್ಯಕ್ಕೆ ಧಕ್ಕೆಯುಂಟಾಗುತ್ತಿಯೆಂಬುದಂತೂ ನಿರ್ವಿವಾದ. ಈ ರೀತಿಯ ನಿರ್ಬಂಧ ವಾತಾವರಣ ನನ್ನ ಜಾಯಮಾನಕ್ಕೆ ಒಗ್ಗದು. ಈ ಸಂಪ್ರದಾಯಶರಣತೆಯನ್ನು, ನಮ್ಮ ಮನೆಯವರ ಮೌಢ್ಯ ನನ್ನು ಪ್ರತಿಭಟಿಸಲೇಬೇಕು. ಈ ಅಷ್ಟದಿಗ್ಬಂಧವನ್ನು ಮುರಿದೊಗೆಯಲೇಬೇಕು' ಎಂಬುದಾಗಿ ಯೋಚಿಸತೊಡಗಿದಳು. ತಾನು ಮನಸ್ಸಿನಲ್ಲಿ ಮಾಡಿಕೊಂಡ ದೃಢ ನಿರ್ಧಾರದಿಂದ ಅದುವರೆಗೂ ತೂಗುಯ್ಯಾಲೆಯಂತೆ ಹೊಯ್ದಾಡುತ್ತಿದ್ದ ಮನಸ್ಸು ಒಂದು ಸ್ಥಿಮಿತಕ್ಕೆ ಬಂತು. ಚಂದ್ರವದನೆಯ ಹೃದಯ ಅದೆಷ್ಟೋ ಹಗುರವೆನಿಸಿತು.

ಅಷ್ಟು ಹೊತ್ತಿಗೆ 'ಟಪ್ ಟಪ್' ಎಂದು ಯಾರೋ ಮಹಡಿ ಹತ್ತಿ ಬರುತ್ತಿದ್ದ ಶಬ್ದ ಕೇಳಿಸಿತು. ಚಂದ್ರವದನೆ ಹಿಂದಿರುಗಿ ನೋಡಿದಳು. ನೋಡಿ ತುಸು ಬೆಚ್ಚಿ ಬಿದ್ದಳು. ಮಹಾಬಲಯ್ಯ ಬರುತ್ತಿದ್ದರು. 'ಏನು ಮಾವಯ್ಯಾ ಇಷ್ಟು ಬೇಗ ಬಂದುಬಿಟ್ಟೆ' ಎಂದಳು.

"ಹ್ಞಾ. ಬಂದುಬಿಟ್ಟೇಮ್ಮಾ. ಈವತ್ತು ಮಧ್ಯಾಹ್ನದ ಬಸ್ಸಿಗೇ ನಾನು ಹೊರಡಬೇಕಾಗಿದೆ. ಮಾರ್ಕೆಟ್ಟಿನಲ್ಲಿ ನಮ್ಮೂರು ಶಾನುಭೋಗರು ಸಿಕ್ಕಿದ್ದರು. ಮನೇಕಡೆ ಎಲ್ಲಾ ಹುಷಾರಾಗಿದ್ದಾರೆಯೇ ಎಂದು ಕೇಳಿದೆ. ನಿಮ್ಮತ್ತೆಗೆ ಹಾಗೇ ನಚ್ಚುನಚ್ಚಾಗಿಯೇ ಇದೆಯಂತೆ. ಬೇಗ ಊರಿಗೆ ಹೊರಟುಬರಬೇಕೆಂದು ಹೇಳಿ ಕಳುಹಿಸಿದ್ದಾಳೆ. ಮಧ್ಯಾಹ್ನದ ಬಸ್ಸಿಗೇ ಹೊರಡ್ತೀನಿ." ಮಹಾಬಲಯ್ಯ ಕೋಟು ರುಮಾಲುಗಳನ್ನು ಕಳಚಿ ಸೋಫಾದ ಮೇಲೆ ಮಡಿಸಿದರು.

"ಚಂದ್ರಾ, ನಿಮ್ಮಮ್ಮನ್ನ ಹುಷಾರಾಗಿ ನೋಡಿಕೋ. ಅವಳಿಗಿನ್ನೂ ಪೂರ್ತಿ ಗುಣವಾಗಿಲ್ಲ. ಡಾಕ್ಟ್ರು ಮನೆಗೆ ಬಂದು ನೋಡಿಕೊಂಡು ಹೋಗ್ತಾರೆ. ಹೊತ್ಹೊತ್ತಿಗೆ ಔಷಧೋಪಚಾರ ನಡೆಸೋದು ನಿನ್ನ ಭಾರ."

"ಆಗಲೀ ಮಾವಯ್ಯಾ. ಹುಷಾರಾಗಿ ನೋಡ್ಕೋಳ್ತೀನಿ."

"ಚಂದ್ರಾ, ನಿನ್ನ ಜತೇಲಿ ಸ್ವಲ್ಪ ಮಾತಾಡೋದಿದೆ. ನಿಮ್ಮಮ್ಮ ಮಲಗಿದ್ದಾಳೆ. ಕೆಳಗಿಳಿದು ಬರ್ತೀಯಾ."

ಚಂದ್ರವದನೆಗೆ ಮಹಾಬಲಯ್ಯನವರ ಮಾತು ಕೇಳಿ ಅತ್ಯಾಶ್ಚರ್ಯವೆನಿಸಿತು. ಆದರೂ ಮಾವ ತನ್ನೊಂದಿಗೆ ಮಾತನಾಡಬೇಕೆಂದಿರುವ ರಹಸ್ಯದ ಸಂಗತಿಯೇನೆಂಬುದನ್ನು ಸ್ವಲ್ಪಮಟ್ಟಿಗಾದರೂ ಊಹಿಸುವುದು ಅವಳಿಗೇನೂ ಕಷ್ಟವಾಗಿರಲಿಲ್ಲ. ಸ್ವಲ್ಪ ಹೊತ್ತಿಗೆ ಮುಂಚೆ ನಡೆದಿದ್ದ ತಾಯಿ ಮಗಳ ಸಂಭಾಷಣೆಯಿಂದ ಮಾವನ ಮನಸ್ಸು ಯಾವ ದಿಕ್ಕಿನಲ್ಲಿ ಓಡುತ್ತಿದೆ ಯೆಂಬುದು ಚಂದ್ರವದನೆಗಾಗಲೇ ತಿಳಿದುಹೋಗಿತ್ತು. ಆದರೂ ಅವಳು ನಿರ್ವಾಹವಿಲ್ಲದೆ ತನ್ನ ಮಾವನ ಪ್ರಶ್ನೆಗೆ, "ಹ್ಞಾ ಬರ್ತೀನಿ ಮಾವಯ್ಯಾ" ಎಂದು ಎದ್ದಳು. ಇಬ್ಬರೂ ಮಹಡಿಯಿಳಿದು ಹೋದರು. ಪಡಸಾಲೆಯಲ್ಲಿ ಕೂತರು. ಮನೆಯಲ್ಲಿ ಯಾರೂ ಇರಲಿಲ್ಲ. ಸಾವಿತ್ರಮ್ಮ ಅಡಿಗೇಮನೆ

ಯಲ್ಲಿದ್ದರು. ಚಂದ್ರವದನೆ ತನ್ನ ಮಾವನ ಮುಖವನ್ನೇ ನೋಡುತಾ ಕೂತಳು. ಮಹಾಬಲಯ್ಯ ಗಂಭೀರವಾಗಿ ಪ್ರಾರಂಭಿಸಿದರು.

"ನೀನು ಹೀಗೆಲ್ಲಾ ಕಾಲೇಜು ಹುಡುಗರ ಜತೇಲಿ ಟೂರು ಗೀರ್ರು ಹೋಗೋದು ನನಗೆ ಸುತರಾಂ ಸರಿಬೀಳೋಲ್ಲ ಚಂದ್ರಾ. ನೀನು ಗಂಡಸರ ಜತೇಲಿ ಸಲಿಗೆಯಿಂದಿರಬಾರದು. ಇದರಿಂದ ನಿನಗೇ ಮುಪ್ಪು. ನೀನು ಕಾಲೇಜಿಗೆ ಸೇರೋದೇ ನನಗಿಷ್ಟವಿರಲಿಲ್ಲ. ಇಂಟರ್ ಪ್ಯಾಸಾದಮೇಲೆ ಸ್ವಸ್ಥವಾಗಿ ಮನೇಲಿರಬೇಕಾಗಿತ್ತು. ಹೆಂಗಸರು ಎಷ್ಟು ಓದಿದರೇನು? ಗಂಡಸರಿಗೆ ಸಮವಾಗುತ್ತಾರೆಯೇ? ನೀವು ಬಿ. ಎ. ಅಲ್ಲಾ ಎಂ. ಎ. ಪ್ಯಾಸು ಮಾಡಿದರೂ ಕಡೆಗೆ ನೀವು ಯಾರನ್ನಾದರೂ ಮದುವೆಯಾಗಿ ಮನೇಲಿರೋವರು ತಾನೇ. ದೊಡ್ಡ ದೊಡ್ಡ ಡಿಗ್ರಿಗಳನ್ನು ತೆಗೆದುಕೊಂಡು ನೀನ್ಯೇನು ಅಮಲ್ದಾರೀ ನಡೆಸಬೇಕಾಗಿದೆಯೇ. ಇಲ್ಲಾ ಇನ್ಯಾವುದಾದರೂ ಉದ್ಯೋಗ ಮಾಡಬೇಕಾಗಿದೆಯೇ ಹೇಳು. ಈಗಿನ ಕಾಲದಲ್ಲಿ ಹೆಂಗಸರೂ ಕಾಲೇಜಲ್ಲಿ ಓದ್ತಿದ್ದಾರೆ. ಓದಿ ಮುಂದೇನು ಮಾಡ್ತಾರೋ ನನಗರ್ಥವಾಗೋಲ್ಲ. ಹೆಂಗಸರ ಪ್ರೌಢ ವಿದ್ಯಾಭ್ಯಾಸದಿಂದ ಆಗಬೇಕಾದ್ದೇನೂ ಇಲ್ಲ. ಸರ್ಕಾರದವರೇ ಸ್ತ್ರೀ ವಿದ್ಯಾಭ್ಯಾಸಕ್ಕೊಂದು ಮಿತಿಯನ್ನೇರ್ಪಡಿಸಬೇಕು. ಅವರಿಗೆ ಓದು ಬರಹ ಇಷ್ಟು ಬಂದರೆ ಸಾಕು. ಮನೇಲಿ ಅಡಿಗೇ ಕೆಲಸ ಮಾಡಿಕೊಂಡು ಮಕ್ಕಳೂ ಮರೀನ ನೋಡಿಕೊಂಡು ಹಾಯಂತಿರೋದು ಬಿಟ್ಟು ಬಿಟ್ಟು ಇದೆಲ್ಲಿಯ ಹುಚ್ಚು ಹೆಂಗಸರಿಗೇಂತೀನಿ. ಈ ಕಾಲೇಜು ವಿದ್ಯಾಭ್ಯಾಸದಿಂದ ನಮ್ಮ ಹೆಂಗಸರು ಬಹಳ ಕೆಟ್ಟುಹೋಗ್ತಿದ್ದಾರೆ. ಬಹಳ ಆನ್ಯಾಯವಾಗಿ ಹೋಗ್ತಿದೆ. ಪ್ರಪಂಚದ ಸುದ್ದಿ ನಮಗ್ಯಾಕೆ ಹೇಳು. ನಮ್ಮ ಡೊಂಕು ನಾವು ತಿದ್ದುಕೊಳ್ಳೋಣ. ಮುಖ್ಯ ನೀನು ಬಿ. ಎ. ತರಗತಿಗೆ ಸೇರದಿದ್ದಿದ್ದರೆ ಚೆನ್ನಾಗಿತ್ತು."

"ಅದ್ಯೇಕೆ ಮಾವಯ್ಯ ಹಾಗಂತೀಯ. ಪ್ರೌಢ ವಿದ್ಯಾಭ್ಯಾಸದಿಂದ ಹುಡುಗೀರು ಕೆಟ್ಟುಹೋಗ್ತಿದ್ದಾರೆಂದು ಹೇಳ್ತೀಯಲ್ಲಾ! ಇನ್ನೇನು ಮಾಡಬೇಕು ಅವರು! ಹೆಣ್ಣು ಹೆತ್ತ ತಂದೆತಾಯಿಗಳು ಅವರನ್ನು ಮುಂದೆ ಕೂಡಿಸಿಕೊಂಡು ಅಳಬೇಕೇನು! ಈಗಿನ ಬರಗಾಲದಲ್ಲಿ ಜನರ ಜೀವನ ನಡೆಯೋದೇ ಕಷ್ಟ. ನಮ್ಮ ದೇಶದ ಬಡತನ ಜಗತ್ಪ್ರಸಿದ್ಧವಾಗಿದೆ. ನಮ್ಮ

ಜನಕ್ಕೆ ದಿನಕ್ಕೆರಡು ಊಟ ಸಿಗೋದು ಕೂಡಾ ಬಹಳ ದುರ್ಲಭ. ಬಡತನದ ಬೇಗುದಿಯಲಿ ಸಿಕ್ಕಿ ಅದೆಷ್ಟು ಸಂಸಾರಗಳು ನರಳುತ್ತಿವೆಯೋ ದೇವರೇ ಬಲ್ಲ. ಹೀಗಿರುವಾಗ ಹೆಣ್ಣು ಹೆತ್ತ ತಂದೆತಾಯಿಗಳು ಸಾವಿರಾರು ರೂಪಾಯಿ ಸುರಿದು ತಮ್ಮ ಹೆಣ್ಣು ಮಕ್ಕಳಿಗೆ ಮದುವೇ ಮಾಡುವ ಪರಿಸ್ಥಿತಿಯಲ್ಲಿದ್ದಾರೆಯೇ ಯೋಚಿಸಿ ನೋಡು. ಅದರಲ್ಲೂ ಈಗಿನ ಕಾಲದ ಹುಡುಗರೆಂದಮೇಲೆ ಹೇಳಬೇಕಾದ್ದೇ ಇಲ್ಲ. ಅವರಿಗೆಲ್ಲಾ ಧನಪಿಶಾಚಿ ಹಿಡಿದುಬಿಟ್ಟಿರುತ್ತೆ. ಹುಡುಗ ತಕ್ಕಮಟ್ಟಿಗೆ ವಿದ್ಯಾವಂತನಾಗಿಬಿಟ್ಟಿದ್ದರಂತೂ ಮುಗಿದೇ ಹೋಯಿತು. ವಿವಾಹದ ಮಾರುಕಟ್ಟೆಯಲ್ಲಿ ಅವನ ಬೆಲೆ ಹತ್ತಾರು ಸಾವಿರಕ್ಕೆ ಏರಿ ಹೋಗುತ್ತೆ; ವಿದ್ಯೆಯ ಜತೆಗೆ ಒಂದು ಉದ್ಯೋಗವಿದ್ದು ಬಿಟ್ಟರಂತೂ ಅವನನ್ನು ಹಿಡಿಸುವವರೇ ಇಲ್ಲ. ಅವನಿಗೆ ಹೆಣ್ಣು ಕೊಡುವ ಮನೆ ಸಂಪೂರ್ಣವಾಗಿ ನಿರ್ನಾಮವಾದಂತೆಯೇ ಸರಿ. ಹುಡುಗ ಕೇಳಿದ ಸಾವಿರಾರು ರೂಪಾಯಿ ವರದಕ್ಷಿಣೇ ತೆತ್ತು, ಅವನ ಇಷ್ಟಾರ್ಥಗಳನ್ನೆಲ್ಲಾ ಈಡೇರಿಸಿ, ಎರಡು ಖರ್ಚನ್ನೂ ನಿರ್ವಹಿಸಿ ಮದುವೇ ಮಾಡುವ ಹೊತ್ತಿಗೆ ಹೆಣ್ಣಿನ ತಂದೆ ಮನೇ ಮಠ ಮಾರಿಕೊಂಡು ಹೆಂಡತೀಮಕ್ಕಳ ಸಮೇತ ಬೀದಿಯಲ್ಲಿ ತಿರುಪೆಗೆ ನಿಲ್ಲಬೇಕಾಗುತ್ತೆ. ಇಂದು ನಮ್ಮ ಸಮಾಜದ ನಿತ್ಯ ಪರಿಸ್ಥಿತಿ ಹೀಗಿದೆ. ನಾನು ಹೇಳುತ್ತಿರೋದರಲ್ಲಿ ಎಳ್ಳಷ್ಟೂ ಉತ್ಪ್ರೇಕ್ಷೆಯಿಲ್ಲ ಮಾವಯ್ಯ. ನೂರಾರು ಸಂಸಾರಗಳು ಹೀಗೆ ಹಾಳಾಗಿಹೋಗಿರೋದನ್ನ ಕಣ್ಣಾರೆ ಕಂಡಿದ್ದೇನೆ. ಆದರೆ ಈ ಚೈತನ್ಯವಿರುವವರು ನಮ್ಮಲ್ಲಿ ಎಷ್ಟು ಜನರಿದ್ದಾರೆ? ಸಾಲವೋ ಸೋಲವೋ ಮಾಡಿ ಹೆತ್ತ ಮಕ್ಕಳನ್ನು ಬೀದಿಗೆ ನೂಕದೆ ಸಾಕುತ್ತಾರೆ. ಹೇಗಿದ್ದರೂ ಸರ್ಕಾರದವರು ಹೆಂಗಸರ ವಿದ್ಯಾಭ್ಯಾಸಕ್ಕಾಗಿ ಶಾಲಾ ಕಾಲೇಜುಗಳನ್ನು ಏರ್ಪಡಿಸಿದ್ದಾರೆ. ಓದೋ ಚೈತನ್ಯವಿರುವ ಹೆಣ್ಣು ಮಕ್ಕಳು ಓದ್ತಿದ್ದಾರೆ. ಇತ್ತ ಓದೂ ಇಲ್ಲದೆ, ಅತ್ತ ಸಂಸಾರದ ಲೋಲಾಪ್ತಿಯೂ ಇಲ್ಲದೆ ನಮ್ಮ ಹೆಣ್ಣು ಮಕ್ಕಳು ಹೇಗೆ ತಾನೇ ಕಾಲ ಕಳೆಯಬೇಕು. ಜೀವನದಲ್ಲಿ ಯಾವ ಗುರಿಯೂ ಇಲ್ಲದೆ, ಯಾವುದೊಂದು ಹವ್ಯಾಸವೂ ಇಲ್ಲದೆ ಬಾಳಲು ಅವರಿಂದ ಸಾಧ್ಯವೇ? ಹೆಂಗಸರೂ ನಿಮ್ಮ ಹಾಗೇ ಮನುಷ್ಯರಲ್ಲವೇನು? ಹೆಂಡತೀ ಮಕ್ಕಳು, ಮನೇ ಮಠ ಎಂಬ ಹಂಬಲು ನಿಮಗಿರುವಂತೆಯೇ ನಮಗೂ ಇರೋಲ್ಲವೇನು?"

"ಏನು ಚಂದ್ರಾ, ದೊಡ್ಡ ಉಪನ್ಯಾಸವನ್ನೇ ಶುರು ಮಾಡಿಬಿಟ್ಟೆಯಲ್ಲಾ. ಬೇಷ್. ಸೊಗಸಾಗಿ ಮಾತಾಡ್ತೀಯೊ ಕಣೇ ನೀನು. ನೀನು ಕಾಲೇಜು ಸೇರಿದ್ದಕ್ಕೆ ಸಾರ್ಥಕವಾದಹಾಗಾಯಿತು. ನೀನು ಹೇಳಿದ್ದೆಲ್ಲಾ ಸರಿಯೇ, ಒಪ್ತೀನಿ. ನಾನಾಗಲೇ ಹೇಳಿದೆನಲ್ಲಾ ಲೋಕದ ಸುದ್ದಿ ನಮಗೆ ಬೇಡಾಂತ. ಮೊದಲು ನಾವು ನಮ್ಮ ಡೊಂಕು ತಿದ್ದಿಕೊಳ್ಳೋಣ. ನಮ್ಮದು ಒಳ್ಳೇ ಸಂಪ್ರದಾಯಸ್ಥ ಮನೆತನ. ನಮ್ಮ ಕುಟುಂಬದಲ್ಲಿ ಹೆಂಗಸರ ಪೈಕಿ ನಿನ್ನಷ್ಟು ಪ್ರೌಢ ವಿದ್ಯಾಭ್ಯಾಸ ಮಾಡಿದವರೊಬ್ಬರೂ ಇಲ್ಲ. ನೀನೇ ಮೊದಲನೆಯವಳು. ಮೊದಲಿಂದಲೂ ಒಬ್ಬಳೇ ಮಗಳೆಂದು ನಿಮ್ಮ ಅಮ್ಮ ನಿನ್ನನ್ನು ಮುದ್ದಿನಿಂದ ಬೆಳೆಸಿಬಿಟ್ಟಿದ್ದಾಳೆ. ನಾನೂ ಪಾಪ ಹುಡುಗಿ, ಓದಿಕೊಳ್ಳಲೀಂತ ನಿನ್ನ ತಂಟೆಗೆ ಬರಲಿಲ್ಲ. ನಾನು ಮನಸ್ಸುಮಾಡಿದ್ದರೆ ಯಾವತ್ತೋ ನಿನಗೆ ಕಾಲೇಜು ಬಿಡಿಸಿಬಿಡುತ್ತಿದ್ದೆ. ನನಗಿದೆಲ್ಲಾ ಸ್ವಲ್ಪವೂ ಸರಿಬೀಳೋಲ್ಲ. ಎಷ್ಟಾದರೂ ನೀನು ಹೆಂಗಸು. ನಾಳೆ ಮದುವೆಯಾಗಿ ಗಂಡನ ಮನೆಯಲ್ಲಿ ಗೃಹಿಣಿಯಾಗಿ ಬಾಳತಕ್ಕವಳು. ಈಗ ನೀನು ಓದಿರೋದೇ ಹೆಚ್ಚಾಗಿ ಹೋಯಿತು. ನೀನೀಗ ಮಾತಾಡಿದ ಧೋರಣೆಯಲ್ಲೇ ತಿಳಿದುಕೊಂಡೆ ನೀನೆಷ್ಟರ ಮಟ್ಟಿಗೆ ತಯಾರಾಗಿದ್ದೀಯಾಂತ. ನನಗೇ ಬುದ್ಧಿ ಹೇಳುವಷ್ಟು ನೀನು ಬೆಳೆದುಕೊಂಡಿದ್ದೀಯಾಂತ ನನಗೆ ತಿಳಿದಿರಲಿಲ್ಲ."

"ನಾನು ಹೇಳಿದ್ದರಲ್ಲೇನು ತಪ್ಪಿದೆ ಮಾವಯ್ಯ. ವಿನಾ ಕಾರಣ ಏಕೆ ಕೋಪಿಸ್ಕೋಳ್ತೀಯ. ನಾನು ಕಾಲೇಜಲ್ಲಿ ಓದ್ತಿರೋದ್ರಿಂದ ನಾನ್ಯೇನು ದಾರಿ ತಪ್ಪಿ ಹೋಗಿರೋದು. ನನಗೂ ನಮ್ಮ ಮನೆತನದ ಗೌರವ ಘನತೆಗಳ ಅರಿವಿದೆ. ನಮ್ಮ ಕುಲಗೋತ್ರಗಳೆಲ್ಲಾ ಚೆನ್ನಾಗಿ ತಿಳಿದಿದೆ. ಕಾಲೇಜಿಗೆ ಹೋದ ಮಾತ್ರಕ್ಕೇ ಹೆಂಗಸು ಕೆಟ್ಟುಹೋಗ್ತಾಳೆಂದು ಹೇಳೋದು ಶುದ್ಧ ಅವಿವೇಕ."

"ಸ್ವಲ್ಪ ಹಲ್ಲು ಹಿಡಿದು ಮಾತಾಡು ಚಂದ್ರಾ. ಯಾರ ಹತ್ರ ಮಾತಾಡ್ತಿರೋದೂಂತ ನಿನಗೆ ಗೊತ್ತಿದೇತಾನೇ. ಸಾಕು ನಿಲ್ಲಿಸು ನಿನ್ನ ಅಧಿಕ ಪ್ರಸಂಗವನ್ನ. ಈ ಮನೆಗೆ ನಾನು ಯಜಮಾನ ತಿಳೀತೇ. ನೀನೂ ನಿನ್ನ ತಾಯಿಯೂ ನಾನು ಹೇಳಿದ ಹಾಗೆ ಕೇಳಿಕೊಂಡು, ಬಾಲ ಮುದುರಿಕೊಂಡಿರಬೇಕು. ನೀವಾಗಿಯೇ ಯಾವ ಪಾರುಪತ್ಯವನ್ನೂ ಮಾಡುವ

ಹಾಗಿಲ್ಲ. ಇನ್ನು ಮೇಲೆ ನೀನು ಕಾಲೇಜಿಗೆ ಹೋಗಬೇಡ. ಇಷ್ಟಕ್ಕೇ ಸಾಕು ಮಾಡು ನಿನ್ನ ವಿದ್ಯಾಭ್ಯಾಸವನ್ನ."

"ಅದು ಮಾತ್ರ ಖಂಡಿತ ಸಾಧ್ಯವಿಲ್ಲಾ ಮಾವಯ್ಯಾ. ನಾನು ನನ್ನ ಕೋರ್ಸನ್ನ ಅರ್ಧಕ್ಕೇ ಕೈಬಿಡೋಳಲ್ಲ. ಕೈ ಹಾಕಿದ ಕೆಲಸವನ್ನು ಕೊನೆ-ಮುಟ್ಟಿಸಿಯೇ ತೀರುತ್ತೇನೆ. ನನ್ನ ವಿದ್ಯಾಭ್ಯಾಸದ ವಿಚಾರದಲ್ಲಿ ನಾನು ಸ್ವತಂತ್ರಳಿದ್ದೇನೆ."

"ಇನ್ನೂ ಯಾವ ಯಾವ ವಿಚಾರದಲ್ಲಿ ನೀನು ಸ್ವತಂತ್ರಳಿದ್ದೀಯ ಅದನ್ನೂ ತಿಳಿಸಿಬಿಡು."

"ನನಗೆ ಸಂಬಂಧಪಟ್ಟ ವಿಷಯಗಳಲ್ಲೆಲ್ಲಾ."

"ಅಂದ್ರೆ ಅರ್ಥವಾಗ್ಲಿಲ್ಲ. ಸ್ಪಷ್ಟವಾಗಿ ಹೇಳಿಬಿಡು."

"ನನ್ನ ವಿದ್ಯಾಭ್ಯಾಸ, ನನ್ನ ವಿವಾಹ-ನನ್ನ ಭಾವೀ ಜೀವನ ಇದೆಲ್ಲ ವಿಷಯಗಳಲ್ಲೂ ನಾನು ಸಂಪೂರ್ಣ ಸ್ವತಂತ್ರಳಿದ್ದೇನೆ. ನನಗಿಷ್ಟ ಬಂದಂತೆ ನನ್ನ ಭವಿಷ್ಯವನ್ನು ರೂಪಿಸಿಕೊಳ್ಳುವ ಹಕ್ಕು ನನಗೊಬ್ಬಳಿಗೇ ಸೇರಿದ್ದು. ನಾನು ಸಂಪ್ರದಾಯಕ್ಕೆ ಮಣಿಯಲಾರೆ. ಮನೆತನದ ಗೌರವವನ್ನುಳಿಸುವ ಸೋಗಿನಲ್ಲಿ ಆತ್ಮ ವಂಚನೆ ಮಾಡಿಕೊಳ್ಳಲಾರೆ."

"ನೀನು ಯಾರ ಹತ್ರ ಮಾತಾಡ್ತಿದ್ದೀಯಾನ್ನೋದು ನಿನಗೆ ಪ್ರಜ್ಞೆಯಿದೆಯೇ ಚಂದ್ರಾ."

"ಖಂಡಿತ ಇದೆ. ನಾನಾಡುತ್ತಿರುವ ಪ್ರತಿಯೊಂದು ಮಾತನ್ನೂ ಆಳವಾಗಿ ಆಲೋಚನೆ ಮಾಡಿಯೇ ಹೇಳುತ್ತಿದ್ದೇನೆ. ಇದರ ಆಗುಹೋಗುಗಳ ಹೊಣೆಗಾರಿಕೆಯೆಲ್ಲಾ ನನಗೆ ಸೇರಿದ್ದು."

"ಸರಿ ಹಾಗಾದ್ರೆ. ಇನ್ನು ನಿನ್ನ ದಾರಿ ನಿನ್ನದು. ಮಾವ-ಸೊಸೆಯೆಂಬ ಸಂಬಂಧ ಈವತ್ತಿಗೆ ಹರಿಯಿತು."

"ಚಿಂತೆಯಿಲ್ಲ ಮಾವಯ್ಯ. ಬಂದುದನ್ನ ಕೆಚ್ಚಿನಿಂದ ಎದುರಿಸುತ್ತೇನೆ."

ಚಂದ್ರವದನೆ ಉದ್ವಿಗ್ನಳಾಗಿ ಧಡ ಧಡನೆಂದು ಮಹಡಿ ಹತ್ತಿದಳು. ಮಹಾಬಲಯ್ಯ ತಮಗುಂಟಾದ ಅಪಮಾನದಿಂದ ಕ್ರುದ್ಧರಾಗಿ ಹಾಲಿನಲ್ಲಿ ಶತಪಥ ತಿರುಗಾಡ ತೊಡಗಿದರು.

## ೩೧

ರಾತ್ರಿ ಒಂಭತ್ತು ಗಂಟೆಯಾಗಿದ್ದರೂ ಚಂದ್ರವದನೆಯ ಪ್ರಯಾಣ ಸಿದ್ಧತೆಗಳು ಮುಗಿದಿರಲಿಲ್ಲ. ಚಂದ್ರವದನೆ ತನ್ನ ಕೊಠಡಿಯಲ್ಲಿ ಬಹಳ ಸಂಭ್ರಮದಿಂದ ಓಡಾಡುತ್ತಿದ್ದಾಳೆ. ಕೊಠಡಿಯೆಲ್ಲಾ ಅಸ್ತವ್ಯಸ್ತವಾಗಿ ಹೋಗಿದೆ. ಪುಸ್ತಕಗಳು ಚೆಲ್ಲಾಪಿಲ್ಲಿಯಾಗಿ ಹರಡಿವೆ. ಒಂದು ಕಡೆ ಅವಳ ದಿನಗಟ್ಟಳೆಯ ಸೀರೆ ಕುಬಸಗಳು ಗುಡ್ಡೆಯಾಗಿ ಬಿದ್ದಿವೆ. ಅವಳ ದೊಡ್ಡ ಟ್ರಂಕು ತೆರೆದಿದೆ. ಪ್ರಯಾಣಕ್ಕೆ ಯಾವ ಯಾವ ಸೀರೆ ಕುಬಸಗಳನ್ನು ತೆಗೆದುಕೊಳ್ಳಬೇಕೆಂಬುದೇ ಅವಳಿಗೆ ಸಮಸ್ಯೆಯಾಗಿ ಹೋಗಿದೆ. ಶ್ರೀಮಂತರ ಮಗಳಾದ್ದರಿಂದ ಅವಳಿಗೆ ಯಾವುದೊಂದಕ್ಕೂ ಕೊರತೆಯಿದ್ದಿರಲಿಲ್ಲ. ಸುರಮಾಬಾಯಿ ಒಬ್ಬಳೇ ಮಗಳೆಂದು ಅವಳನ್ನು ಬಹಳ ಮುದ್ದಿನಿಂದಲೇ ಬೆಳೆಸಿದ್ದರು. ಚಂದ್ರವದನೆ ವರ್ಷದ ಮಗುವಾಗಿದ್ದಾಗಲೇ ಹಿರಣ್ಣಯ್ಯ ತೀರಿಕೊಂಡರು. ಮನೆಯ ಕಳಶ ಕಳಚಿಬಿತ್ತು. ಮನೆಯಲ್ಲಿ ಗಂಡು ದಿಕ್ಕು ಯಾರೂ ಇದ್ದಿರಲಿಲ್ಲ. ಸುರಮಾಬಾಯಿಗೆ ಗಂಡ ಸಂಪಾದಿಸಿಟ್ಟ ಆಸ್ತಿಯ ಜತೆಗೆ ತೌರುಮನೆಯಿಂದಲೂ ತಕ್ಕಮಟ್ಟಿಗೆ ಭೂಮೀ ಕಾಣೀ ಬಳುವಳಿಯಾಗಿ ಬಂದಿತ್ತು. ಮೈಸೂರಿನ ಸಮೀಪದಲ್ಲೇ ಇಪ್ಪತ್ತೈಕರೆ ತರೀ ಜಮೀನು ಅವರಿಗೆ ಲಭಿಸಿತ್ತು. ಸರಸ್ವತೀಪುರದಲ್ಲಿದ್ದ ಮನೆಯೂ ಅವರಿಗೆ ತೌರುಮನೆಯಿಂದ ಬಂದ ಬಳುವಳಿಯೇ ಆಗಿತ್ತು. ಇವಲ್ಲದೆ ಬ್ಯಾಂಕಿನಲ್ಲಿ ಇಪ್ಪತ್ತು ಸಾವಿರ ರೂಪಾಯಿಗಳ ನಗದು ಜಮಾವಣೆಯಾಗಿತ್ತು. ಇಷ್ಟೆಲ್ಲಾ ಲಕ್ಷ್ಮೀಕಟಾಕ್ಷವಿರುವಾಗ ಚಂದ್ರವದನೆಗೆ ಯಾವುದಕ್ಕೇನು ಕೊರತೆ. ಅದರಲ್ಲೂ ಒಬ್ಬಳೇ ಮಗಳು. ಅಂತೆಯೇ ಮಗಳು ನಡೆದರೆಲ್ಲಿ ಸವೆದು ಹೋಗುತ್ತಾಳೋ ಎಂದು ಬಹಳ ಮುದ್ದಿನಿಂದ ಬೆಳೆಸಿದ್ದರು ಸುರಮಾಬಾಯಿ.

ಹಿರಣ್ಣಯ್ಯ ತೀರಿಕೊಂಡ ಮೇಲೆ ಅಣ್ಣತಮ್ಮಂದಿರ ಜಗಳಗಳಿಗೆ ಆರಂಭವಾಗಿ ಹೋಯಿತು. ಅದುವರೆಗೂ ಅವಿಭಕ್ತ ಕುಟುಂಬದಲ್ಲಿದ್ದ ಅಣ್ಣತಮ್ಮಂದಿರು ಆಸ್ತಿಯ ವಿಭಜನೆಗೆ ತಕರಾರುಗಳನ್ನು ಎಬ್ಬಿಸಿದರು. ವ್ಯವಹಾರ ಕೋರ್ಟುಕಚೇರಿಗಳ ತನಕ ಹೋಯಿತು. ಹೆಣ್ಣು ಹೆಂಗಸು ಸುರಮಾಬಾಯಿಯೊಬ್ಬಳೇ ಏನುಮಾಡುತ್ತಾಳೆ. ಆಕೆಯ ಕಡೆ ನಿಂತು

ಆಕೆಗೆ ನ್ಯಾಯವಾಗಿ ಸಲ್ಲಬೇಕಾಗಿದ್ದ ಆಸ್ತಿಯ ಭಾಗಕ್ಕೆ ಹೊಡೆದಾಡುವ ಗಂಡು ದಿಕ್ಕು ಯಾರೂ ಇದ್ದಿರಲಿಲ್ಲ. ಹೊಟ್ಟೆಯಲ್ಲಿ ಹುಟ್ಟಿದ ಚೋಟುದ್ದ ಮಗನಾದರೂ ಇದ್ದಿದ್ದರೆ ಅದರ ರೀತಿಯೇ ಬೇರೆಯಾಗಿತ್ತು. ಆದರೆ ಸುರಮಾಬಾಯಿಗೆ ಆ ಭಾಗ್ಯವಿರಲಿಲ್ಲ.

ಹಿರಣ್ಣಯ್ಯ ಸ್ವರ್ಗಸ್ಥರಾದ ಸ್ವಲ್ಪ ದಿನಗಳಲ್ಲೇ ಅವರ ತಮ್ಮಂದಿರು ವ್ಯಾಜ್ಯಗಳನ್ನು ಹೂಡಿ ತಮ್ಮ ತಮ್ಮ ಕೈಲಾದಷ್ಟು ಆಸ್ತಿಯನ್ನು ದೋಚಿ ಕೊಂಡುಬಿಟ್ಟರು. ತಮಗೆ ಬೇಕಾದ ಹಾಗೆ ಕರಾರು ಪತ್ರಗಳನ್ನು ಬರೆದು ಅವುಗಳಿಗೆ ಏನೂ ಅರಿಯದ ಸುರಮಾಬಾಯಿಯ ರುಜು ಪಡೆದುಕೊಂಡರು. ಹೀಗಾಗಿ ನ್ಯಾಯವಾಗಿ ಸಲ್ಲಬೇಕಾಗಿದ್ದ ಆಸ್ತಿಯಲ್ಲೂ ಬಹುಮಟ್ಟಿಗೆ ಸುರಮಾಬಾಯಿಯ ಕೈಬಿಟ್ಟುಹೋಯಿತು.

ತಮ್ಮ ತಂಗಿಗೆ ನಡೆಯುತ್ತಿರುವ ಅನ್ಯಾಯವನ್ನು ನೋಡಲಾರದೆ ಮಹಾಬಲಯ್ಯನವರಾಗ ಮುಂದೆ ಬಂದರು. ತಮ್ಮ ತಂಗಿಯ ಪರವಾಗಿ ನಿಂತು ಹೊಡೆದಾಡಿ ಆಕೆಗೆ ಬರಬೇಕಾಗಿದ್ದ ಆಸ್ತಿಯ ವಿಭಾಗವನ್ನು ದಕ್ಕಿಸಿ ಕೊಂಡರು. ಈ ಸಮಯದಲ್ಲಿ ಮಹಾಬಲಯ್ಯ ಸಹಾಯ ಮಾಡದಿದ್ದರೆ ಸುರಮಾಬಾಯಿಯ ಗತಿ ಏನಾಗುತ್ತಿತ್ತೋ ಹೇಳಲಶಕ್ಯ.

ಹೀಗೆ ಮಹಾಬಲಯ್ಯ ಅತಿಪ್ರಯಾಸದಿಂದ ಸಂಪಾದಿಸಿದ ಭೂಮೀ ಕಾಣಿ, ಒಡವೆ ವಸ್ತ್ರಗಳನ್ನು ಜೋಪಾನ ಮಾಡುವ ಜವಾಬ್ದಾರಿಯನ್ನು ಸುರಮಾಬಾಯಿ 'ಹೆಣ್ಣು ಹೆಂಗಸು ನಾನು, ನನಗೇನು ತಿಳಿಯುತ್ತೆ. ಎಲ್ಲಾ ನೀನೇ ನೋಡಿಕೋ' ಎಂದು ತಮ್ಮಣ್ಣನಿಗೇ ವಹಿಸಿಬಿಟ್ಟಳು.

ಮಹಾಬಲಯ್ಯ ವ್ಯವಹಾರ ಪ್ರಪಂಚದಲ್ಲಿ ಚೆನ್ನಾಗಿ ನುರಿತವರಾದ್ದ ರಿಂದ ತಂಗಿಯ ಆಸ್ತಿಯ ವಿತರಣೆಯನ್ನು ಸಮರ್ಪಕವಾದ ರೀತಿಯಲ್ಲಿ ನಡಿಸಿದರು. ದಿಕ್ಕಿಲ್ಲದೆ ಪಾಳು ಬಿದ್ದಿದ್ದ ಜಮೀನನ್ನು ಸ್ಥಳದಲ್ಲಿಯೇ ನಿಂತು ಚೆನ್ನಾಗಿಯೇ ಸಾಗುವಳಿ ಮಾಡಿಸಿದರು. ತಮ್ಮ ಭಾವನವರು ತೆಗೆದು ಕೊಂಡಿದ್ದ ಇನ್ಸೂರೆನ್ಸ್ ಪಾಲಿಸಿಗಳಿಂದ ಬಂದ ಹಣವನ್ನೆಲ್ಲಾ ದೀರ್ಘಕಾಲಾ ವಧಿಯ ಬಡ್ಡಿಗೆ ಬ್ಯಾಂಕುಗಳಲ್ಲಿ ಭದ್ರಪಡಿಸಿದರು. ಪುನಃ ತಮ್ಮ ತಂಗಿಯ ಆಸ್ತಿಗೆ ಯಾರೂ ತಕರಾರು ಹೂಡದ ಹಾಗೆ ಕಾಗದ ಪತ್ರಗಳನ್ನು ಮಾಡಿ ಬಿಟ್ಟರು. ಒಟ್ಟಿನಲ್ಲಿ ಸುರಮಾಬಾಯಿಯಮನೆಯ ಸಂಪೂರ್ಣ ಯಾಜಮಾನ್ಯ

ವನ್ನು ಮಹಾಬಲಯ್ಯ ವಹಿಸಿಕೊಂಡರು. ಯಾವುದೊಂದನ್ನೂ ಅಣ್ಣನ ಕಿವಿಗೆ ಹಾಕದೆ ತಾನೇ ಪೆತ್ತವಹಿಸುತ್ತಿರಲಿಲ್ಲ ಸುರಮಾಬಾಯಿ. ಹಣಕಾಸಿನ ವಿಚಾರವೊಂದೇ ಅಲ್ಲದೆ ಗೃಹಕೃತ್ಯದ ಪ್ರತಿಯೊಂದು ವ್ಯವಹಾರದಲ್ಲೂ ಮಹಾಬಲಯ್ಯನ ತೀರ್ಪೇ ಕೊನೆಯದು. 'ನಮ್ಮ ಕಷ್ಟಸುಖಕ್ಕಾಗೋವನು ನಿಮ್ಮ ಮಾವ. ನಮ್ಮಿಬ್ಬರಿಗೂ ಅವನೇ ಯಜಮಾನ. ನೀನೂ ಅವನು ಹೇಳಿದ ಹಾಗೆ ಕೇಳಿಕೊಂಡಿರಬೇಕು' ಎಂಬುದಾಗಿ ಸುರಮಾಬಾಯಿ ಮಗಳಿಗೆ ಪದೇ ಪದೇ ಮನದಟ್ಟು ಮಾಡಿಸುತ್ತಿದ್ದರು

ಇತ್ತೀಚೆಗೆ ತಮ್ಮ ಗೃಹಕೃತ್ಯದಲ್ಲಿ ತಲೆದೋರಿದ ವಿರಸ ವಾತಾವರಣದಿಂದ ಸುರಮಾಬಾಯಿಯ ಅಂತಃಕರಣ ಕಲಕಿಹೋಯಿತು. ತಮ್ಮ ಮಗಳ ಭವಿಷ್ಯದ ಚಿಂತೆಯನ್ನು ತಲೆಗೆಹತ್ತಿಸಿಕೊಂಡು ಸದಾ ಕೊರಗತೊಡಗಿದರು. ಹೀಗಾಗಿ ಅವರಲ್ಲಿ ಚಿತ್ತಸ್ವಾಸ್ಥ್ಯವೆಂಬುದು ಲವಲೇಶವೂ ಉಳಿದಿರಲಿಲ್ಲ. ತಮ್ಮ ಮಗಳ ಸ್ವತಂತ್ರ ಮನೋವೃತ್ತಿ, ಮುಗ್ಧ ಸ್ವಭಾವ, ನಾಲ್ಕು ಜನರೊಂದಿಗೆ ಕಲಿತು ಓಡಾಡಿ ಅವರವರ ಮರ್ಜಿಯನ್ನನುಸರಿಸಿಕೊಂಡು ಹೋಗಿ ಎಲ್ಲರ ವಿಶ್ವಾಸವನ್ನು ಗಳಿಸಿಕೊಳ್ಳುವ ನೈಪುಣ್ಯ, ಕಾಲೇಜಿನ ವಿವಿಧ ಚಟುವಟಿಕೆಗಳಲ್ಲಿ ಅವಳು ವಹಿಸುತ್ತಿದ್ದ ಪ್ರಧಾನ ಪಾತ್ರ ಇವೆಲ್ಲವನ್ನೂ ತಮ್ಮ ಮನಸ್ಸಿನಲ್ಲೇ ಮೆಲುಕು ಹಾಕತೊಡಗುವರು. ಹಾಗೆ ಮಾಡಿದಾಗಲೆಲ್ಲಾ ತಮ್ಮ ಮಗಳ ಬಗ್ಗೆ ಅವರಿಗೆ ಹೆಮ್ಮೆಯೆನಿಸುವುದು. ಅವಳು ಸರಿಯಾದ ದಾರಿಯಲ್ಲೇ ಇದ್ದಾಳೆ. ಅವಳದೇನು ತಪ್ಪಿದೆ ಎಂದುಕೊಳ್ಳುವರು. ಮರುಕ್ಷಣದಲ್ಲೇ ತಮ್ಮಣ್ಣ ತಮ್ಮ ಮಗಳ ಬಗ್ಗೆ ತಳೆಯುತ್ತಿರುವ ಮನೋಭಾವ, ತೋರಿಸುತ್ತಿರುವ ತಾತ್ಸಾರ, ಒಟ್ಟಿನಲ್ಲಿ ಅವಳ ನಡೆ, ನುಡಿಗಳ ಬಗ್ಗೆ ಅವರಲ್ಲುದಿಸಿರುವ ಸಂಶಯ ಮನೋವೃತ್ತಿ ಇವೆಲ್ಲವನ್ನೂ ನೆನೆದು ಚಿಂತಾಕ್ರಾಂತರಾಗುವರು. ತಮ್ಮ ಗೃಹಕೃತ್ಯದ ಆಗುಹೋಗುಗಳೆಲ್ಲವೂ ತಮ್ಮಣ್ಣನನ್ನೇ ಅವಲಂಬಿಸಿದೆಯೆಂಬುದನ್ನಂತೂ ಅವರು ಮರೆಯುವ ಹಾಗೇ ಇರಲಿಲ್ಲ. ಮಾವ ಸೊಸೆಯರಿಬ್ಬರಿಗೂ ಮನೆಯಲ್ಲಿ ನಡೆದ ವಾಗ್ವಾದ-ಅವರು ವ್ಯಕ್ತಪಡಿಸಿದ ಭಿನ್ನಾಭಿಪ್ರಾಯಗಳು, ಅದರ ಫಲವಾಗಿ ಇಬ್ಬರಲ್ಲೂ ಉದಿಸಿದ ಮನಃಕಷಾಯ ಇವೆಲ್ಲವನ್ನೂ ನೆನೆದು ಮುಂದೆ ಏನೋ ವಿಪತ್ತು ಎದುರಿದೆಯೆಂದು ಯೋಚಿಸ ತೊಡಗುವರು ತಮ್ಮಣ್ಣನೊಂದಿಗೆ ವಿರೋಧ

ಕಟ್ಟಿಕೊಳ್ಳುವ ಹಾಗಿಲ್ಲ. ಇತ್ತ ಮಗಳ ಮನಸ್ಸನ್ನು ನೋಯಿಸಲಿಷ್ಟವಿಲ್ಲ. ಹೀಗೆ ಇಬ್ಬಗೆಯಾಗಿ ಹೊಯ್ದಾಡುತ್ತಿತ್ತು ಸುರಮಾಬಾಯಿಯ ಮನಸ್ಸು. ಆಕೆಯ ಚಿಂತೆ ಒಂದಲ್ಲ ಎರಡಲ್ಲ ನೂರಾರು. ಅದಕ್ಕೆ ಪರಿಹಾರವೇ ಇದ್ದ ಹಾಗೆ ಕಂಡುಬರಲಿಲ್ಲ.

ಚಂದ್ರವದನೆ ಪ್ರಯಾಣದ ಸಿದ್ಧತೆಗಳನ್ನೆಲ್ಲಾ ಮುಗಿಸಿ ತನ್ನ ತಾಯಿಯಿದ್ದ ಕೊಠಡಿಗೆ ಹೋದಳು. ಸುರಮಾಬಾಯಿಗಿನ್ನೂ ನಿದ್ದೆ ಹತ್ತಿರಲಿಲ್ಲ.

"ಯಾಕಮ್ಮಾ ಇನ್ನೂ ನಿದ್ದೆ ಬರಲಿಲ್ವೇ. ಹನ್ನೊಂದು ಹೊಡೀತಲ್ಲಾ." ತನ್ನ ರಿಸ್ಟ್‌ವಾಚಿನ ಕಡೆನೋಡುತ್ತಾ ಕೇಳಿದಳು ಚಂದ್ರವದನೆ.

"ಯಾಕೋ ನಿದ್ದೆಯೇ ಬರದು ಚಂದ್ರಾ. ಸರಿಯಾಗಿ ನಿದ್ದೆಮಾಡಿ ಅದೆಷ್ಟೋ ದಿನಗಳಾಗಿ ಹೋದುವು."

"ನೀನು ಮನಸ್ಸಿಗೇನೂ ಹಚ್ಚಿಕೋ ಬೇಡಮ್ಮಾ. ಬಂದದ್ದನ್ನ ಅನುಭವಿಸಿಯೇ ತೀರಬೇಕು. ಸುಮ್ನೇ ಯೋಚ್ನೆ ಮಾಡ್ತಾ ಕೂತ್ರೆ ಆಗುತ್ಯೇ."

"ನಿಮ್ಮ ಮಾವನ ಜತೇಲಿ ನೀನು ಹಾಗೆಲ್ಲಾ ಹುಚ್ಚಾಪಟ್ಟೆ ಮಾತಾಡ ಬಾರದಾಗಿತ್ತು ಚಂದ್ರಾ. ಸ್ವಲ್ಪ ದುಡಿಕಿಬಿಟ್ಟೆ. ಸ್ವಲ್ಪ ಬಾಯಿ ಬಿಗೀ ಹಿಡಿಯಬೇಕಿತ್ತು. ನಿಮ್ಮ ಮಾವನಿಗೆ ಕೋಪ ಬಂದ್ರೆ ಅವನು ಮನುಷ್ಯನೇ ಅಲ್ಲ. ನೀನ್ಯೇನೋ ಹುಡುಗಿ; ಆಡೋದು ಆಡಿಬಿಟ್ಟೆ. ಮುಂದೇನು ಗತೀಂತ ನನಗೆ ದಿಗಿಲಾಗುತ್ತಿದೆ."

"ಯಾಕಮ್ಮಾ ಭಯಪಡ್ತೀಯ. ಭಯಪಡೋಷ್ಟು ಏನಪರಾಧಮಾಡಿ ಬಿಟ್ಟಿದ್ದೀವಿ. ಮಾವ ಈ ವಿಚಾರದಲ್ಲೆಲ್ಲಾ ತಲೇ ಹಾಕಿಕೊಂಡು ಬರಬಾರದು. ನಾನು ಕಾಲೇಜಿಗೆ ಹೋಗೋಕ್ಕೆ ಮಾವನದೇನು ಆಕ್ಷೇಪಣೆ. ಅದ್ಯೇಕೆ ಮಾವ ನನ್ನ ಕಾಲೇಜಿಗೆ ಹೋಗಬೇಡಾಂತ ಹೇಳಿದನೋ ನನಗರ್ಥ ವಾಗ್ಲಿಲ್ಲ. ಯಾರಾದ್ರೂ ನನ್ನ ಮೇಲೆ ಮಾವನಿಗೆ ಚಾಡೀ ಹೇಳಿರ ಬಹುದೂಂತೀನಿ."

"ಏನೋಮ್ಮಾ, ನನಗೊಂದೂ ತಿಳೀದು. ಮುಖ್ಯ ಅವನ ಮನಸ್ಸು ಕೆಡಿಸಿಬಿಟ್ಟೆ. 'ಮಾತು ಆಡಿಹೋಯಿತು; ಮುತ್ತು ಒಡೆದುಹೋಯಿತು'

ಅನ್ನೋಹಾಗೆ ಕಾರ್ಯ ಮಿಂಚಿಹೋಯಿತು. ನಿಮ್ಮ ಮಾವ ಇದನ್ನೇ ಮನಸ್ಸಲ್ಲಿಟ್ಟುಕೊಂಡು ದ್ವೇಷ ಸಾಧಿಸಿದರೆ ನಮ್ಮ ಗತಿ ಏನೂಂತ ನನಗೆ ದಿಗಿಲಾಗತ್ತೆ. ನನಗಂತೂ ದಿಕ್ಕೇ ತೋಚೋಲ್ಲ."

"ನೀನ್ಯೇನೂ ಭಯಪಡಬೇಡಮ್ಮ. ಏನೂ ಆಗೋಲ್ಲ. ನಿಶ್ಚಿಂತೆ ಯಾಗಿರು."

"ನಿನಗಿರೋ ಧೈರ್ಯ ನನಗಿಲ್ಲ ಚಂದ್ರಾ. ಅದಕ್ಕೇ ಹೀಗೆ ಒದ್ದಾಡಿ ಕೊಳ್ತೀನೆ."

"ನಾಳೆ ಬೆಳಿಗ್ಗೆ ನಾನು ಹಳ್ಳಿಗೆ ಹೊರಡಬೇಕೆಂದಿದ್ದೀನಮ್ಮಾ."

"ಇದ್ಯೇನೇ ಚಂದ್ರಾ. ರಾತ್ರಿಯೆಲ್ಲಾ ರಾಮಾಯಣಕೇಳಿ ಬೆಳಗಾಗು ತ್ತಲೂ ರಾಮನಿಗೂ ಸೀತೆಗೂ ಸಂಬಂಧವೇನೂಂತ ಕೇಳಿದರಂತೆ ಯಾರೋ ಪುಣ್ಯಾತ್ಮರು. ಇಷ್ಟುಹೊತ್ತೂ ನಾವು ಮಾತಾಡಿದ್ದೇನು. ಈಗ ನೀನು ಹೇಳ್ತಿರೋದೇನು. ಪುನಃ ನೀನು ಹಳ್ಳಿಗೆ ಹೋದ ಸಮಾಚಾರ ತಿಳಿದ್ರೆ ನಿಮ್ಮ ಮಾವ ಸುಮ್ನೇಇರ್ತಾನೇನೇ. ನಿನ್ನ ಧೈರ್ಯವೇ ಧೈರ್ಯ !"

"ಧೈರ್ಯವಿಲ್ಲದೇ ಏನಮ್ಮಾ. ಕಾಲೇಜು ಹುಡುಗರ ಜತೇಲಿ ಓಡಾಡ ಬೇಡ. ಅವರ ಸಂಪರ್ಕವಿಟ್ಟುಕೊಳ್ಳಬೇಡಾಂತ ಹೇಳಲು ನಾನು ಮಾಡಿರುವ ತಪ್ಪಾದರೂ ಏನು? ನಾನ್ಯೇನು ನಡತೇ ತಪ್ಪಿಹೋಗಿರೋದು ? ಕಾರಣ ವಿಲ್ಲದೆ ಮಾವನೇಕೆ ನನ್ನಮೇಲೆ ಕತ್ತಿಕಟ್ಟಿ ನಿಂತಿದ್ದಾನೆ ! ನನಗೊಂದೂ ಅರ್ಥವಾಗುತ್ತಿಲ್ಲ. ನಾನಂತೂ ನಾಳೆ ಬೆಳಿಗ್ಗೆ ಊರಿಗೆ ಹೊರಡೋದು ಖಂಡಿತ. ಈಗ ಹೇಗೂ ನಿನಗೆ ಗುಣಮುಖವಾಗುತ್ತಿದೆ. ಬೋರ ಷಾಪಿನಿಂದ ಔಷಧೀತಂದು ಕೊಡ್ತಾನೆ. ಅಡಿಗೇಕೆಲಸಕ್ಕೆ ಸಾವಿತ್ರಮ್ಮ ಇದ್ದಾರೆ. ನಾನು ಇಲ್ಲಿದ್ದು ಮಾಡಬೇಕಾದ್ದೇನೂ ಇಲ್ಲ. ಹಳ್ಳಿಗಾದ್ರೂ ಹೋದ್ರೆ ಏನಾದ್ರೂ ಕೆಲಸ ಮಾಡಬಹುದು."

"ನಿನ್ನಿಷ್ಟಾವಮ್ಮಾ ಚಂದ್ರಾ. ಹೆಚ್ಚಿಗೆ ಹೇಳಲು ನನ್ನಿಂದ ಸಾಧ್ಯವಿಲ್ಲ. ನೀನ್ಯೇನೂ ಎಳೇ ಮಗುವಲ್ಲ. ನಿನ್ನ ಜವಾಬ್ದಾರಿ ನಿನಗೆ ಗೊತ್ತಿದೆ."

"ಹಾಗೇಂತ ನಿಶ್ಚಿಂತೆಯಾಗಿದ್ದುಬಿಡು. ಎಲ್ಲಾ ಸರಿಹೋಗುತ್ತೆ."

ಸುರಮಾಬಾಯಿಗೆ ಹೆಚ್ಚಿಗೆ ಮಾತು ಬೆಳೆಸಲಿಷ್ಟವಿರಲಿಲ್ಲ. ಚಂದ್ರವದನೆಗೂ ಅಷ್ಟೆ. ಪ್ರಯಾಣಕ್ಕೆ ತನ್ನ ತಾಯಿಯ ಸಮ್ಮತಿ ದೊರಕಿಸಿಕೊಂಡು ಅವಳು ತನ್ನ ಕೊಠಡಿಗೆ ಹೊರಟುಹೋದಳು. ಹಾಸಿಗೆಯ ಮೇಲೆ ಪವಡಿಸಿದಳು. ಅವಳ ತಲೆಯಲ್ಲಿ ಒಮ್ಮೆಲೇ ನೂರಾರು ಚಿಂತೆಗಳು ಧಾಳಿಯಿಟ್ಟವು. ತತ್ಪರಿಣಾಮವಾಗಿ ನಿದ್ದೆ ಅವಳಿಂದ ದೂರ ಸರಿಯಿತು.

"ನಾನು ಹಳ್ಳಿಯಲ್ಲಿಲ್ಲವೆಂದು ನಡೆಯೋಕೆಲಸವೇನೂ ನಿಂತುಹೋಗಿಲ್ಲ. ಶ್ರೀಧರನಿಗೆ ಒತ್ತಾಸೆಯಾಗಿ ಅವನ ಗೆಳೆಯರು ಸೊಂಟಕಟ್ಟಿ ನಿಂತಿದ್ದಾರೆ. ಆದರೆ ನನ್ನಿಂದಲೂ ಯತ್ಕಿಂಚಿತ್ ಜನತಾಸೇವೆ ಸಲ್ಲುವುದಾದರೆ ನಾನ್ಯೇಕೆ ಬೇಡವೆನ್ನಬೇಕು. ಸಮಾಜ ಸೇವೆಮಾಡಲು ಅನಾಯಾಸವಾಗಿ ದೊರೆತಿರುವ ಅವಕಾಶವನ್ನೇಕೆ ಬಿಟ್ಟುಕೊಡಬೇಕು. ಇಂತಹ ಅವಕಾಶ ಮುಂದೆ ಲಭಿಸುವುದೋ ಇಲ್ಲವೋ ಯಾರಿಗೆಗೊತ್ತು. ಅದಕ್ಕಿಂತ ಹೆಚ್ಚಾಗಿ ಶ್ರೀಧರನೊಂದಿಗೆ ಕೆಲಸಮಾಡುವುದರಲ್ಲಿ ನನಗೊಂದುಬಗೆಯ ಆನಂದ ಲಭಿಸುತ್ತದೆ. ಅವನ ಸಹವಾಸದಲ್ಲಿದ್ದರೆ ಮನಸ್ಸಿಗೆ ಅಪೂರ್ವವಾದ ಸಂತೋಷವುಂಟಾಗುತ್ತದೆ. ಶಾಂತಿ ದೊರೆಯುತ್ತದೆ. ಅವನೊಡನೆ ಮಾತುಕತೆಯಾಡುತ್ತಿದ್ದರೆ ಹೊತ್ತುಹೋಗುವುದೇ ತಿಳಿಯೋಲ್ಲ. ಅವನಾಡುವ ಪ್ರತಿಯೊಂದು ಮಾತೂ ಅಂತಃಕರಣದಿಂದ ಚಿಮ್ಮಿಬರುತ್ತದೆ. ವ್ಯರ್ಥವಾಗಿ ಒಂದು ಮಾತನ್ನೂ ಅವನಾಡುವುದಿಲ್ಲ. ಅವನ ಪ್ರತಿಯೊಂದು ಮಾತೂ ತೂಕವುಳ್ಳದ್ದು. ತನ್ನದೇ ಆದ ವಿಚಾರ ಸರಣಿಯನ್ನು ಬೆಳೆಸಿಕೊಂಡಿದ್ದಾನೆ. ಯಾವುದೊಂದನ್ನೂ ತನ್ನ ಸ್ವಂತ ವಿಚಾರ ಸರಣಿಯ ಒರೆಗಲ್ಲಿಗೆ ಹಚ್ಚಿ ನೋಡಿದಲ್ಲದೆ ಬಡಪೆಟ್ಟಿಗೆ ಒಪ್ಪುವವನಲ್ಲ. ಪ್ರತಿಯೊಂದು ಸಮಸ್ಯೆಯನ್ನೂ ಆಳವಾಗಿ ಅಭ್ಯಾಸಮಾಡುವುದು ಅವನ ವಿಶಿಷ್ಟಗುಣ.

ನನ್ನಂತೆಯೇ ಅವನವೂ ಸ್ವತಂತ್ರ ಮನೋವೃತ್ತಿ. ಕಪಟಕೃತ್ರಿಮಗಳನ್ನರಿಯದ ಋಜುಸ್ವಭಾವ. ದಾಕ್ಷಿಣ್ಯಪರ. ಸ್ನೇಹಪರ. ನಮ್ಮಿಬ್ಬರ ಸ್ವಭಾವದಲ್ಲಿ, ಆಶೆ ಆಕಾಂಕ್ಷೆಗಳಲ್ಲಿ, ಧ್ಯೇಯ ಧೋರಣೆಯಲ್ಲಿ, ವಿಚಾರಸರಣಿಯಲ್ಲಿ ಬಹುಮಟ್ಟಿಗೆ ಸಾಮರಸ್ಯವಿದೆ. ಕೇವಲ ಎರಡುವರ್ಷಗಳ ಹಿಂದೆ ಇಬ್ಬರಿಗೂ ಪರಸ್ಪರ ಪರಿಚಯವಾಯಿತು. ಅದರಲ್ಲೂ ಈಗೊಂದು ಆರು ತಿಂಗಳಹಿಂದೆ ಪರಿಚಯ ಬಲಿತು ಸ್ನೇಹವಾಗಿ ಪರಿಣಮಿಸಿತು. ಸ್ನೇಹವೆಂಬಿವ

ಅಂತಿಂತಹುದಲ್ಲ. ಸ್ವರ್ಗೀಯವಾದ ಸ್ನೇಹ. ಈ ಅವಧಿಯಲ್ಲಿ ಒಬ್ಬರ ಹೃದಯವನ್ನೊಬ್ಬರು ಚೆನ್ನಾಗಿ ಅರಿತುಕೊಳ್ಳಬಹುದಾದ ಸಂದರ್ಭಗಳು ನೂರಾರು ಒದಗಿದವು. ಕಾಲೇಜು ಮೆಟ್ಟಲು ತುಳಿದಾಗಿನಿಂದಲೂ ಒಬ್ಬರಿಗೊಬ್ಬರು ಒತ್ತಾಸೆಯಾಗಿ ನಿಂತು ಕಾಲೇಜಿನ ವಿವಿಧ ಕಾರ್ಯಕಲಾಪಗಳಲ್ಲಿ ಸರಿಸಮವಾಗಿ ಭಾಗವಹಿಸುತ್ತಾ ಬಂದಿದ್ದೇವೆ. ನೂರಾರು ಸಹಪಾಠಿಗಳ ಪೈಕಿ ನನ್ನ ಮನಸ್ಸಿಗೆ ಮೆಚ್ಚಿಗೆಯಾದವನು, ನನ್ನ ಸ್ವಭಾವವನ್ನು ಚೆನ್ನಾಗಿ ಬಲ್ಲವನು, ಹೆಚ್ಚೇನು ನನ್ನ ಹೃದಯಕ್ಕೆ ತೀರ ಹತ್ತಿರನಾದವನು ಶ್ರೀಧರನೊಬ್ಬನೇ. ಸದಾ ಅವನ ಸಹವಾಸ ಸಾನ್ನಿಧ್ಯಗಳಲ್ಲೇ ಇರಬೇಕೆಂದು ಮನಸ್ಸು ತುಡಿದುಕೊಳ್ಳುತ್ತದೆ. ಸದಾ ಅವನದೇ ಧ್ಯಾನವಾಗಿ ಹೋಗಿದೆ. ಇಪ್ಪತ್ನಾಲ್ಕು ಗಂಟೆಗಳೂ ಅವನೊಡನೆ ಸಂಭಾಷಣೆ ನಡೆಸಿದರೂ ನನ್ನ ಮನಸ್ಸಿಗೇನೋ ತೃಪ್ತಿಯೆಂಬುದಿಲ್ಲ. ಅವನ ಸಾನ್ನಿಧ್ಯದಲ್ಲಿರುವುದೇ, ಅವನ ದರ್ಶನ ಲಾಭ ಹೊಂದುವುದೇ ಒಂದು ಪೂರ್ವಜನ್ಮದ ಸುಕೃತ ವಿಶೇಷವೆಂದು ನನ್ನ ಭಾವನೆ. ಹೀಗೆ ಬೆಳೆದುಕೊಂಡು ಬಂದಿದೆ, ನಮ್ಮೀರ್ವರ ಸ್ನೇಹ. ಈ ಸ್ನೇಹ ಮುಂದೆ ಯಾವ ರೀತಿಯಲ್ಲಿ ಪರ್ಯವಸಾನವಾಗಲಿದೆಯೋ ತಿಳಿದವರಾರು! ನೂರುಮಾತೇಕೆ! ಶ್ರೀಧರ ನನ್ನ ಜೀವನದ ಸಂಗಾತಿಯಾಗಲು ಸರ್ವವಿಧಗಳಲ್ಲೂ ಯೋಗ್ಯನು. ಆದರೆ ನನಗೆ ಅವನ ಕೈ ಹಿಡಿಯುವ ಪುಣ್ಯವಿದೆಯೋ!! ಖಂಡಿತ ಇದೆಯೆಂದು ನನ್ನ ಆಶಾವಾದೀ ಮನಸ್ಸು ಹೇಳುತ್ತಿದೆ. ನಮ್ಮಂತಹ ಪ್ರಾಪಂಚಿಕರನ್ನು ಕುರಿತು ದಾಸರು ಒಂದೆಚ್ಚರಿಕೆಯ ಮಾತು ಹೇಳಿದ್ದಾರೆ. 'ಹರಿಚಿತ್ತಸತ್ಯ, ನರಚಿತ್ತ ನಡೆಯದು ಲವಲೇಶ' ಅಂತ. ದೈವಚಿತ್ತ ಹೇಗಿದೆಯೋ ಹೇಳಬಲ್ಲವರಾರು!'

ಚಂದ್ರವದನೆ ಇನ್ನೂ ಹೀಗೆಯೇ ಬಹಳ ಹೊತ್ತಿನವರೆಗೂ ಮೆಲುಕು ಹಾಕುತ್ತಿದ್ದಿರಬೇಕು. ತನ್ನ ಭವಿಷ್ಯದ ಹೊಂಗನಸುಗಳನ್ನು ನೇಯುತ್ತಿದ್ದಿರಬೇಕು. ಮರುದಿನ ಬೆಳಿಗ್ಗೆ ಪ್ರಯಾಣ ಬೇರೆ ಇಟ್ಟುಕೊಂಡಿದ್ದಳು. ಪ್ರಯಾಣದ ಹಿಂದಿನ ರಾತ್ರಿ ಯಾರಿಗಾದರೂ ನಿಶ್ಚಿಂತೆಯಾಗಿ ನಿದ್ದೆ ಬರುವುದುಂಟೇ. ಅದರಲ್ಲೂ ಚಂದ್ರವದನೆಯ ಬಗ್ಗೆ ಹೇಳುವುದೇನಿದೆ! ಯಾವಾಗ ಬೆಳಗಾದೀತೋ ಎಂದವಳು ಚಾತಕಪಕ್ಷಿಯಂತೆ ನಿರೀಕ್ಷಿಸುತ್ತಿದ್ದಳು. ಗಡಿಯಾರದ ಮುಳ್ಳು ತಿರುಗುತ್ತಿದ್ದಂತೆಲ್ಲಾ ಗಂಟೆಗಳುರುಳಿಹೋಗುತ್ತಿ

ದ್ದಂತೆಲ್ಲಾ ಅವಳ ಮನಸ್ಸಿನ ಆತಂಕ ಹೆಚ್ಚಾಗತೊಡಗಿತು. ಒಂದು ನವಚೇತನ ಅವಳ ಅಂಗಾಂಗಳಲ್ಲಿ ವಿದ್ಯುದ್ವೇಗದಿಂದ ಹರಿಯಲಾರಂಭಿಸಿತು. ಯಾವುದೋ ಹೊಸ ಹುರುಪು ಅವಳ ಹೃದಯವನ್ನು ಭಾರವಾಗಿಸಿತು. ಯಾವುದೋ ಅವ್ಯಕ್ತ ಅವರ್ಣನೀಯ ಆನಂದ ತರಂಗತರಂಗವಾಗಿ ಅವಳ ಹೃದಯದಲ್ಲಿ ಉಕ್ಕಿಬರುತ್ತಿತ್ತು. 'ನಾಳೆ ಬೆಳಿಗ್ಗೆ ಎಷ್ಟುಹೊತ್ತಿಗೆ ಹಳ್ಳಿ ಸೇರಿಯೇನು ಯಾವಾಗ ಶ್ರೀಧರನ ದರ್ಶನಮಾಡಿಯೇನು' ಎಂಬುದಾಗಿ ಅವಳ ಉದ್ವಿಗ್ನಪೂರ್ಣ ಹೃದಯ ನಿಮಿಷಕ್ಕೆ ನೂರುಸಲ ತುಡಿದುಕೊಳ್ಳುತ್ತಿತ್ತು. ಇಂತಹ ವಿಚಿತ್ರ ಅನುಭವಕ್ಕೆ ಪಕ್ಕಾದ ಚಂದ್ರವದನೆ ಇಡೀ ರಾತ್ರಿ ಜಾಗರಣೆ ಮಾಡಿಬಿಟ್ಟಳೆಂದು ಹೇಳಿದಲ್ಲಿ ಆಶ್ಚರ್ಯವೇನೂ ಇಲ್ಲವಷ್ಟೆ.

## ೩೩

ಸುಬ್ಬಣ್ಣ ಅದೇತಾನೇ ಕಚೇರಿಯಿಂದ ಬಂದಿದ್ದರು. ಬಂದವರೇ ಕೋಟು ರುಮಾಲುಗಳನ್ನು ಕಳಚಿ ಕೈ ಕಾಲು ತೊಳೆದುಕೊಂಡು ಹಾಲಿನಲ್ಲಿ ಬಂದು ಕೂತರು. ಮನೆಯಾಕೆ ಅವರ ಕಣ್ಣಿಗೆ ಬೀಳಲಿಲ್ಲ. 'ನಿಮ್ಮಮ್ಮಾ ಮನೇಲಿಲ್ವೇನೇ ಕಮಲೂ' ಎಂದು ಮಗಳನ್ನು ಪ್ರಶ್ನಿಸಿದರು. 'ರೂಮಲ್ಲಿ ಮಲಗಿದ್ದಾಳಣ್ಣಾ' ಎಂದುತ್ತರಿಸಿದಳು ಕಮಲೂ. ಸುಬ್ಬಣ್ಣ ನೆಟ್ಟಗೆ ರೂಮಿಗೆ ಹೋದರು. ಭಾಗ್ಯಮ್ಮ ಹಾಸಿಗೆಹಾಸಿ ಮಲಗಿಬಿಟ್ಟಿದ್ದರು. ತಲೆಗೆ ಬಟ್ಟೆಯೊಂದನ್ನು ಬಿಗಿದುಕೊಂಡಿದ್ದರು. ಸುಬ್ಬಣ್ಣ ಹೆಂಡತಿಯ ಹಾಸಿಗೆಯ ಹತ್ತಿರ ಹೋಗಿ, 'ಏಕೇ ಮಲಗಿಬಿಟ್ಟೇದ್ದೀಯಾ ! ಮೈಲಿ ಹುಷಾರಿಲ್ವೇನೇ' ಎಂದು ಕೇಳಿದರು. 'ಏಕೋ ಮಧ್ಯಾಹ್ನದಿಂದ ಹಾಳು ಒಂಟಿ ತಲೇನೋವು ಷುರುವಾಗಿದೇಂದ್ರೆ. ತಲೇ ಒಂದೇಸಮನೆ ಸಿಡಿದುಹೋಗ್ತಿದೆ.' ಎನ್ನುತ್ತಾ ಭಾಗ್ಯಮ್ಮ ಹಾಸಿಗೆಯ ಮೇಲೆದ್ದು ಕೂಡಲು ಯತ್ನಿಸಿದರು.

"ಏಳಬೇಡಾ ಮಲಕ್ಕೊಳ್ಳೇ. ಮನೇಲಿ ಅಮೃತಾಂಜನಾ ಇತ್ತಲ್ಲಾ. ಹಚ್ಚಿಕೊಂಡೇ ತಾನೇ. ಅಂಗಡಿಯಿಂದ ಆಸ್ಪ್ರೋನಾದ್ರೂ ತರಿಸಲೇನು ?"

"ಏನೂಬೇಡಾಂದ್ರೆ. ಅದಕ್ಕೆಲ್ಲಾ ನನ್ನ ತಲೇನೋವು ವಾಸಿಯಾಗೋಂಥಾದ್ದಲ್ಲ. ಇದು ನನ್ನ ಜನ್ಮಾಂತರಕ್ಕಂಟಿದ ಶನಿ."

"ಅದ್ಯೇಕೇ ಹಾಗಂತೀಯ. ಖಾಯಿಲೇಬಂದ್ರೆ ಅದರ ನಿವಾರಣೋಪಾಯ ಹುಡುಕದಿದ್ರೆ ಆಗುತ್ಯೇ."

"ಹೌದು. ಯಾರಲ್ಲಾಂದ್ರು. ನನಗೆ ಈ ಸುಟ್ಟ ತಲೆನೋವು ಷುರುವಾಗಿ ಎಲ್ಲಾದ್ರೂ ಐದಾರುವರ್ಷದ ಮೇಲಾಯಿತು. ಬೆಂಗಳೂರಿಗೆ ಹೋಗಿ ಕಣ್ಣು ಪರೀಕ್ಷೆಮಾಡಿಸಿಕೊಂಡು ಬರೋಣಾಂತ ನಾನು ಸಾವಿರ ಸಲ ನಿಮ್ಮುಂದೆ ಬಡುಕೊಂಡಿದ್ದೀನಿ. ನೀವೇನಾದ್ರೂ ನನ್ಮಾತು ಕಿವಿಗೆಹಾಕಿ ಕೊಂಡಿದ್ರೆ! ಏನೂ ತಿಳೀದೋರಹಾಗೆ ಈಗೇನೋ ಹೊಸದಾಗಿ ಕೇಳ್ತಿದ್ದೀರಲ್ಲಾ ನಿನ್ನ ಗೋಳು ಇದ್ದೇಇದೆ. ದಿನಾ ಸಾಯೋರಿಗೆ ಅಳೋರು ಯಾರೂಂತ. ನಿಮಗೆ ನನ್ನ ಖಾಯಿಲೇಂದ್ರೆ ತಾತ್ಸಾರ. ಈಗೊಂದು ವರ್ಷದಿಂದ ನನ್ನ ದೇಹಸ್ಥಿತಿ ತೀರಾ ಕೆಟ್ಟಿದೆ. ಅದೇನು ಹೊಟ್ಟೇನೋವೋ ಸುಡುಗಾಡು. ತಿಂಗಳು ತಿಂಗಳಿಗೆ ಸರಿಯಾಗಿ ಹೊರಗಾಗೋಲ್ಲ. ಹಾಸಿಗೆಯಿಂದೇಳುತ್ತಿದ್ದ ಹಾಗೆಯೇ ಷುರುವಾಗುತ್ತೇ ಹಾಳು ಹೊಟ್ಟೇನೋವು. ಹೀಗೆ ನಾನು ನರಳೀ ನರಳೀ ನವೆಯೋಕ್ಕಿಂತ' ಇರೋರಿಗೂ ಬೇಜಾರು ಮಾಡೋಕ್ಕಿಂತ ಬೇಗ ಕಣ್ಮುಚ್ಚಿಕೊಂಡರೆ ಸದ್ಯ ಸಾಕು. ನಾನು ದೇವರನ್ನ ಕೇಳಿಕೊಳ್ಳೋದು ಇದೊಂದೇ."

"ಛೆ! ಛೆ! ಎಂಥಾ ಕೆಟ್ಟಬಾಯೇ ನಿನ್ನದು! ಒಳ್ಳೇ ಲಕ್ಷಣವಾಗಿ ಬಾಳೀ ಬದುಕೋ ವಯಸ್ಸಲ್ಲಿ ಸಾವು-ಸಾವೂಂತ ಜಪಾಮಾಡ್ತೀಯಲ್ಲ. ಚೆನ್ನಾಗಿದೆ. ಏನೋ ಒಂದೆರಡುದಿನಾ ಆಸ್ಪತ್ರೇಗೆ ಹೋಗಿಬಂದ ಶಾಸ್ತ್ರ ಮಾಡಿದೆಯಲ್ಲೇ. ಲೇಡೀಡಾಕ್ಟ್ರು ಕೊಟ್ಟ ಔಷಧಿಯಿಂದೇನೂ ಗುಣವಾಗಲಿಲ್ವೇನೇ."

"ಗುಣವಾಗೋದು ಒಂದೇ ದಿನಕ್ಕೆ, ನಾನು ನಾಲ್ಕು ಜನರ ಭುಜದ ಮೇಲೆ ಸಾಗಿಹೋಗೋವಾಗ."

"ಬಾಯಿಗೆ ಬಂದಹಾಗೆಲ್ಲಾ ಹರಟಬೇಡಾಕಣೇ. ಸ್ವಲ್ಪ ನಾಲಗೆಗೆ ಲಗಾಮು ಹಾಕು."

ಅಷ್ಟುಹೊತ್ತಿಗೆ ಭಾಗ್ಯಮ್ಮನವರಿಗೆ ಅದಾವುದೋ ಹಳೆಯ ನೆನಪೊಂದು ಕೆರಳಿ ಕಣ್ಣುಗಳು ಅಶ್ರುಪೂರ್ಣವಾದುವು. "ಹೌದು. ನನಗಿನ್ನೇನು ಸುಖಾ ಸಂತೋಷ ಉಳಿದಿದೇ ಈ ಪ್ರಪಂಚದಲ್ಲಿ ನೀವೇಹೇಳಿ. ಲಕ್ಷಣವಾಗಿ

ಬದುಕೀ ಬಾಳೀ ಸಂಸಾರಮಾಡಿಕೊಂಡಿರಬೇಕಾಗಿದ್ದ ಮಗಳು ಉರಿದು ಹೋದಳು. ಬೆಳೆದು ಕೈಗೆಬಂದ ಮಗ ನಮಗೆ ಪ್ರತಿಕಕ್ಷಿಯಾಗಿ ನಿಂತಿದ್ದಾನೆ. ಇನ್ನೇನಾಗಬೇಕು. 'ಎಣ್ಣೇ ಬರೋಹೊತ್ತಿಗೆ ಕಣ್ಮುಚ್ಚಿಕೊಂಡ'ರೂಂತ ಅನ್ನೋಹಾಗಾಗಿದೆ ನಮ್ಮ ಸ್ಥಿತಿ.

ನಾವು ನೋಡಿದ ಹುಡುಗೀ ಅವನಿಗೆ ಒಪ್ಪಿಗೆಯಾಗದಿದ್ರೇ ಚಿಂತೆಯಿಲ್ಲ. ಅವನೇ ಯಾವ ಹುಡುಗೀನ ಹುಡುಕ್ಕೊಂಡು ಲಗ್ನವಾಗ್ತಾನೋ ಆಗಲಿ. ಯಾರನ್ನಬೇಕಾದ್ರೂ ಮದುವೇಮಾಡಿಕೊಳ್ಳಲಿ. ಅವನೆಲ್ಲಾದ್ರೂ ಸುಖ ವಾಗಿ ಸಂಸಾರ ಮಾಡಿಕೊಂಡಿದ್ದಾನೆಂದು ಕಿವೀಲಿ ಬಿದ್ರೆ ನಮಗೆ ಸಾಕು. ಆದದ್ದಾಯಿತೂಂತ ಆ ಪ್ರಸಂಗಾನ ನೀವಷ್ಟಕ್ಕೇ ಬಿಟ್ಟದ್ದರೆ ಚೆನ್ನಾಗಿತ್ತು. ಇಷ್ಟೆಲ್ಲಾ ಮನಸ್ತಾಪಕ್ಕೆ ಆಸ್ಪದವೇ ಇರುತ್ತಿರಲಿಲ್ಲ. ಅದ್ಯಾಕೋ ನೀವೂ ಹೊಟ್ಟೇಲಿಹುಟ್ಟಿದ ಮಗನಮೇಲೇ ದ್ವೇಷಾ ಸಾಧಿಸ್ತಾಇದ್ದೀರ. ನನಗೆ ಹಗಲೂ ರಾತ್ರೀ ಅವನದೇ ಕೊರಗಾಗಿ ಹೋಗಿದೆ. ಖಾಯಿಲೇ ವಾಸೀ ಮಾಡಿಕೋಂತ ಬರೀ ಬಾಯುಪಚಾರ ಹೇಳಬೇಡೀಂದ್ರೆ. ನನ್ನ ಖಾಯಿಲೇ ಬರೀ ಔಷಧೀಕುಡಿಯೋದ್ರಿಂದ ವಾಸಿಯಾಗೋಂಥಾದ್ದಲ್ಲ. ಮನೋ ರೋಗಕ್ಕೆ ಮದ್ದಿಲ್ಲಾನ್ನೋದು ಕೇಳಿದ್ದೀರಿತಾನೇ. ನನ್ನ ರೋಗಕ್ಕೆ ಯಾವ ಔಷಧಿಯೂ ಇಲ್ಲಾಂದ್ರೆ." ಭಾಗ್ಯಮ್ಮ ಬಿಕ್ಕಿ ಬಿಕ್ಕಿ ಅಳತೊಡಗಿದರು. ಅವರು ಮಲಗಿದ್ದ ತಲೆದಿಂಬೆಲ್ಲಾ ಒದ್ದೆಯಾಗಿಹೋಯಿತು. ಸುಬ್ಬಣ್ಣ ದಿಗ್ಭ್ರಾಂತರಾಗಿ ಕೂತುಬಿಟ್ಟರು. ಕಮಲೂ ಬಂದು, 'ಏಕಮ್ಮಾ ಅಳ್ತೀಯ. ಅಳಬೇಡಮ್ಮಾ' ಎಂದು ತಾಯಿಯನ್ನು ಸಂತೈಸತೊಡಗಿದಳು. ಅವಳ ಗಂಟಲು ಕಟ್ಟಿಹೋಯಿತು. ಕಣ್ಣಲ್ಲಿ ನೀರುಬಂತು.

"ಹಾಗಾದ್ರೆ ನನ್ನನ್ನೇನು ಮಾಡೂಂತೀಯೇ ಈಗ. ಹೀಗೆ ಗೋಳಾಡಿ ದ್ರೇನು ಪ್ರಯೋಜನ. ನಿನ್ನ ಮನಸ್ಸಲ್ಲಿರೋದನ್ನ ಬಾಯಿಬಿಟ್ಟು ಹೇಳಿಬಿಡು. ಆ ಪ್ರಕಾರ ಮಾಡ್ತೀನಿ."

"ನಿಜವಾಗಿಯೂ ಅಷ್ಟುಮಾತ್ರ ನನ್ನ ಮಾತು ನಡಿಸಿಕೊಡ್ತೀ ರಾಂದ್ರೆ." ಭಾಗ್ಯಮ್ಮ ಸೆರಗಂಚಿನಲ್ಲಿ ಕಣ್ಣೊರಿಸಿಕೊಳ್ಳುತ್ತಾ ಕೇಳಿದರು.

"ಖಂಡಿತವಾಗಿಯೂ ನಡಿಸ್ತೇನೇ. ಅನುಮಾನ ಪಡಬೇಡ."

"ನನಗೆ ಮಗೂನ ನೋಡಬೇಕೂಂತನ್ನಿಸಿಬಿಟ್ಟಿದೆ. ಅವನ್ನ ನೋಡಿ ಎರಡು ವರ್ಷದ ಮೇಲಾಯಿತು. ಹಗಲೂ ರಾತ್ರೀ ಅವನದೇ ಗಿಲಿಯಾಗಿ ಹೋಗಿದೆ ನನಗೆ. ಈಗೊಂದು ಆರುತಿಂಗಳಿಂದ ಅವನ ಕಾಗದವೂ ಇಲ್ಲ. ಮಗೂ ಸ್ವಸ್ಥವಾಗಿದ್ದಾನೋ ಇಲ್ವೋ ಸಮಾಚಾರಾನೇ ತಿಳೀಲಿಲ್ಲ. ಪರಸ್ಥಳ ದಲ್ಲಿ ಹೊತ್ಹೊತ್ತಿಗೆ ಊಟಾ ತಿಂಡಿಗೇನುಮಾಡ್ತಿದ್ದಾನೊ ದೇವರೇಬಲ್ಲ. ಅವನ್ನ ನೋಡೋತನಕಾ ನನಗೆ ಊಟಾಬೇಡ. ನಿದ್ರೇಬೇಡ. ದಮ್ಮಯ್ಯಾಂತೀನಿ. ಒಂದು ವಾರ ನಿಮ್ಮ ಆಫೀಸಿಗೆ ರಜಾ ತಗೊಳ್ಳಿ. ನೀವೂ ಬಂದು ನಾಲ್ಕು ದಿನ ಸುಧಾರಿಸಿಕೊಂಡ ಹಾಗಾಗುತ್ತೆ. ಮೈಸೂರಲ್ಲಿ ಸುಶೀಲಮ್ಮನ ಮನೆ ಯಿದೆ. ಅವರ ಮನೇಲಿ ಇಳಕೊಳ್ಳಬಹುದು. ಮೈಸೂರಿಗೆ ಬನ್ನೀಂತ ಪ್ರತಿ ಕಾಗ್ದದಲ್ಲೂ ತಪ್ಪದೇ ಬರೀತಿದ್ದಾರೆ ಪಾಪ. ಅವರ ಆಶೆಯೂ ನೆರವೇರಿದ ಹಾಗಾಗತ್ತೆ. ನಾನು ಮಗೂನ ನೋಡಿದ ಹಾಗಾಗತ್ತೆ. ಸದ್ಯ ನೀವಷ್ಟು ಮಾತ್ರಾ ಉಪಕಾರ ಮಾಡಿದರೆ ನನ್ನ ಭಾಗ್ಯಕ್ಕೆಣೆಯೇ ಇಲ್ಲಾಂದ್ರೆ."

"ಆಗಲೀ ಕಣೇ. ನನಗೂ ಹಾಳು ಆಫೀಸು ಕೆಲಸಾ ತಲೇ ಚಿಟ್ಟು ಹಿಡಿದುಹೋಗಿದೆ. ಒಂದ್ವಾರ ರಜಾ ಬರೆದು ಹಾಕಿ ಜೈ ಪರಮೇಶ್ವರಾಂತ ಹೊರಟುಬಿಡ್ತೀನಿ. ನಾಲ್ಕು ದಿನ ಹಾಯಂತಿದ್ದು ಬರ್ತೀನಿ." ತಮ್ಮ ಯಜಮಾನರಿತ್ತ ಆಶ್ವಾಸನದಿಂದ ಭಾಗ್ಯಮ್ಮನವರ ಮುಖ ಹಿಗ್ಗಿಹೋಯಿತು. ಅವರು ಹಾಸಿಗೆಯ ಮೇಲೆದ್ದು ಕೂತರು.

"ಕಮಲೂ ನಿಮ್ಮಣ್ಣಸಿಗೆ ಕಾಫೀ ತಂದು ಕೊಡಲೇ ಇಲ್ವಲ್ಲೇ. ಬೆಳಿಗ್ಗೆ ಹತ್ತು ಗಂಟೆಗೆಲ್ಲಾ ಊಟ ಮಾಡಿಕೊಂಡು ಹೋದೋರು ಪಾಪ. ಹೋಗಿ ಒಲೇ ಹಚ್ಚಿಸಿ ಸಣ್ಣ ಬಾಣಲೀಲಿ ಉಪ್ಪಿಟ್ಟು ಮಾಡು. ಮೊದಲು ಕಾಫೀ ಬಿಸೀ ಮಾಡಿ ತಂದುಕೊಟ್ಬಿಡು." ಎಂದು ಮಗಳಿಗೆ ಆಜ್ಞಾಪಿಸಿದರು. "ಹ್ಞೂ ಆಗಲಮ್ಮ" ಎನ್ನುತ್ತಾ ಕಮಲೂ ಜಿಂಕೆಯ ಮರಿಯಂತೆ ಅಡಿಗೆಯ ಮನೆಗೆ ಓಡಿದಳು.

* * *

ಸುಬ್ಬಣ್ಣ ಪತ್ನೀ ಸಮೇತರಾಗಿ ಮೈಸೂರಲ್ಲಿ ರೈಲಿಳಿದಾಗ ರಾತ್ರಿ ಎಂಟು ಗಂಟೆಯಾಗಿತ್ತು. ನೆಟ್ಟಗೆ ಹೋಗಿ ಚಾಮುಂಡಿ ಬಡಾವಣೆಗೆ ಟಾಂಗಾ ಗೊತ್ತುಮಾಡಿ ಕೂತರು. ಅರ್ಧ ಗಂಟೆಗೆಲ್ಲಾ ಗಾಡೀ ಚಾಮುಂಡಿ

ಬಡಾವಣೆಯನ್ನು ತಲುಪಿತು. ಶೇಷಗಿರಿರಾಯರ ವಿಳಾಸ ತಿಳಿದಿತ್ತಾದರೂ ಇಂಥದೇ ಮನೆಯೆಂದು ನಿರ್ದಿಷ್ಟವಾಗಿ ಸುಬ್ಬಣ್ಣನವರಿಗೆ ಗೊತ್ತಿಲ್ಲವಾದ್ದರಿಂದ ಅವರು ಬೀದಿಯಲ್ಲಿ ಓಡಾಡುತ್ತಿದ್ದ ಒಬ್ಬಿಬ್ಬರನ್ನು ಕೇಳಿ ಶೇಷಗಿರಿರಾಯರ ಮನೇ ಪತ್ತೆಹಚ್ಚಿದರು. ಸಣ್ಣ ಬಂಗಲೆಯೊಂದರ ಮುಂದೆ ಗಾಡೀ ನಿಂತಿತು. ಮನೆಯ ಮುಂದೆ ಗಾಡೀ ಬಂದು ನಿಂತ ಕೂಡಲೇ ರೇಡಿಯೋ ಮುಂದೆ ಕೂತು ಹಿಂದೂ ಪತ್ರಿಕೆಯೋದುತ್ತಿದ್ದ ಶೇಷಗಿರಿರಾಯರು ಹೊರಗೆದ್ದು ಬಂದರು. ಗಾಡಿಯಿಂದಿಳಿಯುತ್ತಿದ್ದವರನ್ನು ಕ್ಷಣಮಾತ್ರದಲ್ಲಿ ಗುರ್ತಿಸಿ ಬಿಟ್ಟರು. ಕೂಡಲೇ ಗಾಡಿಯ ಹತ್ತಿರ ಬಂದು, “ಬನ್ನೀ ಸುಬ್ಬಣ್ಣೋರೇ. ಬಹಳ ಅಪರೂಪವಾಗಿ ಬಂದ್ಬಿಟ್ಟಿರಿ” ಎಂದು ಆದರಪೂರ್ವಕವಾದ ಸ್ವಾಗತ ನೀಡಿದರು. ಸುಬ್ಬಣ್ಣನವರ ಹಿಂದೆ ಭಾಗ್ಯಮ್ಮನೂ ಇಳಿದುದನ್ನೂ ಕಂಡು ಅತ್ಯಾಶ್ಚರ್ಯದಿಂದ, “ಬನ್ನೀಮ್ಮಾ ಬನ್ನಿ. ಏನು ಬಹಳ ಅಪರೂಪವಾಗಿ ಗಂಡಾಹೆಂಡ್ತೀ ಸರ್ಕೀಟು ಹೊರಟುಬಿಟ್ಟಿದ್ದೀರಿ” ಎಂದರು. ಭಾಗ್ಯಮ್ಮ ತುಸು ನಾಚಿಕೆಯಿಂದ ತಲೆತಗ್ಗಿಸಿದರು. ಅಷ್ಟು ಹೊತ್ತಿಗೆ ಆಳು ಬಂದು ಗಾಡಿಯಲ್ಲಿದ್ದ ಸೂಟುಕೇಸನ್ನೂ ಹಾಸಿಗೆಯನ್ನೂ ಮನೆಯೊಳಕ್ಕೆ ತೆಗೆದು ಕೊಂಡು ಹೋದ. ಸುಬ್ಬಣ್ಣ ಗಾಡಿಯವನಿಗೆ ದುಡ್ಡುಕೊಟ್ಟು ಕಳಿಸಿದರು. ಇಷ್ಟೆಲ್ಲಾ ಆಗುವ ಹೊತ್ತಿಗೆ ಒಳಗಿಂದ ಸುಶೀಲಮ್ಮನೂ, ಹುಡುಗರೂ ಮಕ್ಕಳೂ ಬಂದು ಅತಿಥಿಗಳನ್ನು ಸುತ್ತುಗಂಟಿ ನಿಂತುಬಿಟ್ಟರು.

ಭಾಗ್ಯಮ್ಮ ಬಂದುದನ್ನು ನೋಡಿ ಸುಶೀಲಮ್ಮನಿಗುಂಟಾದ ಸಂತೋಷಕ್ಕೆ ಪಾರವೇ ಇಲ್ಲ. ತಮ್ಮ ಯಜಮಾನರೆದುರಿನಲ್ಲಿದ್ದಾರೆಂಬ ಸಂಕೋಚವೂ ಇಲ್ಲದೆ ಭಾಗ್ಯಮ್ಮನವರನ್ನು ಬಾಚಿ ತಬ್ಬಿಕೊಂಡುಬಿಟ್ಟರು. “ಚೆನ್ನಾಗಿದ್ದೀರಾ ಭಾಗ್ಯಮ್ಮ. ಕಡೆಗೂ ಬಂದಿರಲ್ಲಾ ದೊಡ್ಡ ಮನಸ್ಸು ಮಾಡಿ” ಎಂದರು. ಸುಶೀಲಮ್ಮನ ಎಣೆಯಿಲ್ಲದ ಪ್ರೀತಿವಿಶ್ವಾಸಗಳನ್ನು ಕಂಡು ಭಾಗ್ಯಮ್ಮನಿಗೆ ದಿಗ್ಭ್ರಮೆಯಾಗಿ ಹೋಯಿತು. ಮಾತನಾಡ ಬೇಕೆಂದರೆ ಬಾಯೇ ಕಟ್ಟಿಹೋಯಿತು. ಕೃತಜ್ಞತೆಯಿಂದ ಅವರ ಹೃದಯ ಭಾರವಾಯಿತು. ಕ್ಷಣಹೊತ್ತು ಚೇತರಿಸಿಕೊಂಡನಂತರ, “ಚೆನ್ನಾಗಿದ್ದೀನಿ ಸುಶೀಲಮ್ಮ. ನೀವೂ ಚೆನ್ನಾಗಿದ್ದೀರಾ” ಎಂದಿಷ್ಟು ಕೇಳಿ ಕುಶಲ ಪ್ರಶ್ನೆಗಳ ಸಮಾರಂಭವನ್ನು ಪರಿಸಮಾಪ್ತಿಗೊಳಿಸಿದರು.

"ಏನೇ ಮನೆಗೆ ಬಂದವರನ್ನ ಹೊರಗೇ ನಿಲ್ಲಿಸಿಕೊಂಡು ವಿಚಾರಿಸಿದ್ದೀಯ! ಚೆನ್ನಾಗಿದೆ. ಒಳಗೆ ಕರಕೊಂಡ್ಹೋಗಿ ನಿಧಾನವಾಗಿ ಮಾತೂಕತೆ ಯಾಡಬಾರದೇ" ಎಂದು ಶೇಷಗಿರಿರಾಯರು ತಮ್ಮ ಹೆಂಡತಿಯನ್ನೆಚ್ಚರಿಸಿದರು. ಅವರ ಮಾತಿಗೆ ಎಲ್ಲರೂ ಘೊಳ್ಳೆಂದು ನಕ್ಕುಬಿಟ್ಟರು. "ಬನ್ನೀ ಭಾಗ್ಯಮ್ಮ ಒಳಗೆ ಬನ್ನಿ" ಎನ್ನುತ್ತಾ ಸುಶೀಲಮ್ಮ ಭಾಗ್ಯಮ್ಮನ ಕೈಹಿಡಿದು ಒಳಕ್ಕೆ ಕರಕೊಂಡು ಹೋದರು. ಎಲ್ಲರೂ ಅವರನ್ನು ಹಿಂಬಾಲಿಸಿದರು. ಮನೆಯಲ್ಲುಂಟಾದ ಕೋಲಾಹಲವನ್ನು ನೋಡಿ ಶೇಷಗಿರಿರಾಯರು ರೇಡಿಯೋ ನಿಲ್ಲಿಸಿಬಿಟ್ಟರು.

"ನೀನು ಮಾತಾಡ್ತಾ ಕೂತುಬಿಟ್ರೆ ನಿನಗೆ ವ್ಯೈಯೇ ಮರೆತುಹೋಗತ್ತೆ. ಅದರಲ್ಲೂ ಭಾಗ್ಯಮ್ಮನವರು ಬಂದಿರೋವಾಗ ಹೇಳಬೇಕಾದ್ದೇ ಇಲ್ಲ ಪಾಪ ಎಷ್ಟೊತ್ತಿಗೆ ಊಟಾ ಮಾಡಿದವರೋ ಏನೋ. ಮೊದಲು ಅವರ ಊಟದ ವ್ಯವಸ್ಥೆ ಮಾಡಿ ಆಮೇಲೆ ಬೇಕಾದ ಹಾಗೆ ಮಾತಾಡ್ತಾ ಕೂತುಕೋ ಯಾರು ಬೇಡಾಂದ್ರು" ಎಂದರು ಶೇಷಗಿರಿರಾಯರು.

"ಹಾಗೇ ಮಾಡ್ತೀನೀಂದ್ರೆ. ನಾನ್ಯೇನೇನು ಮಾಡ್ತೀನೀಂತ ನೀವು ನೋಡ್ತಾ ಇರಿ. ನಾನು ಮಾಡೋದ್ರಲ್ಲೇನ್ನಾದರೂ ಹೆಚ್ಚುಕಮ್ಮಿಯಾದರೆ ಆಗ ಆಕ್ಷೇಪಣೆ ಮಾಡಿ" ಎಂದರು ಸುಶೀಲಮ್ಮ. "ಸರಿ ನಿನ್ನಪಾಡು. ಬನ್ನೀ ಸುಬ್ಬಣ್ಣ. ಇವರು ಊಟಕ್ಕೆಬ್ಬಿಸೋ ತನಕಾ ಒಂದಿಷ್ಟು ಹರಟೇ ಹೊಡೀತಾ ಇರೋಣ" ಎನ್ನುತ್ತಾ ಶೇಷಗಿರಿರಾಯರು ಸುಬ್ಬಣ್ಣನವರನ್ನೂ ಜತೆಯಲ್ಲಿ ಕರೆದುಕೊಂಡು ತಮ್ಮ ರೂಮಿಗೆ ಹೋದರು.

"ಬೆಳಿಗ್ಗೆ ಅಲ್ಲಿಂದ ಎಷ್ಟೊತ್ತಿಗೆ ಹೊರಟರಿ? ಊಟಾಮಾಡಿಕೊಂಡು ಹೊರಟ್ರೇ ತಾನೇ ಭಾಗ್ಯಮ್ಮ? ಮನೇಲಿ ಹುಡುಗರೂ ಮಕ್ಕಳೂ ಎಲ್ಲಾ ಆರೋಗ್ಯಾ ತಾನೇ. ಕಮಲೂನೇಕೆ ಕರಕೊಂಡು ಬರ್ಲಿಲ್ಲಾ ನಿಮ್ಮ ಜತೇಲಿ?" ಸುಶೀಲಮ್ಮ ಕೇಳಿದರು.

"ಅವಳೇನೋ ಬರೋಕ್ಕೆ ಗೆಜ್ಜೇಕಟ್ಕೊಂಡು ಕಾದಿದ್ದಳು. ಅನ್ಯಾಯವಾಗಿ ಒಂದು ವಾರಾ ಸ್ಕೂಲು ಹೋಗುತ್ತೇಂತ ನಾನೇ ಬೇಡಾಂದೆ ಸುಶೀಲಮ್ಮ."

"ಇನ್ನೇನು ಊರಿನ ಸಮಾಚಾರಾ ಹೇಳೀ ಭಾಗ್ಯಮ್ಮ. ಲೇಡೀ ಡಾಕ್ಟ್ರು ಅಲ್ಲೇ ಇದ್ದಾರೆ ತಾನೇ."

"ಇಲ್ಲ. ಅವರಗೆ ಕೋಲಾರಕ್ಕೆ ವರ್ಗವಾಗಿ ಹೋಯಿತು. ಇನ್ಯಾರೋ ಬಂದಿದ್ದಾರೆ. ಏನೂ ಪ್ರಯೋಜನವಿಲ್ಲ. ಶುದ್ಧ ಸಿಡುಕಿ ಆಕೆ. ನೀವ್ಯೇನೇ ಹೇಳೀ, ಸರೋಜಮ್ಮನಂಥಾ ಹೆಂಗಸು ಬಹಳ ಅಪರೂಪ ಸುಶೀಲಮ್ಮ."

"ನಮ್ಮ ಯಜಮಾನರಂದ್ಹಾಗೇ ಮಾಡಿದೆನಲ್ಲಾ ಭಾಗ್ಯಮ್ಮ. ನಿಮ್ಮ ಜತೇಲಿ ಹಾಯಾಗಿ ಮಾತಾಡ್ತಾ ಕೂತ್ಬಿಟ್ಟೆ. ಮಡೀ ಉಟ್ಕೊಂಡು ಅನ್ನಕ್ಕೆ ತೊಳೆದಿಟ್ಟು ಬರ್ತೀನಿ. ರೈಲಲ್ಲಿ ಬಂದದ್ದು. ಶುದ್ಧ ಮೈಲಿಗೆ. ಇದ್ದಿಲೊಲೇಲೇ ಒಂದು ಕೊಡಾ ನೀರು ಕಾಸಿ ಕೊಡ್ತೀನಿ. ಸ್ನಾನಾ ಮಾಡಿ. ನನ್ನದೊಂದು ಮಡೀಸೀರೇ ಕೋಲಿನ ಮೇಲೆ ಎಳೆದಿದ್ದೀನಿ. ಒಣಗಿದೆ. ಅದನ್ನುಟ್ಕೊಂಡು ಊಟಮಾಡಿ."

"ಈವತ್ತು ಗುರುವಾರ. ನಾನು ಊಟ ಮಾಡುವುದಿಲ್ಲನಲ್ಲ ಸುಶೀಲಮ್ಮ."

"ಅಂದ್ಹಾಗೆ ಗುರುವಾರಾನ್ನೋದೇ ಮರ್ತ್ಹೋಯ್ತು ಭಾಗ್ಯಮ್ಮ. ಹಾಗಾದ್ರೆ ಫಲಾರಕ್ಕೇನಾದ್ರೂ ಮಾಡ್ತೀನಿ."

"ನೀವ್ಯೇನೂ ತೊಂದ್ರೇ ತಗೋಬೇಡೀ ಸುಶೀಲಮ್ಮ."

"ಚೆನ್ನಾಗಿ ಹೇಳಿದಿರಿ. ತೊಂದ್ರೆಯೇನು ಬಂತು ಭಾಗ್ಯಮ್ಮ. ಯಾಕಿಷ್ಟು ಸಂಕೋಚಪಟ್ಕೊಳ್ತೀರಿ."

ಸುಶೀಲಮ್ಮ ಫಲಹಾರದ ವ್ಯವಸ್ಥೆ ನಡೆಸಲು ಅಡಿಗೆ ಮನೆಗೆ ಹೊರಟು ಹೋದರು. ಹಾಲಿನಲ್ಲಿ ಭಾಗ್ಯಮ್ಮನೂ ಅಹಲ್ಯೆಯೂ ಹರಟೆ ಕೊಚ್ಚುತ್ತಾ ಕೂತರು.

## ೩೪

ಸುಬ್ಬಣ್ಣ ಮೈಸೂರಿಗೆ ಬರುತ್ತಿರುವುದು ಅದೇ ಮೊದಲು. ಊರಿಗೆ ಬಂದವರು ಮನೇ ಬಿಟ್ಟು ಕದಲಲಿಲ್ಲ. ಊರು ನೋಡಬೇಕೆಂಬ ಆಸೆಯೇನೋ ಯಥೇಚ್ಛವಾಗಿತ್ತು. ಶೇಷಗಿರಿರಾಯರ ಹುಡುಗರ ಪೈಕಿ ನಾಗರಾಜನ ಹತ್ತಿರ ಸುಬ್ಬಣ್ಣನವರಿಗೆ ಬಳಕೆ ಜಾಸ್ತಿ. ಹುಡುಗ ಸ್ವಲ್ಪ ಧಾರ್ಷ್ಟೀಕಸ್ಥ

ಭಾವದವನು. ಅವರಣ್ಣ ಕೃಷ್ಣಮೂರ್ತಿಯಂತೆ ಮುಖೇಡಿಯಲ್ಲ. ಸುಬ್ಬಣ್ಣ ಊರಿಗೆ ಬರುತ್ತಲೇ ನಾಗರಾಜ ಅವರ ಬಾಲಹಿಡಿದ. ಒಂದು ದಿನ ಅವರ ಹತ್ತಿರ ಬಂದು, "ನೀವು ಮೈಸೂರು ನೋಡೇ ಇಲ್ಲಾ ಅಲ್ವೇ ಸುಬ್ಬಣ್ಣೋರೇ ನನ್ನ ಜತೇಲಿ ಬನ್ನಿ. ದಿನಾ ವಾಕಿಂಗ್ ಕರಕೊಂಡು ಹೋಗ್ತೀನಿ. ಈ ಭಾನುವಾರ ಬೃಂದಾವನಕ್ಕೆ ಹೋಗಿ ಬರೋಣ. ನಿಷದ್‌ಬಾಗ್, ಥಂಡೀ ಸಡಕ್, ಕಾರಂಜೀಕೆರೆ, ಜೂಗಾರ್ಡನ್, ಎಲ್ಲಾ ತೋರಿಸ್ತೀನಿ" ಎಂದು ಜಂಭ ಕೊಚ್ಚಿಕೊಂಡ. ನಾಗರಾಜನ ಮಾತು ಕೇಳಿ ಸುಬ್ಬಣ್ಣನವರಿಗೆ ಪರಮಾನಂದವಾಗಿ ಹೋಯಿತು.

"ಹಾಗೇ ಆಗಲೀ ನಾಗರಾಜ. ಹೇಗಿದ್ರೂ ಒಂದ್ವಾರ ರಜಾ ತೆಗೆದು ಕೊಂಡು ಬಂದಿದ್ದೀನಿ. ಊರೆಲ್ಲಾ ನೋಡಿಕೊಂಡು ಹೋಗ್ತೀನಿ. ಈವತ್ತು ನೀನು ಸ್ಕೂಲಿಗೆ ಹೋಗೋಲ್ವೇ" ಎಂದು ಕೇಳಿದರು.

"ಇದೆ. ಏಕೆ ಸುಬ್ಬಣ್ಣೋರೇ. ಏನಾದ್ರೂ ಕೆಲಸವಿದ್ರೇ ಹೇಳಿ ಮಾಡ್ತೀನಿ."

"ಏನೂ ಇಲ್ಲ. ಸ್ವಲ್ಪ ಕಾಲೇಜು ಕಡೆ ಹೋಗಬೇಕಾಗಿತ್ತು. ನನಗೆ ದಾರೀ ಗೊತ್ತಿಲ್ಲ."

"ನಿಮ್ಮ ದೊಡ್ಡಮಗ ಕಾಲೇಜಲ್ಲಿ ಓದ್ತಿದ್ದಾನೆ ಅಲ್ವೇ".

"ಹೌದು."

"ಯಾವಾಗ ಹೋಗೋಣ ಹೇಳಿ."

"ನಿನಗೆ ಸ್ಕೂಲು ಹೋಗುತ್ತಲ್ಲಾ."

"ಪರವಾಗಿಲ್ಲ ಸುಬ್ಬಣ್ಣೋರೇ. ನಿಮಗೆ ಕಾಲೇಜು ತೋರಿಸಿಬಿಟ್ಟು ಹಾಗೇ ಸ್ಕೂಲಿಗೆ ಹೋಗ್ತೀನಿ."

"ಸರಿ ಹಾಗಾದ್ರೆ ಒಂದೇ ಸಲ ಊಟ ಮುಗಿಸಿಕೊಂಡು ಹೊರಟು ಬಿಡೋಣ."

ಹನ್ನೊಂದು ಗಂಟೆಗೆಲ್ಲಾ ಊಟಮಾಡಿ ಸುಬ್ಬಣ್ಣ ನಾಗರಾಜನ ಜತೆಯಲ್ಲಿ ಮಹಾರಾಜಾ ಕಾಲೇಜಿನ ದಾರಿಹಿಡಿದರು. ಕಾಲೇಜು ಹತ್ತೂವರೆಗೆಲ್ಲಾ ಪ್ರಾರಂಭವಾಗಿ ಹೋಗಿತ್ತು. ಮೊದಲನೆಯ ಪೀರಿಯಡ್ದು ನಡೆಯುತ್ತಿತ್ತು. ಸುಬ್ಬಣ್ಣ ಕಾಲೇಜಿನ ಭವ್ಯಭವನವನ್ನೊಮ್ಮೆ ತಲೆಯೆತ್ತಿ

ನೋಡಿದರು. ನೋಡುತ್ತಿದ್ದಹಾಗೆಯೇ ಅವರಿಗೆ ಸಂತೋಷವುಕ್ಕಿಬಂತು. 'ಇಂಥಾ ದೊಡ್ಡ ಕಾಲೇಜಲ್ಲಿ ನನ್ನ ಮಗ ವಿದ್ಯಾರ್ಜನೆ ಮಾಡುತ್ತಿದ್ದಾನೆಯೇ. ಅಂಥಾ ಮಗನ್ನ ಪಡೆದ ನನ್ನ ಭಾಗ್ಯವೇ ಭಾಗ್ಯ' ಎಂದು ಹೆಮ್ಮೆಪಟ್ಟರು. ಸ್ವತಃ ತಮಗೆ ಕಾಲೇಜು ಮೆಟ್ಟಲು ಹತ್ತಿ ವಿದ್ಯಾರ್ಜನೆ ಮಾಡುವ ಯೋಗವಿರಲಿಲ್ಲವಾದ್ದರಿಂದ ಬಹಳ ಭಕ್ತಿಗೌರವಗಳಿಂದ ಒಮ್ಮೆ ಕಾಲೇಜನ್ನೆಲ್ಲಾ ಪ್ರದಕ್ಷಿಣೆ ಮಾಡಿಕೊಂಡು ಬಂದರು. ಎಲ್ಲಿ ನೋಡಿದರೂ ವಿದ್ಯಾರ್ಥಿಗಳೇ ತುಂಬಿಹೋಗಿದ್ದರು. ತರಗತಿಗಳಲ್ಲಿ ಪಾಠಪ್ರವಚನಗಳು ನಡೆಯುತ್ತಿದ್ದವು. ತಮ್ಮ ಮಗ ಎಲ್ಲಾದರೂ ಕಣ್ಣಿಗೆ ಬೀಳುತ್ತಾನೇನೋ ಎಂದು ಪ್ರತಿಯೊಂದು ರೂಮಿನ ಮುಂದೆಯೂ ನಿಂತು ನಿಂತು ಹೋಗುತ್ತಿದ್ದರು. ಅವರ ಜತೆಯಲ್ಲಿದ್ದ ನಾಗರಾಜ ನಕ್ಕು, 'ಹಾಗೆಲ್ಲಾ ನೋಡಿದರೆ ನಿಮ್ಮ ಹುಡುಗಾ ಕಣ್ಣಿಗೆ ಬೀಳೋಲ್ಲಾ ಸುಬ್ಬಣ್ಣೋರೇ. ಅವನು ಯಾವ ಕ್ಲಾಸಲ್ಲೋದುತ್ತಿದ್ದಾನೆ ಹೇಳಿ. ಯಾರನ್ನಾದರೂ ವಿಚಾರಿಸ್ತೀನಿ.' ಎಂದ.

"ನನಗೆ ಸರಿಯಾಗಿ ಗೊತ್ತಿಲ್ಲಪ್ಪ. ಹೋದ ಸಲ ಸೆಕೆಂಡ್ ಆನರ್ಸ್‌ಲ್ಲಿದ್ದ. ಈ ವರ್ಷ ಥರ್ಡ್ ಆನರ್ಸ್‌ಲ್ಲಿರಬೇಕು."

"ಯಾವ ಆನರ್ಸ್ ತಗೊಂಡಿದ್ದಾನೆ ನಿಮ್ಮ ಹುಡುಗ."

"ಪಾಲಿಟಿಕ್ಸ್ ಆನರ್ಸ್ ತಗೊಂಡಿದ್ದಾನೆ."

"ಸ್ವಲ್ಪಹೊತ್ತು ಇಲ್ಲೇ ಇರಿ. ನಾನು ವಿಚಾರಿಸ್ಕೊಂಡು ಬರ್ತೀನಿ." ನಾಗರಾಜ ನೆಟ್ಟಗೆ ಮಹಡಿ ಹತ್ತಿಹೋದ. ಅಲ್ಲಿ ಹೊರಗಡೆ ಠಳಾಯಿಸುತ್ತಿದ್ದ ವಿದ್ಯಾರ್ಥಿಯೊಬ್ಬನ ಹತ್ತಿರ ಹೋಗಿ ಶ್ರೀಧರನ ಹೆಸರು ಹೇಳಿದ. ಆ ವಿದ್ಯಾರ್ಥಿ ಕೂಡಲೇ "ಓಹೋ ಮಿ|| ಶ್ರೀಧರ್ ತಾನೇ. ಅವರೀಗ ಕ್ಲಾಸಲ್ಲಿದ್ದಾರೆ. ಅವರನ್ನ ಈಗಲೇ ಕಾಣಬೇಕೆಂದರೇ ಬನ್ನಿ. ಅವರಿರೋ ರೂಮು ತೋರಿಸ್ತೀನಿ." ಎನ್ನುತ್ತಾ ನಾಗರಾಜನನ್ನು ಜತೆಯಲ್ಲಿ ಕರೆದುಕೊಂಡು ಹೋದ. ಆತ ಹೋಗಿ ಒಂದು ರೂಮಿನ ಹತ್ತಿರ ನಿಂತು, 'ಅಗೋ ಅಲ್ಲಿ ಬರೀತಾ ಕೂತಿದ್ದಾರಲ್ಲಾ ಅವರೇ ಮಿ|| ಶ್ರೀಧರ್' ಎಂದು ನಾಗರಾಜನಿಗೆ ಶ್ರೀಧರನ ಗುರ್ತು ತೋರಿಸಿ ಹೊರಟುಹೋದ. ನಾಗರಾಜ ಬಾಗಿಲಲ್ಲಿ ನಿಂತು 'ಐವಾಂಟ್ ಮಿ|| ಶ್ರೀಧರ್' ಎಂದ. ತಲೆಬಗ್ಗಿಸಿಕೊಂಡು ನೋಟ್ಸ್ ತೆಗೆದುಕೊಳ್ಳುತ್ತಿದ್ದ ಶ್ರೀಧರ ಕಕ್ಕಾಬಿಕ್ಕಿಯಾಗಿ ತನ್ನನ್ನು ಕರೆದ ವ್ಯಕ್ತಿ

ಯಾರೆಂದು ಬಾಗಿಲಕಡೆ ನೋಡಿದ. ಯಾರೆಂದು ಅವನಿಗೆ ಗುರ್ತು ಹತ್ತಲಿಲ್ಲ. ಪ್ರೊಫೆಸರು ಅವನ ಕಸಿವಿಸಿಯನ್ನು ಕಂಡು.

"ಡು ಯು ವಾಂಟು ಗೋ ಔಟ್" ಎಂದು ಕೇಳಿದರು.

"ಎಸ್ ಸರ್" ಶ್ರೀಧರ ಉತ್ತರಿಸಿದ.

ಶ್ರೀಧರ ಹೊರಗೆ ಬಂದ. ನಾಗರಾಜ "ಮಿ|| ಶ್ರೀಧರ್, ಸ್ವಲ್ಪ ನನ್ನ ಜತೇಲಿ ಬರ್ತೀರಾ" ಎಂದ. "ನೀವ್ಯಾರೋ ನನಗೆ ಪರಿಚಯವಿಲ್ಲ. ನನ್ನಿಂದೇ ನಾಗಬೇಕಾಗಿತ್ತು."

"ನಿಮ್ಮಿಂದೇನೂ ಆಗಬೇಕಾದ್ದಿಲ್ಲ ಮಿ|| ಶ್ರೀಧರ್. ನಿಮ್ಮನ್ನು ನೋಡಲು ನಿಮ್ಮ ಫಾದರ್ ಬಂದಿದ್ದಾರೆ."

"ಏನು ನಮ್ಮ ಫಾದರ್ ಬಂದಿದ್ದಾರೆಯೇ !"

"ಹೌದು."

"ಎಲ್ಲಿದ್ದಾರೆ ತೋರಿಸಿ."

ಇಬ್ಬರೂ ಧಡ ಧಡನೆ ಮಹಡಿಯಿಳಿದು ಹೋದರು. ಸುಬ್ಬಣ್ಣ ನೋಟೀಸು ಬೋರ್ಡಿನ ಮುಂದೆ ನಿಂತಿದ್ದರು. ಯಾರೋ ಇಳಿದು ಬರುತ್ತಿರುವ ಶಬ್ದ ಕೇಳಿ ಹಿಂದಿರುಗಿ ನೋಡಿದರು. ಸುಬ್ಬಣ್ಣ ತಮ್ಮ ಕಣ್ಣು ತಾವೇ ನಂಬದಾದರು. ದೀರ್ಘಕಾಲಾವಧಿಯನಂತರ ದೊರೆತ ಮಗನ ದರ್ಶನದಿಂದ ಅವರ ಹೃದಯದಲ್ಲಿ ಪಿತೃವಾತ್ಸಲ್ಯ ಉಕ್ಕೇರಿ ಬಂತು. ಕ್ಷಣ ಮಾತ್ರದಲ್ಲಿ ಹಿಂದಿನ ವೈಷಮ್ಯವೆಲ್ಲಾ ಮರೆತುಹೋಯಿತು. ಆನಂದಾತಿರೇಕ ದಿಂದ ಕಣ್ಣುಗಳು ಹನಿಗೂಡಿದವು.

ಬಂದವನೇ ಶ್ರೀಧರ ತಂದೆಗೆ ದೀರ್ಘದಂಡ ನಮಸ್ಕಾರ ಹಾಕಿಬಿಟ್ಟ. ಸುಬ್ಬಣ್ಣ ಬಗ್ಗಿ ಮಗನ ಕೈಹಿಡಿದೆತ್ತಿದರು. ಅವನನ್ನು ಬಾಚಿ ತಬ್ಬಿಕೊಂಡರು. ಮಗನ ನುಣುಪಾದ ಕ್ರಾಪು ತಲೆಯಮೇಲೆ ತಮ್ಮ ಕೈಬೆರಳುಗಳನ್ನಾಡಿ ಸಿದರು. "ಶ್ರೀಧರಾ........ಶ್ರೀಧರಾ........" ಎಂದು ತೊದಲಿದರು.

"ನೀನು ದೊಡ್ಡ ಮನಸ್ಸುಮಾಡಿ ನನ್ನ ಕ್ಷಮಿಸಬೇಕಣ್ಣಾ. ನಾನು ನಿನ್ನ ಮನಸ್ಸು ಬಹಳ ನೋಯಿಸಿಬಿಟ್ಟೆ."

"ನನಗೆ ಬಹಳ ಸಂಕಟವಾಗತ್ತೆ ನೀನು ಹಾಗಂದ್ರೆ. ಏನೋ ಮೂರ್ಖಪಟ್ಟನಂದು. ನಿನಗೆ ಬಹಳ ತೊಂದರೆಕೊಟ್ಟುಬಿಟ್ಟೆ. ಏನೋ

ನಿಷಘಳಿಗೆ. ಆದದ್ದಾಗಿ ಹೋಯಿತು. ನೀನೇನೋ ನಮ್ಮನ್ನ ಮರೆತುಬಿಟ್ಟೆ. ಆರು ತಿಂಗಳಿಂದ ಕಾಗದವೂ ಬರೀಲಿಲ್ಲ. ಆದರೆ ಹೆತ್ತ ಹೊಟ್ಟೇ ನಮ್ಮದು· ನಮ್ಮಮನಸ್ಸು ನಿಲ್ಲಲಿಲ್ಲ. ನಿನ್ನ ನೋಡಬೇಕೂಂತ ಓಡಿಬಂದೆವು. ನಿಮ್ಮಮ್ಮ ಊಟಾ ತಿಂಡೀ ಬಿಟ್ಟು ಬಿಟ್ಟು ಕೊರಗ್ತಾ ಇದ್ದಾಳೆ. ಅವಳಿಗೆ ನಿನ್ನದೇ ಗಿಲಿ ಹಿಡಿದುಬಿಟ್ಟದೆ."

"ಅಮ್ಮಾ ಬಂದಿದ್ದಾಳೇನಣ್ಣಾ! ಎಲ್ಲಿದ್ದಾಳೆ! ಎಲ್ಲಿಳಿದು ಕೂಂಡಿದ್ದೀ!"

ಶ್ರೀಧರ ತನ್ನ ಪಾಠ, ತರಗತಿ, ಕಾಲೇಜು ಎಲ್ಲವನ್ನೂ ಮರೆತುಬಿಟ್ಟು ಹೊರಡಲು ಸಿದ್ಧನಾದ. ಅದುವರೆಗೂ ತಂದೇ ಮಗನ ಸಂಭಾಷಣೆ ಕೇಳುತ್ತಿದ್ದ ನಾಗರಾಜನಿಗೆ ಒಂದೂ ಅರ್ಥವಾಗಲಿಲ್ಲ.

"ಹಾಗಾದ್ರೆ ನಾನಿನ್ನು ಸ್ಕೂಲಿಗೆ ಹೊರಡಲೇ ಸುಬ್ಬಣ್ಣೋರೇ". ನಾಗರಾಜ ಕೇಳಿದ.

"ನೀನಿನ್ನು ಹೊರಡಪ್ಪಾ. ನಿನಗೆ ಹೊತ್ತಾಯಿತು."

ನಾಗರಾಜ ತನ್ನ ಸ್ಕೂಲಿನ ದಾರಿ ಹಿಡಿದ. ತಂದೇ ಮಗ ಇಬ್ಬರೂ ಬಿರಬಿರನೆ ಪೈಸರಾಯಿ ರೋಡಿನಲ್ಲಿ ಕಾಲು ಹಾಕ ತೊಡಗಿದರು.

ಶ್ರೀಧರ ಒಂದು ಮನೆಯ ಮುಂದೆ ನಿಂತ. "ಇಲ್ಲೇ ನಮ್ಮ ರೂಮಿ ರೋದು" ಎನ್ನುತ್ತಾ ಮನೆಯ ಗೇಟು ತೆಗೆದು ಪ್ರವೇಶಿಸಿದ. ರೂಮು ಬೀಗ ತೆಗೆದು ಒಳಕ್ಕೆ ಹೋದ. ಸುಬ್ಬಣ್ಣ ರೂಮು ನೋಡಿದರು. ರೂಮು ತಕ್ಕ ಮಟ್ಟಿದೆ ದೊಡ್ಡದಾಗಿಯೇ ಇತ್ತು. ಎರಡು ಟೇಬಲ್ಲು, ಎರಡು ಕುರ್ಚಿಗಳು ಪಕ್ಕದಲ್ಲೇ ಇದ್ದವು. ಮತ್ತೊಂದು ಕಡೆ ಎರಡು ಹಾಸಿಗೆಯ ಸುರುಳಿಗಳಿ ದ್ದವು. ಟೇಬಲ್ಲುಗಳ ಕೆಳಗಡೆ ಒಂದೊರಿದು ಟ್ರಂಕು. ಟೇಬಲ್ಲಿನಮೇಲೆ ಪುಸ್ತಕ ಗಳು ಸಾಲಾಗಿ ಜೋಡಿಸಿಡಲ್ಪಟ್ಟಿದ್ದವು. ಗೋಡೆಗಳ ಮೇಲೆ ಗಾಂಧೀಜಿ, ನೆಹರೂ, ಪಟೇಲರ ಫೋಟೋಗಳೂ, ವಿವೇಕಾನಂದ, ಟಾಗೂರ್, ಅರವಿಂದ ಘೋಷ್ ಮುಂತಾದವರ ಭಾವಚಿತ್ರಗಳೂ ತಗುಲಿ ಹಾಕಲ್ಪಟ್ಟಿದ್ದವು. ರೂಮಿನ ವ್ಯವಸ್ಥೆಯನ್ನು ನೋಡಿ ಸುಬ್ಬಣ್ಣ ಆಶ್ಚರ್ಯ ಚಕಿತರಾದರು.

"ಕೂತುಕೋಣ್ಣಾ. ನಿಂತೇ ಇದ್ದೀಯಲ್ಲಾ."

"ಇರಲೀ ಶ್ರೀಧರಾ. ನಿನ್ನ ಫ್ರೆಂಡು ಅಂದ್ಯಲ್ಲಾ. ಆತ ಏನು ಓದ್ತಿದ್ದಾನೆ.".

"ಅವನೂ ಥರ್ಡ್ ಆನರ್ಸ್‌ನಲ್ಲಿದ್ದಾನೆ. ಆದರೆ ಸಬ್ಜೆಕ್ಟ್ ಬೇರೆ."

"ಏನು ಸಬ್ಜೆಕ್ಟ್ ತಗೊಂಡಿದ್ದಾನೆ."

"ಎಕನಾಮಿಕ್ಸ್."

ಶ್ರೀಧರ ಏನನ್ನೋ ಯೋಚಿಸುತ್ತಾ ಕುರ್ಚಿಯ ಮೇಲೆ ಹೋಗಿ ಕುಳಿತ. ಅರ್ಧ ಶೀಟು ಕಾಗದಾ ತೆಗೆದುಕೊಂಡು ಬರೆಯ ತೊಡಗಿದ.

"ಗೆಳೆಯ ಅನಂತರಾಮೈಯ್ಯನಿಗೆ,

ಕಾರಣಾಂತರಗಳಿಂದ ಈವತ್ತು ಮಧ್ಯಾಹ್ನ ಹನ್ನೆರಡೂವರೆ ಗಂಟೆಗೆಲ್ಲಾ ಕಾಲೇಜಿಂದ ಬಂದುಬಿಟ್ಟೆ. ಆಕಸ್ಮಿಕವಾಗಿ ಊರಿಂದ ನನ್ನ ತಂದೆ ತಾಯಿಗಳು ಬಂದಿದ್ದಾರೆ, ನಮ್ಮ ತಾಯಿಯನ್ನು ನೋಡಲು ಹೋಗಿದ್ದೇನೆ. ರಾತ್ರಿ ರೂಮಿಗೆ ಬರೋದು ಹೊತ್ತಾಗಬಹುದು. ನೀನು ನನಗಾಗಿ ಕಾಯಬೇಡ. ನಿನ್ನ ಊಟ ತೀರಿಸಿಕೊಂಡು ಬಂದು ಮಲಕ್ಕೋ. ಬಾಕಿಯೆಲ್ಲಾ ಮುಖ್ತಾ ತಿಳಿಸುತ್ತೇನೆ."

'ಶ್ರೀಧರ.'

ಶ್ರೀಧರ ಕಾಗದವನ್ನು ಮಡಿಸಿ ಟೇಬಲ್ಲಿನ ಮೇಲಿಟ್ಟು ಎದ್ದ.

"ಇನ್ನು ನಡಿಯಣ್ಣ. ಹೊರಡೋಣ" ಎಂದ. ಸುಬ್ಬಣ್ಣ ಎದ್ದು ಹೊರಗೆ ಬಂದರು. ಶ್ರೀಧರ ರೂಮಿಗೆ ಬೀಗಹಾಕಿದ. ಇಬ್ಬರೂ ಚಾಮುಂಡೀ ಬಡಾವಣೆಯ ರಸ್ತೆ ಹಿಡಿದರು. ದಾರಿಯಲ್ಲಿ ಶ್ರೀಧರ ಕೇಳಿದ ಪ್ರಶ್ನೆಗಳಿ ಗೆಲ್ಲಾ ಸುಬ್ಬಣ್ಣ ಸಾವಧಾನವಾಗಿ ಉತ್ತರಿಸಿದರು.

"ಮನೇಲಿ ಎಲ್ಲಾ ಆರೋಗ್ಯವಾಗಿದ್ದಾರೇನಣ್ಣಾ."

"ಇದ್ದಾರಪ್ಪ. ನಿಮ್ಮಮ್ಮನಿಗೆ ಮಾತ್ರಾ ಮೈಲಿ ಹುಷಾರಿಲ್ಲ. ಈಚೆ ಗೊಂದು ಆರು ತಿಂಗಳಿಂದ ನಚ್ಚುನಚ್ಚಾಗೇ ಇದ್ದಾಳೆ."

"ಡಾಕ್ಟರಿಗೆ ತೋರಿಸಿ ಔಷಧೀ ಕೊಡಿಸಲಿಲ್ವೇನಣ್ಣಾ."

"ಅವಳೇ ಹೋಗಿ ಲೇಡೀಡಾಕ್ಟ್ರಹತ್ರ ಪರೀಕ್ಷೆ ಮಾಡಿಸಿಕೊಂಡು ಬಂದಳು. ಬೇಕಾದಷ್ಟು ಔಷಧೀ ಕುಡಿದಳು. ಇಂಜಕ್ಷನ್ನುಗಳೂ ಆದವು. ಏನಾದರೇನು. ಗುಣ ಕಂಡುಬರಲಿಲ್ಲ."

"ಹೇಗಿದ್ರೂ ಮೈಸೂರಿಗೆ ಬಂದಿದ್ದೀರಿ. ಅಮ್ಮನ್ನ ದೊಡ್ಡಾಸ್ಪತ್ರೆಗೆ ಕರೆದುಕೊಂಡು ಹೋಗಿ ತೋರಿಸೋಣ."

"ಇಲ್ಲಿಗೆ ಬರೋದ್ರಲ್ಲಿ ಅದೂ ಒಂದು ಉದ್ದೇಶವಿದೆ. ಎಲ್ಲಕ್ಕಿಂತ ಹೆಚ್ಚಾಗಿ ಅವಳು ನಿನ್ನ ನೋಡಬೇಕೂಂತ ಹಠಾಹಿಡಿದು ಕೂತುಬಿಟ್ಟಳು. ಆಫೀಸಿಗೆ ಒಂದುವಾರ ರಜಾ ಬರೆದುಹಾಕಿ ಹೊರಟುಬಂದದ್ದಾಯಿತು."

"ರಾಘಣ್ಣ ಹೇಗಿದ್ದಾನೆ. ಅವನು ಈ ವರ್ಷ ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಹಣ ಕಟ್ಟಿರಬೇಕಲ್ವೇ."

"ಹೌದು. ಕಟ್ಟಿದ್ದಾನೆ."

"ಕಮಲೂಗೆ ಪ್ಯಾಸಾಯಿತೇ."

"ಆಯಿತು. ಇದುವರೆಗೂ ದೇವರ ದಯೆಯಿಂದ ಎಲ್ಲವೂ ಸುಗಮವಾಗಿ ನಡೆದುಕೊಂಡು ಬಂದಿದೆ. ಈ ವರ್ಷ ನಿನ್ನದು ಡಿಗ್ರೀ ಪರೀಕ್ಷೆ. ನೀನು ಪರೀಕ್ಷೇಲಿ ತೇರ್ಗಡೆಯಾದೆಯೆಂದರೆ ಒಂದು ಘಟ್ಟಕ್ಕೆ ಬಂದ ಹಾಗಾಗತ್ತೆ."

"ಇಲ್ಲಿ ಯಾರ ಮನೇಲಿ ಇಳಿದಿದ್ದೀರಿ."

"ಶೇಷಗಿರಿರಾಯರು ಇಲ್ಲೇ ಇದ್ದಾರೆ. ಅವರ ಮನೇಲಿ."

"ಎಷ್ಟು ದಿನವಾಯಿತು ಅವರಿಲ್ಲಿಗೆ ಬಂದು."

"ನಿನಗೆ ಗೊತ್ತೇ ಇಲ್ವೇನು ! ಈಗಾಗಲೇ ವರ್ಷವಾಯಿತಲ್ಲಾ."

"ಯಾವ ಆಫೀಸಿನಲ್ಲಿದ್ದಾರೆ."

"ಇಲ್ಲಿ ಫುಡ್ ಅಸಿಸ್ಟೆಂಟ್ ಆಗಿದ್ದಾರೆ."

ಶ್ರೀಧರ ಮೌನವಾಗಿ ಕಾಲು ಹಾಕತೊಡಗಿದ. ಅವನು ಮಾತು ಬೆಳೆಸದೆ ತಟಸ್ಥನಾದುದನ್ನು ಕಂಡು ಸುಬ್ಬಣ್ಣನವರ ಕಪಾಳಕ್ಕೆ ಹೊಡೆದ ಹಾಗಾಯಿತು. ಮಗನ ಮನಸ್ಸು ಬದಲಾಯಿಸಿರಬಹುದು. ತನ್ನ ದುಡುಕು ವರ್ತನೆಗಾಗಿ ಅವನು ಪಶ್ಚಾತ್ತಾಪಪಟ್ಟಿರಬಹುದು. ಶೇಷಗಿರಿರಾಯರ ಮಗಳನ್ನು ಮದುವೆಯಾಗಲು ಅವನು ಒಪ್ಪಿದರೂ ಒಪ್ಪಬಹುದು ಎಂದೆಲ್ಲ ಸುಬ್ಬಣ್ಣ ಯೋಚಿಸಿಕೊಂಡಿದ್ದರು. ಕ್ಷಣಮಾತ್ರದಲ್ಲಿ ಅವರ ಊಹಾಪೋಹಗಳೆಲ್ಲವೂ ಬುಡಮೇಲಾಗಿ ಹೋದವು. ಪುನಃ ಅವನನ್ನು ಕೆಣಕಿ ಪ್ರಯೋಜನವಿಲ್ಲವೆಂದು ಸುಮ್ಮನಾದರು.

ಶೇಷಗಿರಿರಾಯರ ಮನೆ ಸಿಕ್ಕಿತು. ಇಬ್ಬರೂ ಮನೆಯೊಳಕ್ಕೆ ಹೋದರು. ಹಾಲಿನಲ್ಲಿ ಸುಶೀಲಮ್ಮನೂ ಭಾಗ್ಯಮ್ಮನೂ ಮಾತಾಡುತ್ತಾ ಕೂತಿದ್ದರು

"ನಿಮ್ಮ ಯಜಮಾನ್ರು ಬರ್ತಿದ್ದಾರೆ. ಭಾಗ್ಯಮ್ಮ" ಎನ್ನುತ್ತಾ ಸುಶೀಲಮ್ಮ ಎದ್ದು ನಿಂತರು.

"ಎಷ್ಟು ಬೇಗ ಬಂದ್ಬಿಟ್ರು. ಜತೇಲಿ ಯಾರಿದ್ದಾರೆ ನೋಡೀ ಸುಶೀಲಮ್ಮ."

"ನಿಮ್ಮ ಹುಡುಗನೂ ಬರ್ತಿದ್ದಾನೆ. ನಿಮ್ಮ ಹುಡುಗಾಂತಲೇ ಕಾಣತ್ತೆ." ಭಾಗ್ಯಮ್ಮ ಥಂಗನ್ನೆದ್ದುನಿಂತರು. ಬೀದಿಯ ಬಾಗಿಲಿಗೆ ಹೋಗಿ ತಮ್ಮ ಮಗನನ್ನು ಬಾಚಿ ತಬ್ಬಿಕೊಂಡುಬಿಟ್ಟರು.

"ಮಗೂ.........ಎಷ್ಟು ಬಡವಾಗಿಹೋಗಿದ್ದೀಯ........ಯಾಕಪ್ಪಾ ಒಂದು ಕಾಗದಾ ಕೂಡಾ ಹಾಕ್ಲಿಲ್ಲಾ ಅರುತಿಂಗಳಿಂದ. ನಿನ್ನ ಭಾಗಕ್ಕೆ ನಾವು ಸತ್ತುಹೋದವರೀಂತ ತಿಳಕೊಂಡ್ಯೇನು" ಎನ್ನುತ್ತಾ ಬಿಕಿಬಿಕ್ಕಿ ಅಳಲಾರಂಭಿಸಿದರು. ಧಾರಾಕಾರವಾಗಿ ಕಣ್ಣೀರು ಹರಿದುಹೋಯಿತು. ತಾಯಿಯ ಮಾತು ಕೇಳಿ ಶ್ರೀಧರನ ಕರುಳೇ ಕಿತ್ತುಬಂತು. ಅವನೂ ಬಿಕ್ಕಿಬಿಕ್ಕಿ ಅಳತೊಡಗಿದ. ಭಾಗ್ಯಮ್ಮನ ಹಸ್ತ ಮಗನ ಮುಂದಲೆಯ ಮೇಲೆ ಹಾದು ಅವನ ಕೆನ್ನೆಗಳನ್ನು ನೇವರಿಸತೊಡಗಿತು. ಇಬ್ಬರ ಹೃದಯಗಳೂ ಭಾರವಾಗಿದ್ದವು. ಹತ್ತುನಿಮಿಷ ನಿರರ್ಗಳವಾಗಿ ಕಣ್ಣೀರು ಸುರಿಸಿ ಇಬ್ಬರೂ ಹೃದಯವನ್ನು ಹಗುರಮಾಡಿಕೊಂಡರು.

"ಬಹಳ ಬಡವಾಗಿ ಹೋಗಿದ್ದೀಯಾ ಮಗೂ. ಊರಲ್ಲಿದ್ದಾಗ ಮೈಕೈ ತುಂಬಿಕೊಂಡು ಲಕ್ಷಣವಾಗಿದ್ದೆ. ಎರಕೊಂಡು ಎಷ್ಟು ದಿನವಾಯಿತಪ್ಪಾ."

"ದಿನಗಳದೇನು ಲೆಕ್ಕವಮ್ಮ. ಎಷ್ಟೋ ತಿಂಗಳಾಗಿಬಿಟ್ಟಿದೆ."

"ಯಾಕಪ್ಪಾ ಹಾಗಂತೀಯ. ಓದೋಹುಡುಗ. ವಾರಕ್ಕೊಂದು ಸಲವಾದ್ರೂ ನೀರು ಹಾಕ್ಕೊಳ್ಳದಿದ್ರೆ ಹೇಗೆ."

"ನೀನು ಹೇಳೋದು ನಿಜವಮ್ಮ. ಆದರೆ ಅನುಕೂಲವಿರಬೇಕಲ್ಲ."

"ಊಟಾ ತಿಂಡೀ ಎಲ್ಲಿ ಮಾಡ್ತಿದ್ದೀಯಾ."

"ಹೋಟಲಲ್ಲಿ."

"ನಿನಗೆ ಹೋಟಲೂಟಾ ಸೇರುತ್ಯೇ."

"ಸೇರುತ್ತೋ ಇಲ್ವೋ ಹೊಟ್ಟೇ ಕೇಳಬೇಕಲ್ಲ."

"ಚೆನ್ನಾಯ್ತಪ್ಪಾ ಚೆನ್ನಾಯ್ತು."

ಸುಶೀಲಮ್ಮ ಮೂರು ಬೆಳ್ಳಿಯ ಲೋಟಾಗಳಲ್ಲಿ ಬಿಸಿ ಬಿಸಿ ಕಾಫಿ ತಂದರು. ಒಂದು ಲೋಟಾ ತೆಗೆದುಕೊಂಡು ಹೋಗಿ ಸುಬ್ಬಣ್ಣನವರ ಮುಂದಿಟ್ಟರು.

"ತಗೊಳ್ಳೀ ಭಾಗ್ಯಮ್ಮಾ ಕಾಫೀ. ನೀನೂ ತಗೋಪ್ಪಾ ಶ್ರೀಧರಾ. ಎಷ್ಟುಹೊತ್ತಿಗೆ ಊಟಾಮಾಡಿದ್ರೋ ಏನೋ. ಹಸಿವಾಗಿದ್ರೆ ಏಳು. ಬಡಿಸ್ತೀನಿ.''

ಶ್ರೀಧರ ಸಂಕೋಚದಿಂದ, 'ಹಸಿವೇನೂ ಇಲ್ಲಾಮ್ಮ. ಬೆಳಿಗ್ಗೆ ಹತ್ತು ಗಂಟೆಗೆ ಊಟಾಮಾಡಿದ್ದೀನಿ' ಎಂದ. ಎಲ್ಲರೂ ಕಾಫೀಕುಡಿದರು. ಸುಶೀಲಮ್ಮ ಕೆಲಸದ ಮೇಲೆ ಅಡಿಗೇಮನೆಗೆ ಹೊರಟುಹೋದರು.

"ಅಣ್ಣಾ ನಿನ್ನ ಖಾಯಿಲೇ ವಿಷಯ ಹೇಳಿದ. ಕೇಳಿ ಬಹಳ ದುಃಖ ವಾಯಿತಮ್ಮ."

"ಹೌದು ಮಗೂ. ನಮ್ಮ ಶಾರದೇ ಹೋದಾಗಿನಿಂದ ಮೂಲೆಗೆ ಬಿದ್ದುಬಿಟ್ಟೆ."

ಸ್ವಲ್ಪ ಹೊತ್ತಿಗೆಲ್ಲಾ ಸುಶೀಲಮ್ಮ ಮೂರು ಬೆಳ್ಳಿಯ ತಟ್ಟೆಗಳನ್ನು ಕೈಲಿಟ್ಟುಕೊಂಡು ಬಂದರು. ಮೂವರ ಮುಂದೆಯೂ ಒಂದೊಂದು ತಟ್ಟೆಯಿಟ್ಟರು. ತಟ್ಟೆಯಲ್ಲಿದ್ದ ತಿಂಡೀನೋಡಿ ಭಾಗ್ಯಮ್ಮ ಕೇಳಿದರು:

"ಇದೇನು ಸುಶೀಲಮ್ಮ. ಬಹಳ ಉಪಚಾರಮಾಡ್ತಿದ್ದೀರಿ. ನನಗೇಕೋ ಸಂಕೋಚವಾಗುತ್ತಮ್ಮ. ನಾವು ಬಂದಾಗಿನಿಂದ ನಿಮಗೆ ಪುರಸತ್ತೇಇಲ್ಲ."

"ಚೆನ್ನಾಗಿ ಹೇಳಿದಿರಿ ಭಾಗ್ಯಮ್ಮ. ನೀವೇನು ಹೊಸಬರೇ. ಊರಲ್ಲಿದ್ದಾಗ ಇಂಥಾ ತಿಂಡೀತೀರ್ಥ ಎಷ್ಟು ಮಾಡಿಕೊಟ್ಟಿದ್ದೀರೋ. ಇದಕ್ಕೆ ಹತ್ತರಷ್ಟು ನಮ್ಮ ಮನೇಲಿ ದುಡೀತಿದ್ರಲ್ಲಾ. ಅದೆಲ್ಲಾ ಮರೆಯೋಕ್ಕೆ ಸಾಧ್ಯವೇ. ನೀವು ನನ್ನ ಒಡಹುಟ್ಟಿದ ಅಕ್ಕನಿಗಿಂತಲೂ ಹೆಚ್ಚು."

"ಮುಖ್ಯ ನಿಮ್ಮ ವಿಶ್ವಾಸ ಸುಶೀಲಮ್ಮ. ಇದೇನು ಹೆಸರುಬೇಳೇ ಕೋಸಂಬರೀ ಮಾಡಿದ್ದೀರಿ. ನನಗೆ ಇಷ್ಟಾಂತ ಮಾಡಿದಿರಾ.''

"ನಿಮಗೊಬ್ಬರಿಗೇ ಅಲ್ಲ. ನಿಮ್ಮ ಯಜಮಾನರಿಗೂ ಇಷ್ಟವೇಂತ ಮಧ್ಯಾಹ್ನದ ತಿಂಡಿಗೆ ಅದನ್ನೇ ಮಾಡಿದೆ."

ಎಲ್ಲರೂ ತಿಂಡಿತಿಂದರು. ಸ್ಕೂಲಿಗೆ ಹೋಗಿದ್ದ ಹುಡುಗರೆಲ್ಲರೂ ಮನೆಗೆ ಬಂದರು.

"ನಾನು ಸ್ವಲ್ಪ ಕಾಲೇಜು ಕಡೆ ಹೋಗ್ತೀನಮ್ಮ. ಕೆಲಸವಿದೆ" ಎಂದು ಶ್ರೀಧರ ಎದ್ದುನಿಂತ.

"ಏನಪ್ಪಾ ಅವಸರ. ಇನ್ನೂ ನೆಟ್ಟಗೆ ನಾಲ್ಕು ಮಾತು ಕೂಡಾ ಆಡಲಿಲ್ಲ. ಅಷ್ಟರಲ್ಲೇ ಹೊರಟುಬಿಟ್ಟೆಯಲ್ಲಾ."

"ಈವತ್ತು ಕಾಲೇಜಲ್ಲಿ ಡಿಬೇಟ್ ಇದೆ. ನಾನು ಹೋಗಲೇಬೇಕಾಗಿದೆ.

"ಹಾಗಾದ್ರೆ ಎಷ್ಟುಹೊತ್ತಿಗೆ ಬರ್ತೀಯ."

"ಇನ್ನೇಕೆ ಬರಬೇಕಮ್ಮ. ಕಾಲೇಜಿಂದ ನೆಟ್ಟಗೆ ರೂಮಿಗೇ ಹೋಗ್ತೀನಿ. ರೂಮಿನ ಹತ್ತಿರವೇ ಊಟದ ಹೋಟಲಿದೆ."

"ನಾಳೀ ಬೆಳಿಗ್ಗೆ ಮನೇಕಡೆ ಬರ್ತೀಯಾ ತಾನೇ."

"ಬರದೇ ಇರ್ತೇನೆಯೇ. ಖಂಡಿತಾ ಬರ್ತೀನಿ."

ಶ್ರೀಧರ ಮನೆಯಿಂದ ಹೊರಬಿದ್ದ. ಮನೆಯ ಮುಂದೆ ದೊಡ್ಡ ದೊಂದು ಸಿಟೀ ಬಸ್ಸು ಬಂದು ನಿಂತಿತು. ಅಹಲ್ಯೆ ಕೈತುಂಬಾ ಪುಸ್ತಕ ಗಳನ್ನು ಪೇರಿಸಿಕೊಂಡು ಬಸ್ಸಿನಿಂದಿಳಿದಳು. ನೆಟ್ಟಗೆ ಗೇಟುತೆಗೆದು ಒಳಕ್ಕೆ ಬಂದಳು. ಶ್ರೀಧರ ಅವಳನ್ನೇ ರೆಪ್ಪೆಬಡಿಯದೆ ನೋಡುತ್ತಾ ಹೆಜ್ಜೆಹಾಕಿದ. ಅವಳೂ ಹಾಗೆಯೇ ಅವನನ್ನು ಎವೆಯಿಕ್ಕದೆ ಈಕ್ಷಿಸಿದಳು. ನಸುನಗೆ ಅವಳ ಕೆಂದುಟಿಗಳ ಮೇಲೆ ಲಾಸ್ಯವಾಡಿತು. ಯಾವುದೋ ಭಾವನಾಪರವಶತೆಗೆ ಈಡಾಗಿ ಮನೆಯೊಳಕ್ಕೆ ಓಡಿದಳು. ಹಾಗೆ ಓಡಿಹೋಗುವಾಗ ಅವಳ ನೀಳವಾದ ಜಡೆ ಅವಳ ಬೆನ್ನಿನ ಮೇಲೆ ಲಾಸ್ಯವಾಡುತ್ತಿತ್ತು. ಅವಳ ತುರುಬನ್ನಲಂಕರಿಸಿದ್ದ ಶಾವಂತಿಗೇ ಹೂವಿನ ದಂಡೆ ಅವಳ ಬೆನ್ನಿನ ಮೇಲೆ ಜೋತಾಡುತ್ತಿತ್ತು. ಶ್ರೀಧರ ಅಹಲ್ಯೆಯ ಒನಪು ಒಯ್ಯಾರಗಳನ್ನು ನೋಡಿ ಮನಸ್ಸಲ್ಲೇ ನಕ್ಕ. 'ಹುಚ್ಚುಹುಡುಗಿ. ಏಕೋ ಕಾಣೆ ನನ್ನ ನೋಡಿ ಓಡಿ ಹೋದಳು' ಎಂದುಕೊಂಡ. ಹೊತ್ತಾಗಿ ಹೋಯಿತೆಂದು ಬಿರಬಿರನೆ ಕಾಲೇಜು ಕಡೆ ಕಾಲು ಹಾಕಿದ.

## ೩೫

ಸುಬ್ಬಣ್ಣ ಮೈಸೂರಿಗೆ ಬಂದು ವಾರವಾಗಿತ್ತು. ಅವರ ರಜ ಮುಗಿದು ಹೋಯಿತು. ಅವರು ಊರಿಗೆ ಹೊರಡುವಹಾಗಿರಲಿಲ್ಲ. ಭಾಗ್ಯಮ್ಮನ ದೇಹಸ್ಥಿತಿ ಇದ್ದಕ್ಕಿದಂತೆಯೇ ಬಿಗಡಾಯಿಸಿಕೊಂಡಿತು. ಇನ್ನೊಂದು ವಾರ ರಜಾ ಮಂಜೂರು ಮಾಡಬೇಕೆಂದು ಆಫೀಸಿಗೆ ಕಾಗದಾ ಬರೆದು ಹಾಕಿದರು. ಒಂದು ದಿನ ಬೆಳಿಗ್ಗೆ ಗಾಡೀ ಮಾಡಿಕೊಂಡು ಹೆಂಡತಿಯನ್ನು ಕೃಷ್ಣರಾಜೇಂದ್ರ ಆಸ್ಪತ್ರೆಗೆ ಕರೆದುಕೊಂಡು ಹೋದರು. ಎಷ್ಟು ಹೊತ್ತುಕಾದರೂ ಅವತ್ತು ಅವರಿಗೆ ದೊಡ್ಡ ಡಾಕ್ಟರ ದರ್ಶನ ಲಭಿಸಲಿಲ್ಲ. ನಿರಾಶರಾಗಿ ಮನೆಗೆ ಹಿಂದಿರುಗಿದರು. ಮರುದಿನ ಶೇಷಗಿರಿರಾಯರಿಗೆ ಗೊತ್ತಿದ್ದ ಬೇರೊಬ್ಬ ಡಾಕ್ಟರಿಂದ ಪರಿಚಯಪತ್ರ ತೆಗೆದುಕೊಂಡು ಆಸ್ಪತ್ರೆಗೆ ಹೋದರು. ಪರಿಚಯ ಪತ್ರ ಓದಿಕೊಂಡು ಡಾಕ್ಟರು ಸುಬ್ಬಣ್ಣನವರನ್ನು ಬೇಗ ಕರೆಸಿಕೊಂಡರು. ಸುಬ್ಬಣ್ಣ ಹೆಂಡತಿಯ ದೇಹಸ್ಥಿತಿಯ ಸಂಕ್ಷಿಪ್ತ ಪರಿಚಯವನ್ನು ಡಾಕ್ಟರಿಗೆ ಮಾಡಿಕೊಟ್ಟರು. ಡಾಕ್ಟರು ಬೇರೊಂದು ರೂಮಿಗೆ ಭಾಗ್ಯಮ್ಮನನ್ನು ಕರೆದುಕೊಂಡು ಹೋಗಿ ಪರೀಕ್ಷೆ ಮಾಡಿದರು. ಹೊರಗೆ ಬಂದು ಒಂದು ಚೀಟೀ ಬರೆದು ಸುಬ್ಬಣ್ಣನವರ ಕೈಗಿತ್ತು, 'ಇದನ್ನ ತಗೊಂಡು ಹೋಗಿ ಎಕ್ಸ್‌ರೇ ವಾರ್ಡಿನಲ್ಲಿ ತೋರಿಸಿ. ಅಲ್ಲಿ ಎಕ್ಸ್‌ರೇ ತೆಗೀತಾರೆ. ನಾಳೆ ಎಕ್ಸ್‌ರೇ ರಿಸಲ್ಟ್ ನೋಡಿಕೊಂಡು ಯಾವುದೊಂದೂ ಹೇಳ್ತೀನೆ" ಎಂದರು.

ಸುಬ್ಬಣ್ಣ ಹೆಂಡತಿಯನ್ನು ಎಕ್ಸ್‌ರೇ ವಾರ್ಡಿಗೆ ಕರೆದುಕೊಂಡು ಹೋದರು. ಅಲ್ಲಿಯೂ ಅಸಾಧ್ಯವಾದ ನೂಕುನುಗ್ಗಲಿತ್ತು. ಹೇಗೋ ನುಸುಳಿಕೊಂಡು ಸುಬ್ಬಣ್ಣ ತಮ್ಮ ಹೆಂಡತಿಯ ಎಕ್ಸ್‌ರೇ ತೆಗೆಸಿದರು. ಆಸ್ಪತ್ರೆಯವರು ಕೇಳಿದಷ್ಟು ಹಣ ತೆತ್ತರು. ಮನೆಗೆ ಬರುವಹೊತ್ತಿಗೆ ಒಂದು ಗಂಟೆಯಾಗಿತ್ತು.

ಸಂಜೆ ಐದಕ್ಕೆ ಸರಿಯಾಗಿ ಶ್ರೀಧರ ಬಂದ. ಸುಶೀಲಮ್ಮ ಅವನಿಗೆ ಮಧ್ಯಾಹ್ನ ಮಾಡಿದ್ದ ತಿಂಡೀ ತಂದುಕೊಟ್ಟರು. ಅದೇತಾನೇ ಆಫೀಸಿನಿಂದ ಬಂದಿದ್ದ ಶೇಷಗಿರಿರಾಯರು ತಿಂಡೀ ತಿನ್ನುತ್ತಿದ್ದ ಶ್ರೀಧರನನ್ನೇ ದಿಟ್ಟಿಸಿ ನೋಡತೊಡಗಿದರು. ಹಳೆಯ ನೆನಪುಗಳು ಒಂದೊಂದಾಗಿ ಅವರ ಸ್ಮೃತಿಪಥದಲ್ಲಿ ತೇಲಿ ಬಂದವು. 'ನನ್ನ ಅಳಿಯನಾಗಬೇಕಾಗಿದ್ದ ಹುಡುಗ. ಅವನಿಗೇ

ಅದೃಷ್ಟವಿಲ್ಲವೋ ನಮಗೇ ಲಭ್ಯವಿಲ್ಲವೋ ತಿಳಿಯದು. ಏನೋ ಮಾಡಲು ಹೋಗಿ ಅದೇನೋ ಆಯಿತು. ನನ್ನ ದೆಸೆಯಿಂದ ತಂದೇ ಮಗ ನಿಷ್ಠೂರ ಕಟ್ಟಿಕೊಂಡರು. ಇದರಲ್ಲಿ ಯಾರ ತಪ್ಪು ಹೆಚ್ಚು ಯಾರದು ಕಮ್ಮಿ ಎಂದು ಹೇಳುವ ಹಾಗೇ ಇಲ್ಲ. ಒಂದಲ್ಲ ಒಂದು ವಿಧದಲ್ಲಿ ಎಲ್ಲರೂ ತಪ್ಪಿತಸ್ಥರೇ. ಅಂತೂ ಇನ್ನೂ ದೈವಚಿತ್ತಕ್ಕೆ ಬಂದ ಹಾಗೆ ಕಾಣಲಿಲ್ಲ ಅಹಲ್ಯೆಯ ವಿವಾಹ' ಎಂಬುದಾಗಿ ಮೆಲುಕು ಹಾಕತೊಡಗಿದರು. ಅಷ್ಟುಹೊತ್ತಿಗೆ ಅಹಲ್ಯೆಯ ಸಂಗೀತದ ಮೇಷ್ಟ್ರು ಮನೆಗೆ ಬಂದರು. ಅವಳು ಕೊಠಡಿಗೆ ಹೋಗಿ ಕೂತಳು. ಮೇಷ್ಟ್ರು ಅವಳಿಗೆ ಹೊಸ ಪಾಠವೇನನ್ನೂ ಮಾಡಲಿಲ್ಲ. "ನಿನ್ನೇ ಹೇಳಿಕೊಟ್ಟ ಕೀರ್ತನೇ ಹೇಳಮ್ಮಾ" ಎಂದರು. ಅಹಲ್ಯೆ ಕಲ್ಯಾಣಿ ರಾಗವನ್ನು ವಿಸ್ತಾರ ವಾಗಿ ಆಲಾಪನೆಮಾಡಿ 'ನಿಧಿಚಾಲ ಸುಖಮಾ' ಎಂಬ ಕೀರ್ತನೆಯನ್ನು ಹಾಡಿದಳು.ಹಾಲಿನಲ್ಲಿ ಕೂತು ಮಗಳ ಸಂಗೀತ ಸುಧೆಯನ್ನಾಸ್ವಾದಿಸುತ್ತಿದ್ದ ಶೇಷಗಿರಿರಾಯರು ಆನಂದಪರವಶರಾಗಿ ಹೋದರು. 'ಎಂಥಾ ದಿವ್ಯನಾದ ಕಂಠ !!' ಎಂದು ಮಗಳನ್ನು ತಾರೀಫು ಮಾಡತೊಡಗಿದರು. ಅಹಲ್ಯೆಯ ಸಂಗೀತ ಕೇಳಿದವರ್ಯಾರೂ ಅವರ ಮಾತನ್ನು ಅಲ್ಲಗಳೆಯುವ ಹಾಗಿರಲಿಲ್ಲ. ಶ್ರೀಧರ ಹುಟ್ಟು ಸಂಗೀತ ಪ್ರೇಮಿ. ಅದರಲ್ಲೂ ಕಲ್ಯಾಣೀ ರಾಗ ಅವನಿಗೆ ಅತ್ಯಂತ ಪ್ರಿಯವಾದ ರಾಗ. ಅವನಿಗರಿವಿಲ್ಲದೆಯೇ ಅವನ ಬಾಯಿಂದ ಆಗಾಗ್ಗೆ 'ಶಹಭಾಸ್! ಭೇಷ್!' ಎಂಬ ಉದ್ಗಾರ ಹೊರಬೀಳುತ್ತಿತ್ತು.

"ನಿಮ್ಮ ಮಗಳಿಗೆ ಸೊಗಸಾದ ಕಂಠವಿದೆ ಶೇಷಗಿರಿರಾಯರೇ. ಬಹಳ ಚೆನ್ನಾಗಿ ಹಾಡುತ್ತಾಳೆ. ಕೇಳಿ ಬಹಳ ಸಂತೋಷವಾಯಿತು" ಎಂದ ಶ್ರೀಧರ. ಅವನ ಬಾಯಲ್ಲಿ ಬಂದ ಹೊಗಳಿಕೆ ಕೇಳಿ ಶೇಷಗಿರಿರಾಯರ ಮುಖ ಹಿಗ್ಗಿಹೋಯಿತು. ಸ್ವಲ್ಪ ಹೊತ್ತಿಗೆಲ್ಲಾ ಸಂಗೀತದ ಮೇಷ್ಟ್ರು ತಮಗೇನೋ ತುರ್ತು ಕೆಲಸವಿದೆಯೆಂದು ಹೇಳಿ ಹೊರಟುಹೋದರು. ಶೇಷಗಿರಿರಾಯರು ಬಟ್ಟೇ ಹಾಕಿಕೊಂಡು ಕ್ಲಬ್ಬಿಗೆ ಹೊರಟರು. ಶ್ರೀಧರ ತನ್ನ ಮುಂದಿನ ಕಾರ್ಯಕ್ರಮವೇನೆಂದು ಯೋಚಿಸುತ್ತಾ ಹಾಲಿನಲ್ಲಿ ಶತಪಥ ತಿರುಗಾಡತೊಡಗಿದ. ಮನೆಯ ಮುಂದಿದ್ದ ಸಣ್ಣದಾದರೂ ಸುಂದರವಾದ ಹೂದೋಟ ಅವನ ನೋಟವನ್ನು ಸೆಳೆಯಿತು. ಹಾಗೇ ತೋಟದಲ್ಲಿ ಸುತ್ತಾಡಿಕೊಂಡು ಬರೋಣವೆಂದು ಹೊರಟ. ತೋಟಕ್ಕೆ ಸೇರಿದ ಹಾಗೆಯೆ

ಮನೆಯ ಮುಂದೆ ಮಲ್ಲಿಗೆಯ ಬಳ್ಳಿ ಚಪ್ಪರವಾಗಿ ಹಬ್ಬಿಕೊಂಡಿತ್ತು. ತೋಟದ ತುಂಬಾ ಬಣ್ಣಬಣ್ಣದ ಹೂಗಳು ಕಂಗೊಳಿಸುತ್ತಿದ್ದವು. ಗುಲಾಬಿ ಗಿಡಗಳೊಂದುಕಡೆ ಸೊಂಪಾಗಿ ಬೆಳೆದಿದ್ದವು. ಎಲ್ಲಾ ಗಿಡಗಳಲ್ಲೂ ಹೂಗಳು ಅರಳಿದ್ದವು. ಶ್ರೀಧರ ಒಂದು ಹೂವು ಕಿತ್ತು ಅದರ ಸೌರಭವನ್ನು ಆಘ್ರಾಣಿಸಿದ. ಹಾಗೆಯೇ ತಾನು ಹಿಂದೆ ಎಂದೋ ಓದಿದ್ದ ಕವಿತೆಯ ಸಾಲುಗಳನ್ನು ಗುಣುಗುಣಿಸತೊಡಗಿದ :

‘ ತೋಟದ ತುಂಬಾ ರೋಜದ ಹೂವು !<br>
ಹಿಂದೆಂದು ಕಾಣದ ಚೆಲುವಿನ ಹೂವು ! ’

“ಹೌದು. ಚೆಲುವಿನ ಹೂವು” ಎನ್ನುತ್ತಾ ಯಾರೋ ಕಿಲಕಿಲನೆ ನಕ್ಕಂತೆ ಆಯಿತು. ಶ್ರೀಧರ ಆಶ್ಚರ್ಯಚಕಿತನಾಗಿ ಹಿಂದಿರುಗಿ ನೋಡಿದ. ಅಹಲ್ಯೆ ನಗುತ್ತಾ ನಿಂತಿದ್ದಳು. ನಾಚಿಕೆಯಿಂದ ಶ್ರೀಧರನ ಮುಖ ಇಷ್ಟಾಗಿ ಹೋಯಿತು. ತಲೆ ತಗ್ಗಿಸಿ ನಿಂತುಬಿಟ್ಟ. ಅಹಲ್ಯೆ ಲತೆಯಂತೆ ಬಳುಕುತ್ತಾ ಅವನ ಹತ್ತಿರ ಬಂದು ನಿಂತಳು.

“ಏಕೆ ಸುಮ್ಮನಾಗಿ ಬಿಟ್ಟಿರಿ. ಏನೋ ಹಾಡಿಕೊಳ್ಳುತ್ತಿದ್ದಿರಲ್ಲಾ.” ತನ್ನ ಜಡೆಯ ಕೊನೆಯನ್ನು ಗಂಟುಹಾಕುತ್ತಾ ಕೇಳಿದಳು ಅಹಲ್ಯೆ. ಅವಳ ಮುಖದಲ್ಲಿ ತುಂಟು ನಗೆ ಲಾಸ್ಯವಾಡುತ್ತಿತ್ತು.

ಶ್ರೀಧರ ಅವಳ ಧಾರ್ಷ್ಟ್ಯಕವನ್ನು ನೋಡಿ ಬೆರಗಾಗಿಹೋದ. ‘ಅಹಲ್ಯೆಯೆಂದರೆ ಏನೋಂತಿದ್ದೆ. ಪರವಾಗಿಲ್ಲ. ಹುಡುಗೀ ಒಳ್ಳೇ ಸುಟಿಯಾಗಿದ್ದಾಳೆ’ ಎಂದುಕೊಂಡ ಮನಸ್ಸಿನಲ್ಲಿ.

“ನೀವು ಒಳ್ಳೇ ರಸಿಕರು. ಕವಿಗಳೂಂತ ಕೇಳಿದ್ದೀನಿ. ಹೋದ ವರ್ಷ ಕಾಲೇಜಲ್ಲಿ ನಿಮಗೊಂದು ಬಂಗಾರದ ಪದಕ ಬಹುಮಾನ ಬಂದಿರುವ ಸಮಾಚಾರವೂ ಗೊತ್ತು. ಇದುವರೆಗೂ ನಿಮ್ಮ ಭೇಟಿಯಾಗಿರಲಿಲ್ಲ. ಈವತ್ತು ಆ ಸುಯೋಗ ನನಗೆ ಲಭಿಸಿತು. ಬಹಳ ಸಂತೋಷ.”

“ನನಗೂ ಬಹಳ ಸಂತೋಷವಾಗಿದೆ ಅಹಲ್ಯಾ. ಈಗ ಯಾವ ಕ್ಲಾಸಿನಲ್ಲಿ ಓದ್ತಿದ್ದೀಯಾ ? ”

“ಸೀನಿಯರ್ ಇಂಟರಲ್ಲಿದ್ದೇನೆ.”

“ಆರ್ಟ್ಸೋ ಸೈನ್ಸೋ ? ”

"ಆರ್ಟ್ಸ್ ತಗೊಂಡಿದ್ದೇನೆ."

"ಬಹಳ ಸಂತೋಷ."

"ಸಂಗೀತದಲ್ಲಿ ನಿಮಗೆ ಬಹಳ ಅಭಿರುಚಿಯೆಂದು ಕಾಣುತ್ತೆ ? "

"ಹೌದು. ಈವತ್ತು ನಿನ್ನ ಹಾಡುಗಾರಿಕೆ ಬಹಳ ಸೊಗಸಾಗಿತ್ತು. ಸಂಗೀತ ಕಲೆ ನಿನಗೆ ಚೆನ್ನಾಗಿ ಸಾಧಿಸಿದೆ."

ಶ್ರೀಧರನ ಮಾತು ಕೇಳಿ ಅಹಲ್ಯೆಗೆ ಹಿಡಿಸಲಾರದ ಸಂತೋಷವುಂಟಾಯಿತು. ಅಭಿಮಾನಪೂರ್ವಕವಾಗಿ ಅವನನ್ನೊಮ್ಮೆ ಓರೆನೋಟದಿಂದ ನೋಡಿದಳು.

"ನಿಮ್ಮನ್ನೊಂದು ವಿಷಯ ಕೇಳಬೇಕೆಂದಿದ್ದೇನೆ. ನೀವು ಆಗಬಹುದೆಂದರೆ ಹೇಳ್ತೇನೆ."

"ಅಗತ್ಯವಾಗಿ ಹೇಳು ಅಹಲ್ಯಾ."

"ನೀವು ನನ್ನನ್ನು ಮದುವೆಯಾಗುವುದಿಲ್ಲವೆಂದು ಪ್ರತಿಜ್ಞೆ ಮಾಡಿರುವಿರಂತೆ ನಿಜವೇ !"

ಶ್ರೀಧರ ಅವಳ ಪ್ರಶ್ನೆಗೆ ಅಪ್ರತಿಭನಾಗಿಹೋದ. ಅವನು ಆ ಪ್ರಶ್ನೆ ನಿರೀಕ್ಷಿಸಿರಲಿಲ್ಲ. ಅವಳಿಗೇನು ಉತ್ತರಿಸಬೇಕೆಂಬುದೇ ಹೊಳೆಯಲಿಲ್ಲ.

"ಏಕೆ ಅಹಲ್ಯಾ ಹಾಗೆ ಕೇಳುತ್ತೀ ? "

"ಕೇಳಲು ನನಗೆ ಹಕ್ಕಿದೆ. ನನ್ನನ್ನು ಯಾವ ಕಾರಣದಿಂದ ಬೇಡಾ ಅಂದಿರಿ ? "

"ಕಾರಣ ಇದೇ ಯೆಂದು ಸ್ಪಷ್ಟವಾಗಿ ಹೇಳಲಾರೆ. ಮುಖ್ಯ ಏಕೋ ಮನಸ್ಸು ಒಪ್ಪಲಿಲ್ಲ. ಅಷ್ಟು ಮಾತ್ರ ಹೇಳಬಲ್ಲೆ."

"ಮನಸ್ಸೊಪ್ಪಲಿಲ್ಲವೆಂದು ನಿಮ್ಮನ್ನೇ ನಂಬಿಕೊಂಡಿರುವ ಒಬ್ಬ ನಿರಪರಾಧಿಯಾದ ಹುಡುಗಿಯ ತಲೇ ಮೇಲೆ ಕಲ್ಲು ಹಾಕಬೇಡಿ. ಚೆನ್ನಾಗಿ ಯೋಚನೆ ಮಾಡಿ ಹೇಳಿ. ನಿಮಗೆ ಹೊಂದಿಕೊಂಡು, ನಿಮ್ಮ ಆಶೆ ಆಕಾಂಕ್ಷೆಗಳನ್ನು ಅರ್ಥಮಾಡಿಕೊಂಡು ಬಾಳ್ವೆ ನಡೆಸಬಲ್ಲ ಯೋಗ್ಯತೇ ನನಗಿಲ್ಲವೆ ? "

"ಇಲ್ಲವೆಂದವರು ಯಾರು ? "

"ನೀವೇ ಅಲ್ಲವೇ."

"ಸುಮ್ಮನೇ ನನ್ನ ಮೇಲೆ ಇಲ್ಲದ ಅಪವಾದ ಹೊರಿಸಬೇಡ."

"ಅಪವಾದವಲ್ಲ. ಇರೋ ವಿಷಯ ಹೇಳ್ತಿದ್ದೇನೆ."

"ಇದನ್ನು ರುಜುವಾತು ಮಾಡಬಲ್ಲೆಯಾ ?"

"ಓಹೋ. ಈ ಮದುವೆಗೆ ನಿಮ್ಮ ತಂದೆತಾಯಿಗಳ ಒಪ್ಪಿಗೆ ಸಂಪೂರ್ಣ ವಾಗಿದೆ. ನನ್ನ ತಂದೆತಾಯಿಗಳೂ ಮನಸಾರೆ ಒಪ್ಪಿದ್ದಾರೆ. ನಾನು ಬಾಲ್ಯದಿಂದಲೂ ಅಂದರೆ ನನಗೆ ನಿಮ್ಮ ಪ್ರಥಮ ಪರಿಚಯವಾದಾಗಿನಿಂದಲೂ ನೀವೇ ನನ್ನ ಭಾವೀ ಪತಿದೇವರೆಂದು ತ್ರಿಕರಣಪೂರ್ವಕವಾಗಿ ನಂಬಿಕೊಂಡು ಬಂದಿದ್ದೇನೆ. ಒಂದಲ್ಲ ಒಂದು ದಿನ ನಿಮ್ಮ ಮನಸ್ಸನ್ನೊಲಿಸಿಕೊಳ್ಳಬಲ್ಲೆ ನೆಂಬ ದೃಢ ವಿಶ್ವಾಸದಿಂದ ನಮ್ಮ ತಂದೆ ನನಗೆ ಗೊತ್ತುಮಾಡಿದ ಹುಡುಗರ ನ್ನೆಲ್ಲಾ ತಿರಸ್ಕರಿಸುತ್ತಿದ್ದೇನೆ. ನೀವು ಮಾತ್ರ ನನ್ನ ಹೃದಯವನ್ನರಿತು ಕೊಳ್ಳದೆ ನನ್ನ 'ಕನಸಿನ ಮನೆ'ಯನ್ನು ಪುಡಿಪುಡಿ ಮಾಡಿ ಹಾಕುತ್ತಿದ್ದೀರಿ. ಈಗ ಹೇಳಿ ಯಾರು ಹೊಣೆಗಾರರೆಂದು ?"

ಶ್ರೀಧರನ ಬಾಯೇ ಕಟ್ಟಿಹೋಯಿತು. ಅವನ ಬುದ್ಧಿಗೇನೂ ಹೊಳೆಯ ಲಿಲ್ಲ. ಆದರೂ ಬಂದ ಗಂಡಾಂತರದಿಂದ ಹೇಗಾದರೂ ಪಾರಾಗಬೇಕೆಂದು ಯೋಚಿಸಿ ಹೇಳಿದ.

"ಈಗಲೂ ನಿನ್ನನ್ನು ಮದುವೆಯಾಗಲು ನನ್ನದೇನೂ ಅಭ್ಯಂತರವಿಲ್ಲ ಅಹಲ್ಯಾ. ಆದರೆ ನೀನು ಶ್ರೀಮಂತರ ಮಗಳು. ಬಡತನದ ಜೀವನವನ್ನು ತಬ್ಬಿಕೊಳ್ಳಲು ಸಿದ್ಧಳಾಗಿರುವೆಯಾ ಹೇಳು. ದಾರಿದ್ರ್ಯದ ಕಷ್ಟಕಾರ್ಪಣ್ಯ ಗಳನ್ನು ಅನುಭವಿಸುವುದು ಅಷ್ಟು ಸುಲಭವಲ್ಲ. ನಾನೊಬ್ಬ ಆದರ್ಶ ಜೀವಿ. ಆದರ್ಶದ ಬಿಸಿಲ್ಗುದುರೆಯ ಬೆನ್ನು ಹಿಡಿದು ಓಡತಕ್ಕವನ ದಾರಿ ಪೆಡಸು ದಾರಿ. ನೀನು ತಿಳಿದುಕೊಂಡಿರುವಷ್ಟು ಸುಗಮವಲ್ಲ. ನಾನೊಬ್ಬನೇ ಕಷ್ಟ ಪಡುವುದಲ್ಲದೆ ನಿನ್ನ ಬಾಳನ್ನೂ ಹಾಳು ಮಾಡಲು ನನಗಿಷ್ಟವಿಲ್ಲ."

"ನಾನು ಅದನ್ನೆಲ್ಲಾ ಕಷ್ಟವೆಂದು ಪರಿಗಣಿಸಿದ್ದರೆ ತಾನೇ. ನನ್ನ ಮನವೊಲಿದ ವ್ಯಕ್ತಿಯನ್ನು ಕೈಹಿಡಿಯುವುದರಲ್ಲಿ ನನ್ನ ಜೀವನದ ಸಿದ್ಧಿ ಯಿದೆಯೆಂದು ನಂಬಿದ್ದೇನೆ. ಅದಕ್ಕಾಗಿ ಎಷ್ಟೇ ಎಡರುತೊಡರುಗಳು ಬಂದರೂ ಅನುಭವಿಸಲು ಸಿದ್ಧಳಾಗಿದ್ದೇನೆ. ಇಷ್ಟು ದಿನವೂ ವಿವಾಹವಾ ಗದೇ ನನ್ನ ಆದರ್ಶಕ್ಕಾಗಿ ಸಂತತವಾಗಿ ಹೋರಾಡುತ್ತಿರುವುದೇ ಅದಕ್ಕೆ ನಿದರ್ಶನ. ಅದಕ್ಕಿಂತಲೂ ಹೆಚ್ಚಿನ ಮಾಹಿತಿ ನಾನೀಗಲೇ ದೊರಕಿಸಿ

ಕೊಡಲಾರೆ. ಮುಂದೆ ನಾವಿಬ್ಬರೂ ಜೀವನರಂಗದಲ್ಲಿ ಕಾಲಿಟ್ಟಾಗ ಅದು ನಿಮಗೆ ವೇದ್ಯವಾಗುತ್ತೆ. ಈಗಲಾದರೂ ನನ್ನ ಮನಸ್ಸನ್ನು ಅರ್ಥಮಾಡಿಕೊಂಡಿರಾ ಹೇಳಿ."

"ಅರ್ಥಮಾಡಿಕೊಂಡೇ ಅಹಲ್ಯಾ."

"ಹಾಗಾದರೆ ನಿಮ್ಮ ಉತ್ತರವೇನು ?"

"ನನ್ನನ್ನು ದಯವಿಟ್ಟು ಕ್ಷಮಿಸುವಿಯಾ ?"

"ಛೆ ! ಛೆ!! ನಾನು ನಿಮ್ಮನ್ನು ಕ್ಷಮಿಸುವುದೆಂದರೇನು."

"ಹೌದು. ನಿನ್ನ ವಿಷಯದಲ್ಲಿ ನಾನು ಅಪರಾಧಿ."

"ಅದು ಹೇಗೆ ಹೇಳುತ್ತೀರಿ ?"

"ನಿನ್ನ ಕೈಹಿಡಿಯುವ ಪುಣ್ಯ ನನಗಿಲ್ಲ ಅಹಲ್ಯಾ. ನಾನು ಆಗಲೇ ಮಾತು ಕೊಟ್ಟುಬಿಟ್ಟಿದ್ದೇನೆ. ನನ್ನ ವಿವಾಹ ಬೇರೊಬ್ಬರೊಡನೆ ಆಗಲಿದೆ."

ಅಹಲ್ಯೆಯ ತಲೆಯ ಮೇಲೆ ದೊಡ್ಡ ಸಿಡಿಲು ಬಡಿದಂತಾಯಿತು. ಅವಳು ಕ್ಷಣಕಾಲ ಚೇತರಿಸಿಕೊಂಡು ಕೇಳಿದಳು :

"ನಿಜ ಹೇಳುತ್ತಿದ್ದೀರಾ ?"

"ಹೌದು."

"ಯಾರೊಂದಿಗೆ ?"

"ಚಂದ್ರವದನೆಯೊಂದಿಗೆ."

"ಚಂದ್ರವದನೆಯೆಂದರೆ ಯಾರು !"

"ಈಗ ಕಾಲೇಜಿನಲ್ಲಿ ನನ್ನ ಸಹಪಾಠಿ. ಮುಂದೆ ನನ್ನ ಜೀವನದ ಸಂಗಾತಿ."

"ಅಂತೂ ನನಗೆ ಮೋಸ ಮಾಡಿದಿರಿ. ನಿಮ್ಮನ್ನೇ ನಂಬಿದ್ದವಳನ್ನು ನಡುನೀರಿನಲ್ಲಿ ಕೈಬಿಟ್ಟಿರಿ."

ಅಹಲ್ಯೆ ಬಿಕ್ಕಿ ಬಿಕ್ಕಿ ಅಳತೊಡಗಿದಳು. ಶ್ರೀಧರ ಅವಳಿಗೆ ಸಮಾಧಾನ ಹೇಳುವ ಬಗೆ ಹರಿಯದೆ ದಿಗ್ಭ್ರಮೆಗೊಂಡು ನಿಂತುಬಿಟ್ಟ. 'ಅಹಲ್ಯಾ.... ಅಹಲ್ಯಾ' ಎಂದು ಸುಶೀಲಮ್ಮ ಒಳಗಿಂದ ಕೂಗಿಕೊಳ್ಳುತ್ತಿದ್ದರು. ಅಹಲ್ಯೆ ಕಣ್ಣೊರಿಸಿಕೊಳ್ಳುತ್ತ ಮನೆಯೊಳಕ್ಕೆ ಓಡಿದಳು.

## ೩೬

ಮರುದಿನ ಬೆಳಿಗ್ಗೆ ಸುಬ್ಬಣ್ಣ ಹೆಂಡತಿಯನ್ನು ಆಸ್ಪತ್ರೆಗೆ ಕರೆದು ಕೊಂಡು ಹೋದರು. ಮೊದಲು ಎಕ್ಸ್‌ರೇ ವಾರ್ಡಿಗೆ ಹೋಗಿ ಫೋಟೋ ತೆಗೆದುಕೊಂಡು ದೊಡ್ಡ ಡಾಕ್ಟರನ್ನು ನೋಡಲು ಹೋದರು. ಡಾಕ್ಟರ ಭೇಟಿಯಾಗಲು ಒಂದು ಗಂಟೆ ಕಾಯಬೇಕಾಯಿತು. ಕಡೆಗೆ ಅವರು ಸುಬ್ಬಣ್ಣನವರನ್ನು ಕರೆಸಿಕೊಂಡರು. ಅವರು ತಂದಿದ್ದ ಎಕ್ಸ್‌ರೇ ಫೋಟೋ ಸ್ವಲ್ಪ ಹೊತ್ತು ನೋಡಿದರು. ನೋಡುತ್ತಿದ್ದ ಹಾಗೆಯೇ ಅವರ ಮುಖ ಕಳೆಗುಂದಿತು. ಸುಬ್ಬಣ್ಣನವರನ್ನು ಸ್ವಲ್ಪ ದೂರ ಕರೆದುಕೊಂಡು ಹೋಗಿ ಅವರ ಕಿವಿಯಲ್ಲಿ 'ನಿಮ್ಮ ವೈಫ್‌ಗೆ ಟಿ.ಬಿ. ಡೆವಲಪ್ ಆಗಿಹೋಗಿದೆ. ಈ ಮೊದಲೇ ನೀವು ಬಂದು ತೋರಿಸಬೇಕಾಗಿತ್ತು. ಲಂಗ್ಸ್ ಅಫೆಕ್ಟ್ ಆಗಿ ಹೋಗಿದೆ. ಸ್ಯಾನಿಟೋರಿಯಂ ಡಾಕ್ಟರಿಗೆ ಕಾಗದಾ ಬರೆದುಕೊಡ್ತೀನಿ. ಈಗಲೇ ಕರಕೊಂಡು ಹೋಗಿ ನಿಮ್ಮ ವೈಫ್‌ನ ಅಡ್ಮಿಟ್ ಮಾಡಿಬಿಡಿ." ಡಾಕ್ಟರ ಬಾಯಲ್ಲಿ ಬಂದ ಟಿ. ಬಿ. ಎಂಬ ಶಬ್ದ ಕೇಳಿದಕೂಡಲೇ ಸುಬ್ಬಣ್ಣ ನವರ ಜಂಘಾಬಲ ಉಡುಗಿಹೋದಂತಾಯಿತು.

"ನನ್ನ ವೈಫ್ ಕಂಡೀಷನ್ನು ಬಹಳ ಕ್ರಾನಿಕ್ ಆಗಿದೆಯೇ ಡಾಕ್ಟರ್."

"ಹೌದು ಮಿ|| ಸುಬ್ಬಣ್ಣ".

"ಪ್ರಾಣಭಯವಿಲ್ಲವಲ್ಲಾ".

"ನಾವು ಹೇಗೆ ಹೇಳೋಕ್ಕಾಗತ್ತೇ. ಟಿ. ಬಿ. ಕೇಸು ಹೀಗೇಂತ ಹೇಳೋ ಕ್ಕಾಗೋಲ್ಲ. ಮೊದಲು ಟ್ರೀಟ್‌ಮೆಂಟ್ ಕೊಡಿಸಿ. ನಿಮ್ಮ ಅದೃಷ್ಟವಿದ್ದರೆ ಗುಣವಾದರೂ ಆಗಬಹುದು."

"ಅಷ್ಟೇನೇ ಡಾಕ್ಟರ್."

"ಹೌದು. ಅದಕ್ಕಿಂತ ಹೆಚ್ಚಾಗಿ ನಾನೇನೂ ಹೇಳಲು ಸಾಧ್ಯವಿಲ್ಲ."

"ನಮಸ್ಕಾರಾ ಡಾಕ್ಟರ್. ನಾನು ಬರ್ತೀನಿ."

"ನಮಸ್ಕಾರ."

ಡಾಕ್ಟರು ತಮ್ಮ ಕೆಲಸದ ಮೇಲೆ ಹೊರಟುಹೋದರು. ಸುಬ್ಬಣ್ಣ ಹೆಜ್ಜೆ ಮೋರೆ ಹಾಕಿಕೊಂಡು ತಮ್ಮ ಹೆಂಡತಿಯಿದ್ದಲ್ಲಿಗೆ ಹೋದರು.

"ಡಾಕ್ಟ್ರು ಎಕ್ಸ್‌ರೇ ಫೋಟೋ ನೋಡಿ ಏನು ಹೇಳಿದರೂಂದ್ರೆ."

ಭಾಗ್ಯಮ್ಮ ಕೇಳಿದರು.

"ಸ್ವಲ್ಪ ದಿನ ನಿನ್ನನ್ನ ಆಸ್ಪತ್ರೇಲೇಬಿಟ್ಟಿರಬೇಕೆಂದು ಹೇಳಿದರು. ಇರ್ತೀಯಾ ತಾನೇ."

"ಆಸ್ಪತ್ರೇಲಿ ಹೇಗೇಂದ್ರೆ ಇರೋದು. ಮನೇಲೆ ಇದ್ದು ವಾಸೀಮಾಡಿ ಕೊಳ್ಳೋಕ್ಕಾಗೋಲ್ವೇ."

"ಅಯ್ಯೋ ಹುಚ್ಚೀ. ಮನೇಲಿದ್ದು ವಾಸೀ ಮಾಡಿಕೊಂಡದ್ದಾಯಿ ತಲ್ಲಾ. ನಡೀ ಮನೆಗೆ ಹೋಗೋಣ. ಹೊತ್ತಾಯ್ತು. ಆಮೇಲೆ ಯೋಚನೆ ಮಾಡೋಣ."

ಸುಬ್ಬಣ್ಣ ಗಾಡೀ ಗೊತ್ತುಮಾಡಿ ಮನೆಗೆ ಹೊರಟರು.

ಸಂಜೆ ಐದಕ್ಕೆ ಸರಿಯಾಗಿ ಶ್ರೀಧರ ಬಂದ. ಸುಬ್ಬಣ್ಣ ಮಗನಿಗೆ ಎಲ್ಲ ವಿಷಯಗಳನ್ನೂ ತಿಳಿಸಿದರು. ಕೇಳಿ ಅವನಿಗೆ ಬಹಳ ದುಃಖವಾಯಿತು. ಮರುದಿನ ಬೆಳಿಗ್ಗೆ ಭಾಗ್ಯಮ್ಮನನ್ನು ಸ್ಯಾನಿಟೋರಿಯಮ್ಮಿಗೆ ಸೇರಿಸಿಬಿಡುವು ದೆಂದು ತಂದೇ ಮಗ ತೀರ್ಮಾನಿಸಿಕೊಂಡರು.

ರಾತ್ರಿ ಊಟಾ ಕೆಲಸವಾದ ಮೇಲೆ ಸುಶೀಲಮ್ಮ ಭಾಗ್ಯಮ್ಮನ ಹಾಸಿ ಗೆಯ ಹತ್ತಿರ ಬಂದು ಕೂತರು,

"ಏನೋ ಊರಿಗೆ ಬಂದ್ರಿ. ಬಂದ ಹಾಗೇ ಸುಖವಾಗಿ ಊರಿಗೆ ಹಿಂದಿರುಗುವುದಕ್ಕಿಲ್ಲದೆ ನೀವು ಆಸ್ಪತ್ರೆಗೆ ಸೇರೋ ಹಾಗಾಯಿತಲ್ಲಾ ಭಾಗ್ಯಮ್ಮ"ಎನ್ನುತ್ತಾ ಸುಶೀಲಮ್ಮ ಕಣ್ಣೀರು ತಂದುಕೊಂಡರು.

"ನೀವು ಕಣ್ಣೀರು ಹಾಕಬೇಡೀ ಸುಶೀಲಮ್ಮ. ಎಲ್ಲಾ ನಾವು ಕೇಳಿ ಕೊಂಡು ಬಂದಿರೋ ಪ್ರಾಪ್ತಿ ಅಷ್ಟೆ. ನನಗಿನ್ನೇನೂ ವ್ಯಸನವಿಲ್ಲ. ನಾನು ಸಾಯೋದಕ್ಕೆ ಕಿಂಚಿತ್ತಾದರೂ ಭಯಪಡುತ್ತಿಲ್ಲ. ನಾನಿನ್ನು ಬದುಕಿದ್ದು ತಾನೇ ಏನು ಮಾಡಬೇಕಾಗಿದೆ. ನನ್ನ ಕಣ್ಣೆದುರಿನಲ್ಲೇ ನಿಮ್ಮ ಮಗಳ ತಲೇಮೇಲೆ ನಾಲ್ಕು ಮಂತ್ರಾಕ್ಷತೇ ಕಾಳು ಬೀಳಲಿಲ್ಲನಲ್ಲಾಂತ ನನಗೆ ಕೊರಗು ಸುಶೀಲಮ್ಮ. ಪಾಪ ಮೊದಲಿಂದಲೂ ನೀವು ನಮ್ಮ ಹುಡುಗ ನನ್ನೇ ನೆಚ್ಚಿಕೊಂಡಿದ್ದಿರಿ. ಏನು ಮಾಡೋದು. ಅವನು ಯಾರ ಮಾತೂ ಕೇಳಲಿಲ್ಲ."

"ನೀವಿದೆಲ್ಲಾ ಮನಸ್ಸಿಗೆ ಹಚ್ಚಿಕೊಳ್ಳ ಬೇಡೀ ಭಾಗ್ಯಮ್ಮ. ಮೊದಲು ನಿಮಗೆ ಬಂದಿರೋ ಖಾಯಿಲೇ ವಾಸಿಯಾಗಲಿ ಸದ್ಯ."

"ನೀವಿನ್ನು ಹೋಗಿ ಮಲಗೀ ಸುಶೀಲಮ್ಮ".

"ಸುಶೀಲಮ್ಮ ಎದ್ದು ಹೋದರು. ಗಂಟಲು ಬಿರಿದು ಹೋಗುವಂತೆ ಭಾಗ್ಯಮ್ಮ ಕೆಮ್ಮುತ್ತಾ, ಹಾಸಿಗೆಯ ಮೇಲೆ ಹೊರಳಾಡತೊಡಗಿದರು.

*　　　*　　　*

ಭಾಗ್ಯಮ್ಮನನ್ನು ಸ್ಯಾನಿಟೋರಿಯಂಗೆ ಅಡ್ಮಿಟ್ ಮಾಡಲಾಯಿತು. ಸುಬ್ಬಣ್ಣ ತಮ್ಮ ದೇಹಶ್ರಮವನ್ನು ಕಿಂಚಿತ್ತಾದರೂ ಲೆಕ್ಕಿಸದೆ ದಿನಕ್ಕೆ ನಾಲ್ಕು ಸಲ ಆಸ್ಪತ್ರೆಗೆ ಹೋಗಿ ಬರುತ್ತಿದ್ದರು. ಮನೆಯಿಂದಲೇ ಊಟಾ ತಿಂಡೀ ತೆಗೆದುಕೊಂಡುಹೋಗಿ ಕೊಡುತ್ತಿದ್ದರು. ಇಡೀ ದಿನವೆಲ್ಲಾ ತಮ್ಮ ಹೆಂಡತಿಯ ಶುಶ್ರೂಷೆಯಲ್ಲಿ ನಿರತರಾಗಿದ್ದು ರಾತ್ರಿ ಮಲಗಲು ಮಾತ್ರ ಮನೆಗೆ ಹೋಗುತ್ತಿದ್ದರು. ಕೆಲವು ದಿನಗಳಲ್ಲೇ ಮನೆಯಿಂದ ಊಟಾ ತಿಂಡೀ ತೆಗೆದುಕೊಂಡು ಹೋಗುವ ಕಷ್ಟವೂ ಸುಬ್ಬಣ್ಣನವರಿಗೆ ತಪ್ಪಿ ಹೋಯಿತು. ದಿನಕ್ರಮೇಣ ಭಾಗ್ಯಮ್ಮನಿಗೆ ಅನ್ನ ಸೇರದಾಯಿತು. ಆಸ್ಪತ್ರೆಯಲ್ಲಿ ಕೊಡುತ್ತಿದ್ದ ಹಾಲೇ ಕುಡಿಯುತ್ತಿದ್ದರು. ಬರುಬರುತ್ತಾ ಆ ಹಾಲೂ ಅವರಿಗೆ ವಿಷವಾಗಿ ಪರಿಣಮಿಸಿತು. ದಿನದಿನಕ್ಕೂ ಉಲ್ಬಣವಾಗುತ್ತಿರುವ ಹೆಂಡತಿಯ ದೇಹಸ್ಥಿತಿಯ ಬಗ್ಗೆ ಸುಬ್ಬಣ್ಣ ಬಹಳ ಕಳವಳಕ್ಕೀಡಾದರು. ಅಂದು ಕೃಷ್ಣರಾಜೇಂದ್ರ ಆಸ್ಪತ್ರೆಯ ದೊಡ್ಡ ಡಾಕ್ಟರು ತಮ್ಮನ್ನು ಕುರಿತು, 'ನಿಮ್ಮ ಅದೃಷ್ಟ ಚೆನ್ನಾಗಿದ್ದರೆ ಗುಣವಾದರೂ ಆಗಬಹುದು' ಎಂದು ಹೇಳಿದ್ದನ್ನು ನೆನೆದು ಇದ್ದುದರಲ್ಲೇ ಧೈರ್ಯ ತಂದುಕೊಂಡರು.

ಶ್ರೀಧರ ಪ್ರತಿದಿನ ಸಂಜೆ ಕಾಲೇಜು ಮುಗಿಸಿಕೊಂಡು ಹಾಗೇ ಸ್ಯಾನಿಟೋರಿಯಂಗೆ ಹೋಗಿ ತಾಯಿಯನ್ನು ನೋಡಿಕೊಂಡು ಬರುತ್ತಿದ್ದ. ವಾರಕ್ಕೆರಡುಸಲವಾದರೂ ಸುಶೀಲಮ್ಮನೂ ಅಹಲ್ಯೆಯೂ ಆಸ್ಪತ್ರೆಗೆ ಹೋಗಿ ಭಾಗ್ಯಮ್ಮನನ್ನು ನೋಡಿಕೊಂಡು ಬರುತ್ತಿದ್ದರು. ಶೇಷಗಿರಿರಾಯರು ಪ್ರತಿ ಭಾನುವಾರವೂ ತಪ್ಪದೆ ಆಸ್ಪತ್ರೆಗೆ ಹೋಗಿ ಬರುತ್ತಿದ್ದರು.

ಭಾಗ್ಯಮ್ಮ ಆಸ್ಪತ್ರೆಗೆ ಸೇರಿ ತಿಂಗಳಾಗಿತ್ತು. ಆದರೆ ಗುಣವೇನೋ ಲವಲೇಶವಾದರೂ ಕಂಡುಬರಲಿಲ್ಲ. ದಿನದಿನಕ್ಕೂ ಅವರು ಕ್ಷೀಣಿಸುತ್ತಾ

ಬಂದರು. ಕಣ್ಣುಗಳು ಗುಳಿಬಿದ್ದವು. ಕೆನ್ನೆಗಳು ಬತ್ತಿಹೋದವು. ತಲೆ ಗೂದಲು ಉದುರಲಾರಂಭಿಸಿತು. ಎಲುಬಿನ ಹಂದರವಾಗಿ ಹೋದರು. ಅವರ ದೇಹದಲ್ಲಿ ಅಸ್ಥಿ ಚರ್ಮ ಮಾತ್ರ ಉಳಿಯಿತು. ಡಾಕ್ಟರುಗಳು ತಮ ಕೈಲಾದ ಚಿಕಿತ್ಸೆಗಳನ್ನೆಲ್ಲಾ ಮಾಡಿದರು. ಆದರೆ ಎಲ್ಲವೂ ನಿರರ್ಥಕವಾದವು.

* * * *

ಸಂಜೆ ಆರರಸಮಯ. ಸುಬ್ಬಣ್ಣ ತಮ್ಮ ಹೆಂಡತಿಯ ಪಕ್ಕದಲ್ಲೇ ಕುಳಿತಿದ್ದರು. ಬೆಳಿಗ್ಗೆಯಿಂದ ಎಲ್ಲಾದರೂ ಎಂಟು ಹತ್ತುಸಲ ಭಾಗ್ಯಮ್ಮನಿಗೆ ರಕ್ತ ರಕ್ತವಾಗಿ ವಾಂತಿಯಾಗಿತ್ತು. ಬಾಯಿಮುಚ್ಚದೇ ಕೆಮ್ಮುತ್ತಿದ್ದರು. ಡಾಕ್ಟರು ಬಂದು ಒಂದು ಇಂಜಕ್ಷನ್ ಚುಚ್ಚಿ ಹೋಗಿದ್ದರು. ಮೊದಲೇ ಜರ್ಝರಿತವಾಗಿ ಹೋಗಿದ್ದ ಶರೀರಕ್ಕೆ ಡಾಕ್ಟರುಗಳು ತಮ್ಮ ಇಂಜಕ್ಷನ್ನು ಗಳಿಂದ ಮತ್ತಷ್ಟು ಹಿಂಸೆಯುಂಟುಮಾಡುತ್ತಿದ್ದರು.

ಭಾಗ್ಯಮ್ಮ ಎಲ್ಲ ನೋವನ್ನೂ ನುಂಗಿಕೊಳ್ಳುತ್ತಿದ್ದರು.

'ಶ್ರೀಧರಾ ಇನ್ನೂ ಬರಲಿಲ್ವೇ' ಎಂದು ಪದೇಪದೇ ತಮ್ಮ ಯಜಮಾನ ರನ್ನು ಕೇಳುತ್ತಿದ್ದರು.

"ಇನ್ನೇನು ಬರೋಹೊತ್ತು. ದಿನಾ ಇಷ್ಟುಹೊತ್ತಿಗೆ ಬಂದು ಬಿಡು ತ್ತಿದ್ದ" ಎಂದು ಹೆಂಡತಿಗೆ ಸಮಾಧಾನ ಹೇಳುತ್ತಾ ಕೂತಿದ್ದರು ಸುಬ್ಬಣ್ಣ. ಸ್ವಲ್ಪ ಹೊತ್ತಿಗೆಲ್ಲಾ ಶ್ರೀಧರ ಬಂದ. ಅವನನ್ನು ನೋಡಿದ ಕೂಡಲೇ ಸುಬ್ಬಣ್ಣನವರ ಮುಖ ಅರಳಿತು.

"ನಿನ್ನ ಮಗ ಬಂದಕಣೇ" ಎಂದು ಹೆಂಡತಿಗೆ ತಿಳಿಸಿದರು.

"ಎಲ್ಲಿ........" ಎನ್ನುತ್ತಾ ಭಾಗ್ಯಮ್ಮ ಎದ್ದು ಕೂತುಬಿಟ್ಟರು.

"ಏಳಬೇಡ ಮಲಕ್ಕೋ. ಕೂಡಲು ಕೂಡಾ ನಿನಗೆ ತ್ರಾಣವಿಲ್ಲ."

"ಅಯ್ಯೋ ನಾನು ಕೂತುಕೊಳ್ಳಲಾರೇಂದ್ರೆ. ಬಹಳ ಸಂಕಟ ವಾಗುತ್ತೆ" ಎನ್ನುತ್ತಾ ಭಾಗ್ಯಮ್ಮ ಮಲಗಿಬಿಟ್ಟರು. ಶ್ರೀಧರ ತನ್ನ ತಾಯಿಯ ಪಕ್ಕದಲ್ಲಿದ್ದ ಲಾಕರ್ ಮೇಲೆ ಹೋಗಿ ಕುಳಿತ. ಭಾಗ್ಯಮ್ಮ ಮಗನ ಹಸ್ತವನ್ನು ಕೈಲಿ ಹಿಡಿದುಕೊಂಡರು.

"ಯಾಕಪ್ಪಾ ಇಷ್ಟು ಹೊತ್ತಾಯ್ತು ಬರೋದು."

"ಸ್ವಲ್ಪ ಕೆಲಸವಿತ್ತಮ್ಮಾ. ನೀನು ಎದುರುನೋಡ್ತಿರ್ತೀಯಾಂತ ನನ್ನ ಸ್ನೇಹಿತನ ಸೈಕಲ್ ತೆಗೆದುಕೊಂಡು ಬಂದೆ."

"ಶ್ರೀಧರಾ."

"ಏನಮ್ಮಾ"

"ನನಗೆ ಬಂದಿರೋ ಖಾಯಿಲೇಲಿ ನಾನು ಬದುಕೋದು ಅನುಮಾನ."

"ಛೆ! ನೀನು ಹಾಗೆಲ್ಲಾ ಅನ್ನಬೇಡಮ್ಮಾ." ಈಗ ನಿನಗೇನಾಗಿದೆ. ನಿನಗೆ ಖಂಡಿತ ವಾಸಿಯಾಗುತ್ತೆ."

"ಅಯ್ಯೋ ನನಗೆ ವಾಸಿಯಾಗೋ ರೋಗ ಬಂದಿದೆಯೋ ಶ್ರೀಧರಾ. ನಿನಗೆ ಭ್ರಾಂತು. ನನ್ನದೊಂದು ಮಾತು ಕೇಳ್ತೀಯಾ."

"ಏನು ಹೇಳಮ್ಮಾ"

"ನಾನು ಹೆಚ್ಚು ದಿನ ಬದುಕೋಲ್ಲ. ಈವತ್ತೋ ನಾಳೆಯೋ ಕಣ್ಮುಚ್ಚಿಕೊಳ್ತೀನಿ. ನಾನು ಬದುಕಿದ್ದಾಗಂತೂ ನೀನು ನನ್ನ ಆಶೆ ನೆರವೇರಿಸಲಿಲ್ಲ. ನಾನು ಸತ್ತಮೇಲಾದರೂ ನನ್ನ ಮಾತು ನಡಸ್ತೀಯಾ ಹೇಳು."

"ತಾಯಿಯ ಮಾತು ಕೇಳಿ ಶ್ರೀಧರನ ಕರುಳು ಕತ್ತರಿಸಿಹೋಯಿತು ದುಃಖ ಉಕ್ಕಿಬಂತು. ಬಿಕ್ಕಿಬಿಕ್ಕಿ ಅಳಲಾರಂಭಿಸಿದ.

"ಅಳಬೇಡಾ ಮಗೂ ಅಳಬೇಡ. ಈಗಲೂ ಮಿಂಚಿಹೋದದ್ದೇನೂ ಇಲ್ಲ. ನಿನ್ನ ಮಾತು ಖಂಡಿತ ನಡಸ್ತೀನೀಂತ ನನಗೆ ಭಾಷೆಕೊಡು. ನಾನು ನಿಶ್ಚಿಂತೆಯಾಗಿ ಪ್ರಾಣ ಬಿಡ್ತೀನಿ."

"ನಿನ್ನ ಮನಸ್ಸಲ್ಲಿರೋದನ್ನ ತಿಳಿಸಮ್ಮಾ. ತಪ್ಪದೇ ನೆರವೇರಿಸ್ತೀನಿ."

"ಹಾಗಾದನೆ ಹೇಳಲೇ ಶ್ರೀಧರಾ."

"ಹೇಳಮ್ಮ"

"ನೀನು ಅ....ಹ....ಲ್ಯ....ಯನ್ನ ಮದುವೆಯಾಗಬೇಕು! ನೀನು ಖಂಡಿತ ಅವಳ ಕೈ ಬಿಡಕೂಡದು!!"

"ಆ....ಗ....ಲಿ....ಮ್ಮ"!! ಶ್ರೀಧರ ಹಿಂದೆ ಮುಂದೆ ಯೋಚಿಸದೆ ತನ್ನ ತಾಯಿಗೆ ವಚನವಿತ್ತ. ಕೂಡಲೇ ಭಾಗ್ಯಮ್ಮನ ನಿಸ್ತೇಜವಾದ ಮುಖದಲ್ಲೂ ಸಂತೋಷದ ಕಿರುನಗೆಯೊಂದು ಮಿಂಚಿತು.

"ಶ್ರೀಧರಾ ನಾನಿನ್ನು ನಿಶ್ಚಿಂತೆಯಾಗಿ ಪ್ರಾಣಬಿಡ್ತೀನಿ. ನನ್ನ ಕಣ್ಣೆದುರಲ್ಲೇ ನಿನ್ನ ಮದುವೆಯಾಗಿದ್ದಿದ್ದರೆ ನೋಡಿ ಅದೆಷ್ಟು ಸಂತೋಷಪಡುತ್ತಿದ್ದೆನೋ. ಆದರೆ ಆ ಭಾಗ್ಯ ನನ್ನ ಹಣೇಲಿ ಬರೀಲಿಲ್ಲ."

"ಅಮ್ಮಾ ನಾನು ಪಾಪಿ....... ಹೆತ್ತ ತಾಯಿಯ ಹೊಟ್ಟೆಯುರಿಸಿದೆ. ನನ್ನನ್ನ ಕ್ಷಮಿಸಮ್ಮ."

"ಕ್ಷಮಿಸಿದ್ದೀನಿ ಮಗೂ. ನನ್ನ ಅಂತ್ಯ ಕೋರಿಕೆಯನ್ನ ಖಂಡಿತ ಈಡೇರಿಸ್ತೀಯಾ ತಾನೇ."

"ಖಂಡಿತ ನೆರವೇರಿಸ್ತೀನಮ್ಮ."

"ಎಲ್ಲಾದ್ರೂ ನೂರುವರ್ಷ ಆಯಸ್ಸು ಹಾಕಿಕೊಂಡು ಸುಖವಾಗಿರು ಮಗೂ. ನನಗೆ ನಮ್ಮ ಕಮಲೂ ಬೇರೆಯಿಲ್ಲ. ಅಹಲ್ಯೆ ಬೇರೆಯಲ್ಲ. ಬಂಗಾರದಂಥಾ ಹುಡುಗಿ ಅನುವಾಗಿ ಸಂಸಾರ ಮಾಡಿಕೊಂಡಿರ್ತಾಳೆ."

"ಅಮ್ಮಾ."

"ಏನುಮಗೂ."

"ಏಳೇಳು ಜನ್ಮಕ್ಕೂ ನೀನೇ ನನ್ನ ತಾಯಾಗಿರಮ್ಮಾ. ನಿನ್ನಂತಹ ತಾಯಿ ಎಲ್ಲರಿಗೂ ಲಭ್ಯವಿಲ್ಲ."

"ಅಯ್ಯೋ ಹುಚ್ಚು ಹುಡುಗಾ ಹೋಗು."

ಸ್ವಲ್ಪ ಹೊತ್ತಿಗೆಲ್ಲಾ ಭಾಗ್ಯಮ್ಮನಿಗೆ ಅಸಾಧ್ಯ ಕೆಮ್ಮು ಬಂದುಬಿಟ್ಟಿತು. ಶ್ರೀಧರ ಎದ್ದು ಪಕ್ಕದಲ್ಲಿದ್ದ ಬೇಸಿನ್ನನ್ನು ತನ್ನ ತಾಯಿಯ ಬಾಯ ಹತ್ತಿರ ಹಿಡಿದುಕೊಂಡ. ಭಾಗ್ಯಮ್ಮ ತಡೆಬಡೆಯಿಲ್ಲದೆ ರಕ್ತರಕ್ತವಾಗಿ ವಾಂತಿಮಾಡತೊಡಗಿದರು. ಶ್ರೀಧರ ಆ ದೃಶ್ಯವನ್ನು ನೋಡಲಾರದೆ ಕಣ್ಣು ಮುಚ್ಚಿಕೊಂಡ. ಭಾಗ್ಯಮ್ಮನಿಗೆ ಮೇಲುಸಿರು ಎಳೆಯಲಾರಂಭವಾಯಿತು. ಕಣ್ಣಾಲಿಗಳು ಗಿರಗಿರನೆ ಸುತ್ತತೊಡಗಿದವು.

"ಮಗೂ."

"ಏನಮ್ಮಾ."

"ನಿಮ್ಮಣ್ಣಾ ಎಲ್ಲಿ."

'ಇಲ್ಲೇಇದ್ದೀನಿ ಕಣೇ' ಎನ್ನುತ್ತಾ ಸುಬ್ಬಣ್ಣ ತಮ್ಮ ಹೆಂಡತಿಯ ಹತ್ತಿರ ಬಂದು ನಿಂತರು. ಭಾಗ್ಯಮ್ಮ ತಮ್ಮ ಯಜಮಾನರ ಕೈಯನ್ನು ತೆಗೆದು

ಕೊಂಡು ಹೋಗಿ ತಮ್ಮ ಕಣ್ಣಿಗೊತ್ತಿಕೊಂಡರು. ತಮ್ಮ ಹಣೇಮುಟ್ಟಿ ನೋಡಿಕೊಳ್ಳುತ್ತಾ ಅದು ಬರಿದಾಗಿರುವುದನ್ನು ತಿಳಿದು 'ಲಾಕರ್‌ನಲ್ಲಿ ಕುಂಕುಮದ ಭರಣಿಯಿದೆ. ಸ್ವಲ್ಪ ಎತ್ತಿಕೊಡಿ, ಕುಂಕುಮ ಹಚ್ಚಿಕೊಳ್ತೇನೆ' ಎಂದರು. ಸುಬ್ಬಣ್ಣ ಕುಂಕುಮದ ಭರಣಿಯನ್ನು ತಮ್ಮ ಹೆಂಡತಿಯ ಮುಂದೆ ನೀಡಿದರು.

"ನಿಮ್ಮ ಕೈಯಲ್ಲೇ ಹಚ್ಚಿ. ಮುತ್ತೈದೇ ಸಾವು ನನ್ನ ಹಣೇಲಿ ಬರೆದಿತ್ತು. ನಾನು ನಿಜವಾಗಿಯೂ ಪುಣ್ಯಶಾಲಿ........ನಾನು ಹೋ....ಗಿ.... ಬ....ರ್ತೀ....ನಿ."

ಸುಬ್ಬಣ್ಣ ಧಾರಾಕಾರವಾಗಿ ಕಣ್ಣೀರು ಸುರಿಸುತ್ತಾ ತಮ್ಮ ಹೆಂಡತಿಯ ಹಣೆಯಲ್ಲಿ ದೊಡ್ಡದಾಗಿ ಕುಂಕುಮ ಹಚ್ಚಿದರು. ಭಾಗ್ಯಮ್ಮನ ಕ್ಷೀಣವಾದ ಮುಖದಲ್ಲಿ ತೃಪ್ತಿಯ ಮುಗುಳ್ನಗೆ ಮೂಡಿತು. ಕಡೆಯವರೆಗೂ ತಮ್ಮ ಯಜಮಾನರ ಕೈಯನ್ನು ಭದ್ರವಾಗಿ ಹಿಡಿದೇ ಇದ್ದರು ಭಾಗ್ಯಮ್ಮ.

ಶ್ರೀಧರ ಬಿಕ್ಕಿಬಿಕ್ಕಿ ಅಳತೊಡಗಿದ. 'ಅಳಬೇಡ ಮಗೂ. ನೀನು.... ಅ....ಹ....ಲ್ಯೆ....ಯ....ಕ್ಕೈ....ಬಿ....ಡ....ಬೇ....ಡ!!' ಎನ್ನುತ್ತಾ ಪಕ್ಕಕ್ಕೆ ಗೋಣು ಚೆಲ್ಲಿದರು. ಇದ್ದಕ್ಕಿದ್ದ ಹಾಗೆಯೇ ಬಿಕ್ಕಳಿಕೆ ಶುರುವಾಗಿಹೋಯಿತು. ಕೂಡಲೇ ನೊರೆನೊರೆಯಾಗಿ ರಕ್ತ ಮಿಶ್ರಿತವಾದ ಜೊಲ್ಲು ಕಟವಾಯಿಗಳಿಂದ ಕಾಲುವೆಯಾಗಿ ಹರಿಯತೊಡಗಿತು.

ಸುಬ್ಬಣ್ಣನವರೊಂದು ಕಡೆ ಶ್ರೀಧರನೊಂದು ಕಡೆ ಆ ದೃಶ್ಯವನ್ನು ನೋಡಿ ಕಣ್ಣೀರುಸುರಿಸುತ್ತಾ ಪ್ರತಿಮೆಗಳಂತೆ ನಿಂತುಬಿಟ್ಟಿದ್ದರು. ಸ್ವಲ್ಪ ಹೊತ್ತಿಗೆಲ್ಲ ಭಾಗ್ಯಮ್ಮನ ಪ್ರಾಣಪಕ್ಷಿ ಶತಜರ್ಝರಿತವಾಗಿದ್ದ ಅವರ ದೇಹಪಂಜರದಿಂದ ಹಾರಿಹೋಯಿತು.

'ಅಮ್ಮಾ' ಎನ್ನುತ್ತಾ ಶ್ರೀಧರ ತಾಯಿಯ ಶವದ ಮೇಲೆ ಬಿದ್ದು ಗೋಳಾಡತೊಡಗಿದ. 'ಏಕು ಮಗೂ ಅಳಬೇಡ. ಇಬ್ಬರೂ ಈವತ್ತು ಪರದೇಶಿಗಳಾದಿವಿ' ಎನ್ನುತ್ತಾ ಸುಬ್ಬಣ್ಣ ಮಗನನ್ನು ಸಂತೈಸತೊಡಗಿದರು.

---

## ಶ್ರೀ ಟಿ. ಸದಾಶಿವಯ್ಯನವರ ಕೃತಿಗಳು

| | | | | | |
|---|---|---|---|---|---|
| ಸೌಭಾಗ್ಯ | (ನಾಟಕ) | .... | ೦ | ೧೨ | ೦ |
| ಸೊಂಪಿನ ಸಾಗರ | ,, | .... | ೦ | ೮ | ೦ |
| ಭೀಮಸೇನ ಬೇಬಿ | ,, | .... | ೦ | ೫ | ೦ |
| ಶಿವಾಜಿಯ ಬಾಲ್ಯ | ,, | .... | ೦ | ೬ | ೦ |
| ಅಮ್ಮ | ,, | .... | ೦ | ೬ | ೦ |
| ಶಿವಮಂಗಳ | ,, | .... | ೦ | ೮ | ೦ |
| ಜಯ ಶ್ರೀ | ,, | .... | ೧ | ೪ | ೦ |
| ಶಾಂತಿ | ,, | .... | ೧ | ೪ | ೦ |
| ಕನ್ಯಾ ಸೆರೆ | ,, | .... | ೧ | ೦ | ೦ |
| ಮಾಂಗಲ್ಯ | ,, | .... | ೧ | ೪ | ೦ |
| ರಹಸ್ಯ | ,, | .... | ೦ | ೧೨ | ೦ |
| ಸಿಂಹ | ,, | .... | ೦ | ೮ | ೦ |
| ಲೀಲೂಗಂಡ | ,, | .... | ೧ | ೦ | ೦ |
| ಬೃಂದಾವನ | ,, | .... | | | |
| ಉಗಾದಿಯ ಸಡಗರ | ,, | .... | | | |
| ರಾಮ ದರ್ಶನ | ,, | .... | | | |
| ತಂಗಚ್ಚಿ | ,, | .... | | | |
| ಆಮೇಲೆ | ,, | .... | | | |
| ಏಕನಾಥ | ,, | .... | | | |
| ಪ್ರತೀಕ್ಷೆ | (ಕಥೆಗಳು) | .... | | | |
| ಮೈಸೂರು ಹುಲಿ | ,, | .... | | | |
| ಸ್ವಾಮಿ ರಾಮ ತೀರ್ಥ | (ಜೀವನ ಚರಿತ್ರೆ) | .... | | | |
| ರಾಜಶ್ರೀ | (ಕಾದಂಬರಿ) | .... | | | |
| ಮೈಸೂರು ಮಾಣಿಕ್ಯ | | .... | | | |
| ಮಕ್ಕಳೇ ದೇವರು | | .... | | | |

ಆನಂದ್ ಬ್ರದರ್ಸ್, ಪಬ್ಲಿಷರ್ಸ್, ಬೆಂಗಳೂರು-೨.

